


# ಹೊಸತು

ನೆಮ್ಮದಿಯ ನಾಳೆ ನಮ್ಮದು

ಡಿಸೆಂಬರ್ ೨೦೦೫
ಬೆಲೆ : ರೂ. ೧೨

‘ಹೊಸತು ವಾಚಿಕೆ’ ಸಂಪುಟಗಳ ಲೋಕಾರ್ಪಣ

01-01-2006 ಭಾನುವಾರ ಬೆಳಗ್ಗೆ 10.30ಕ್ಕೆ ಯವನಿಕ ಸಭಾಂಗಣ, ಬೆಂಗಳೂರು

# ಹೊಸತು ವಾಚಿಕೆ ಮಾಲಿಕೆ

## ಹದಿನೆಂಟು ಸಂಪುಟಗಳು




ನವಕರ್ನಾಟಕದ

**ಅಪೂರ್ವ** ಕೊಡುಗೆ

೧/೮ ಡೆಮಿ ಆಕಾರದ
೩೧೦೦ ಪುಟಗಳಿಗೂ ಹೆಚ್ಚು
ವಿಚಾರ ಪ್ರಚೋದಕ ಸಾಹಿತ್ಯ ಸಂಗ್ರಹ !

೧೯೯೯ರ ಆಗಸ್ಟ್‌ನಿಂದ ೨೦೦೪ರ ಜುಲೈ
ವರೆಗಿನ ‘ಹೊಸತು’ ೬೦ ಸಂಚಿಕೆಗಳಿಂದ

○ ಆಯ್ದ ಸಂಪಾದಕೀಯ ○ ತಿಳಿವು
○ ವಚನ ಸಾಹಿತ್ಯ ○ ಶಿಕ್ಷಣ ಸಂಸ್ಕೃತಿ
○ ಮಹಿಳೆ ○ ಆರೋಗ್ಯ, ವಿಜ್ಞಾನ
○ ಇತಿಹಾಸ ○ ಪ್ರಚಲಿತ ವಿದ್ಯಮಾನ
○ ವೈಚಾರಿಕ ಲೇಖನಗಳು
○ ಸಾಹಿತ್ಯ ಸಂವಾದ ○ ಸಂದರ್ಶನಗಳು
○ ಕಥೆಗಳು ○ ಪ್ರಬಂಧಗಳು
○ ಕವಿತೆಗಳು, ಇತ್ಯಾದಿ.

ಪ್ರತಿಯೊಂದು ಸಂಪುಟದ ಬೆಲೆ ರೂ. ೭೫
ಹದಿನೆಂಟು ಸಂಪುಟಗಳ ಬೆಲೆ ರೂ. ೧೩೫೦
ಮುಂಗಡ ನೀಡಿ ಕಾಯ್ದಿರಿಸುವವರಿಗೆ
ಪ್ರಕಟಣಪೂರ್ವ ಬೆಲೆ ರೂ. ೯೫೦
(ಅಂಚೆ ವೆಚ್ಚ ರೂ ೫೦ ಪ್ರತ್ಯೇಕ)

**ಉಳಿತಾಯ ರೂ. ೪೦೦**

ರೂ. ೨೦೦ ಮುಂಗಡ ಕಳಿಸಿ ನಿಮ್ಮ ಹೆಸರು ನೋಂದಾಯಿಸಿಕೊಳ್ಳಿ.
ಪ್ರಕಟಣಪೂರ್ವ ರಿಯಾಯಿತಿ ಪಡೆಯಿರಿ.
(ಬಾಕಿ ಹಣವನ್ನು ಪುಸ್ತಕ ಪ್ರಕಟಣೆಗೆ ಮುಂಚೆ ಒಟ್ಟಿಗೆ ಅಥವಾ ಕಂತುಗಳಲ್ಲಿ ನೀಡಿ) ನಿಮ್ಮ ಪ್ರತಿಗಳನ್ನು ಇಂದೇ ಕಾಯ್ದಿರಿಸಿ.

**ಅಮೂಲ್ಯ ಆಕರ ಗ್ರಂಥಗಳನ್ನು ನಿಮ್ಮದಾಗಿಸಿಕೊಳ್ಳಿ**

ವಿವರಗಳಿಗೆ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ೫೧೯೫
ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೨೦೩೫೮೦/೮೧/೮೨

ಶಾಖೆಗಳು : ಬೆಂಗಳೂರು ✆ ೨೨೨೫೧೩೮೨ :: ಮಂಗಳೂರು ✆ ೨೪೪೧೦೧೬ :: ಮೈಸೂರು ✆ ೨೪೨೪೯೯೪ :: ಗುಲಬರ್ಗಾ ✆ ೨೨೪೩೦೨

ಅಧ್ಯಕ್ಷತೆ : ಶ್ರೀ ಚೆನ್ನವೀರ ಕಣವಿ ಅನಾವರಣ : ಪ್ರೊ॥ ಬರಗೂರು ರಾಮಚಂದ್ರಪ್ಪ ಪ್ರಾಸ್ತಾವಿಕ ನುಡಿ : ಡಾ॥ ಜಿ. ರಾಮಕೃಷ್ಣ

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಸ್ಯಾಮ್, ಶ್ರೀಹರಿ, ವೇಲ್, ಇಂದು, ಸೃಜನ್

ಮುಖಚಿತ್ರ : ಟರ್ನ್ ಪಕ್ಷಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಕ**ನ್ನಡವನ್ನು ರಕ್ಷಿಸುವ ಉದ್ದೇಶವಿದೆಯೆಂದು ಸಾರಿಕೊಳ್ಳುವ ಒಂದು ಸಂಸ್ಥೆ ಕನ್ನಡ ಮತ್ತು ಕರ್ನಾಟಕಕ್ಕೆ ಮಸಿ ಬಳಿದು ಕನ್ನಡಿಗರ ಮತ್ತು ಮರಾಠಿ ಜನಗಳ ನಡುವೆ ವೈಮನಸ್ಯವನ್ನು ಬೆಳೆಸುವಂತಹ ಕೆಲಸ ಮಾಡಿದೆ. ಬೆಳಗಾವಿಯ ನಗರಸಭಾಧ್ಯಕ್ಷರ ಮುಖಕ್ಕೆ ಮಸಿ ಬಳಿದು ವೀರರಾದಂತೆ ತೋರ್ಪಡಿಸಿಕೊಂಡ ಈ ಸಂಘದ ಸದಸ್ಯರು ತಮ್ಮ ಭವಿಷ್ಯದ ರಾಜಕೀಯರಂಗವನ್ನು ರೂಪಿಸಿಕೊಳ್ಳುತ್ತಿರುವಂತೆ ತೋರುತ್ತದೆಯೇ ಹೊರತು ನಾಡಿನ ಹಾಗೂ ಗಡಿನಾಡಿನ ರಕ್ಷಣೆಯ ಹೊಣೆ ಹೊತ್ತಿರುವವರಂತೆ ಕಾಣುವುದಿಲ್ಲ. ಗಡಿನಾಡಿನ ಕಾಳಜಿ ಇರುವವರು ಅಲ್ಲಿ ಕಾಳ್ಗಿಚ್ಚು ಹತ್ತುವಂತೆ ಮಾಡಹೊರಡುವುದಿಲ್ಲ. ಬೆಳಗಾವಿ ನಗರದಲ್ಲಿ ಆರಂಭವಾದ ಘರ್ಷಣೆ ಪುಣೆ-ಮುಂಬೈಗಳಿಗೆ ವಿಸ್ತರಿಸುವುದು ಅಸಂಭವವಲ್ಲ. ಬಾಳ ಠಾಕ್ರೆ ಬಣಕ್ಕೆ ಇದೊಂದು ಚಿನ್ನದ ತಟ್ಟೆಯಲ್ಲಿಟ್ಟುಕೊಟ್ಟ ಬಳುವಳಿ. ಬೆಳಗಾವಿ ಹಾಗೂ ಇತರ ಗಡಿನಾಡು ಪ್ರದೇಶಗಳಲ್ಲಿ ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಳ್ಳದೆ ಔದಾಸೀನ್ಯ ತೋರಿಸುತ್ತಲೇ ಬಂದಿರುವ ನಮ್ಮ ಸರ್ಕಾರವು ಪ್ರಕ್ಷುಬ್ಧತೆಯನ್ನು ನಿರ್ಮಿಸುವ ವಾತಾವರಣವನ್ನು ನೀಗಿಸಿಲ್ಲ. ಸರ್ಕಾರವು ಒಪ್ಪಿರುವ ಮಹಾಜನ ಆಯೋಗದ ವರದಿಗೆ ಶಕ್ತಿ ಬರುವುದು ಆ ಪ್ರದೇಶದ ಎಲ್ಲ ಜನರ ವ್ಯಾಪಕ ಬೆಂಬಲದಿಂದ. ಅದನ್ನು ಪಡೆಯಲು ನಾವಿನ್ನೂ ಯಶಸ್ವಿಯಾಗಿಲ್ಲ. ಬೆಳಗಾವಿಯ ಮರಾಠಿ ಜನರನ್ನು ಪ್ರತ್ಯೇಕತೆಯ ಹಾದಿ ತುಳಿಯುವಂತೆ ಪ್ರಚೋದಿಸುವ ಮಹಾರಾಷ್ಟ್ರದ ಸರ್ಕಾರ ಹಾಗೂ ಅಲ್ಲಿಯ ರಾಜಕೀಯ ಪಕ್ಷಗಳು ಸೈದ್ಧಾಂತಿಕ ಚರ್ಚೆಗೆ ಬರುವ ಬದಲು ಕೇವಲ ಭಾವೋದ್ರೇಕದ ಮಾತುಗಳನ್ನಾಡುವ ಪರಿಪಾಠ ಬೆಳೆಸಿಕೊಂಡಿದ್ದಾರೆ. ಈದು ನಮ್ಮ ರಾಜಕೀಯ ಪಕ್ಷಗಳ ಅವಕಾಶವಾದಿತನಕ್ಕೆ ಒಂದು ಪ್ರಬಲ ನಿದರ್ಶನ. ಒಂದು ರಾಷ್ಟ್ರೀಯ ಪಕ್ಷವಿದ್ದರೆ ಅದರ ರಾಜ್ಯ ಘಟಕಗಳು ಪರಸ್ಪರ ವಿರೋಧಿ ನಿಲುವುಗಳನ್ನು ತಳೆಯುವುದೆಂದರೆ ಭಾರಿ ಕುತಂತ್ರವೆನಿಸಿಕೊಳ್ಳುತ್ತದೆ. ಎರಡೂ ರಾಜ್ಯಗಳ ಪ್ರತಿನಿಧಿಗಳು ರಾಷ್ಟ್ರೀಯ ಪಕ್ಷದ ಕೇಂದ್ರಸ್ಥಾನದಲ್ಲಿ ಇಂತಹ ಪ್ರಶ್ನೆಗಳಿಗೆ ಸಮಾನ ನಿಲುವುಗಳನ್ನು ರೂಪಿಸಿಕೊಳ್ಳಬೇಕಾದ್ದು ಮತ್ತು ಕೇಂದ್ರ ಘಟಕವು ಅದಕ್ಕೆ ನಾಯಕತ್ವ ನೀಡಬೇಕಾದ್ದು ಒಂದು ಪ್ರಜಾಪ್ರಭುತ್ವವಾದಿ ಕ್ರಮ, ರಾಷ್ಟ್ರೀಯ ಕರ್ತವ್ಯ. ಬೆಂಕಿ ಉರಿಯುತ್ತಲೇ ಇರಲಿ ಎಂಬ ಧೋರಣೆ ಈ ಪಕ್ಷಗಳು ಬೇಳೆ ಬೇಯಿಸಿಕೊಳ್ಳಲು ಕಂಡುಕೊಂಡಿರುವ ಸಾಧನ. ಎಡಪಕ್ಷಗಳು ಸಹ ಇದಕ್ಕೆ ಸಂಪೂರ್ಣವಾಗಿ ಹೊರತಾದುವಲ್ಲ. ಎಲ್ಲದಕ್ಕೂ ನ್ಯಾಯಾಂಗದ ಮೊರೆಹೋಗುವ ಪ್ರವೃತ್ತಿ ಹೆಚ್ಚುತ್ತಿರುವುದು ರಾಷ್ಟ್ರೀಯ ಪಕ್ಷಗಳು ಸೈದ್ಧಾಂತಿಕ ತೀರ್ಮಾನಗಳನ್ನು ಕೈಗೊಳ್ಳಲು ಹಿಂದೇಟು ಹಾಕುತ್ತಿರುವುದರಿಂದ. ಜನತೆಯ ನ್ಯಾಯಾಲಯದಲ್ಲಿ ಇಬ್ಬಂದಿತನ ಪ್ರದರ್ಶಿಸುತ್ತಿರುವವರೆಗೆ ಮತ್ತು ಜನರು ರಾಷ್ಟ್ರೀಯ ಪಕ್ಷಗಳನ್ನು ನೇರವಾಗಿ ಪ್ರಶ್ನಿಸುವವರೆಗೆ ಇದು ಹೀಗೆಯೇ ಮುಂದುವರಿಯುತ್ತದೆ. ಮಹಾಜನ ಆಯೋಗದ ಮೂಲಸೂತ್ರಗಳನ್ನು ಒಪ್ಪದಿರಲು ಮಹಾರಾಷ್ಟ್ರ ಸರ್ಕಾರ ಯಾವ ಅಂಗೀಕಾರಾರ್ಹ ವಿವರಣೆಯನ್ನೂ ಈವರೆಗೆ ಕೊಟ್ಟಿಲ್ಲ ಮತ್ತು ಆ ಸೂತ್ರಗಳನ್ನು ನಿರಾಕರಿಸಿ ಭಾಷಾವಾರು ಪ್ರಾಂತ್ಯಗಳ ರಚನೆಯೂ ಸಾಧ್ಯವಿಲ್ಲ. ಮುಂಬೈ ನಗರವನ್ನು ಗುಜರಾತಿಗೆ ಬಿಟ್ಟುಕೊಡಬೇಕು ಇಲ್ಲವೇ ಅದಕ್ಕೆ ಪ್ರತ್ಯೇಕ ರಾಜ್ಯದ ಮನ್ನಣೆ ನೀಡಬೇಕೆಂಬ ಘೋಷಣೆ ಬಂದಿದ್ದಾಗ ಮಹಾರಾಷ್ಟ್ರದಲ್ಲಿ ಆಚಾರ್ಯ ಪಿ. ಕೆ. ಅತ್ರೆ, ಎಸ್. ಎ. ಡಾಂಗೆ, ಎಸ್. ಎಂ. ಜೋಶಿ, ಮೃಣಾಲ್ ಗೋರೆ, ಅಹಲ್ಯಾ ರಾಂಗ್ನೇಕರ್ ಮುಂತಾದವರೆಲ್ಲಾ ಹೋರಾಟ ನಡೆಸಲು ಯಾವ ಸೂತ್ರವನ್ನು ಅವಲಂಬಿಸಿದ್ದರೋ ಅದೇ ಸೂತ್ರವು ಕರ್ನಾಟಕದ ಪರವಾಗಿ ಬೆಳಗಾವಿಗೆ ಅನ್ವಯವಾಗುತ್ತದೆ. ಇಷ್ಟೆಲ್ಲಾ ಇದ್ದರೂ ಮೋರೆ ಮಹಾಶಯ ನಗರಸಭೆಯ ಅಧ್ಯಕ್ಷನಾಗಿ ಒಂದು ನಿರ್ಣಯವನ್ನು ಕೈಗೊಂಡು ಗೊಂದಲ ಎಬ್ಬಿಸಿದ್ದಾರೆ. ಅದು ಒತ್ತಡದ ತಂತ್ರ. ಅದು ಸಂವಿಧಾನಬಾಹಿರವಾದದ್ದು ಮತ್ತು ನಗರಸಭೆಯ ನಡಾವಳಿಯ ವ್ಯಾಪ್ತಿಗೆ ಹೊರತಾದ್ದು. ಅದಕ್ಕೆ ಉತ್ತರ ಮೋರೆಯವರ ಮೋರೆಗೆ ಮಸಿ ಹಚ್ಚುವುದಲ್ಲ. ಉತ್ತರ ನೀಡಬೇಕಾದ್ದು ಸರ್ಕಾರ; ಅದಕ್ಕೂ ಒಂದು ಕ್ರಮವಿದೆ. ಸುಮ್ಮನೆ ನಗರಸಭೆಯನ್ನು ವಿಸರ್ಜಿಸುವಂತೆ ಆಜ್ಞಾಪಿಸುವುದಕ್ಕಾಗುವುದಿಲ್ಲ. ಶಾಸಕರ ಭವನಕ್ಕೆ ನುಗ್ಗಿ ಅಕೃತ್ಯದಲ್ಲಿ ಪಾಲ್ಗೊಂಡವರಿಗೆ ಈ ಸೂಕ್ಷ್ಮಗಳು ತಿಳಿದಿರಬೇಕು, ಆದರೆ ಅವರು ಪ್ರಸಿದ್ಧಿಗೆ ಬರುವ ವಿಧಾನವೇ ಬೇರೆ. ಅವರೊಡನೆ ಮಾಧ್ಯಮದ ಪ್ರತಿನಿಧಿಗಳಿದ್ದರು. ಆದರೆ ಅಕೃತ್ಯ ನಡೆಯುವವರಿಗೆ ಪೊಲೀಸರು ಅಜ್ಞರಾಗಿದ್ದರೆಂದರೆ ನಮ್ಮ ದಕ್ಷತೆ ಎಂತಹುದೆಂಬುದು ತಿಳಿಯುತ್ತದೆ. ಇಲ್ಲಿ ನಿದ್ದೆ ಮಾಡಿದ ಪೊಲೀಸರು ಆಮೇಲೆ ಬೆಳಗಾವಿಯಲ್ಲಿ ದೊಣ್ಣೆ ಹಿಡಿದು ಪ್ರತಿಭಟನಾಕಾರರನ್ನು ಥಳಿಸಿ ಚದುರಿಸಬೇಕಾಯಿತು ! ಸರ್ಕಾರವು ದೀರ್ಘಕಾಲೀನ ಯೋಜನೆಯನ್ನು ಹಮ್ಮಿಕೊಂಡು ಬೆಳಗಾವಿ ನಗರದಲ್ಲಿ ಕನ್ನಡ ಮಾತನಾಡುವವರ ಸಂಖ್ಯೆ ಹೆಚ್ಚಲು ಉದ್ಯಮಗಳನ್ನು ಸ್ಥಾಪಿಸಬೇಕೆಂಬ ತುರ್ತು ಅಗತ್ಯವನ್ನು ಇನ್ನಾದರೂ ಮನಸ್ಸಿಗೆ ತಂದುಕೊಂಡು ಕಾರ್ಯಪ್ರವೃತ್ತವಾಗಬೇಕು.

* * *

ನಮ್ಮ ದೇಶದ ಬಜರಂಗದಳಕ್ಕೆ ಸಮಾನವಾದ ಸಂಸ್ಥೆಗಳು ನಮ್ಮ ನೆರೆಯ ಪಾಕಿಸ್ತಾನದಲ್ಲೂ ಇವೆ. ಯಾವನೋ ಕ್ರೈಸ್ತ ಯುವಕ ಕುರಾನಿಗೆ ಎಂಥದೋ ಅಪಚಾರವೆಸಗಿದನೆಂದು ದೂರುತ್ತಾ ಹಲವು ಪಾಕಿಸ್ತಾನಿ ಗೂಂಡಾ ಹುಡುಗರು ಲಾಹೋರಿನಲ್ಲಿ ಎರಡು ಚರ್ಚುಗಳಿಗೆ ಹಾಗೂ

೮ನೇ ಪುಟಕ್ಕೆ




ಸಂಪುಟ-೭ ಸಂಚಿಕೆ-೫ ಡಿಸೆಂಬರ್ ೨೦೦೫

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : nkp@bgl.vsnl.net.in**
**website : www.navakarnatakabooks.com**

# ಫ್ರಾನ್ಸಿನಿಂದ ಬರುತ್ತಿರುವ ಸಂದೇಶ

**ಸಂಪಾದಕೀಯ**

ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ ಎಂಬ ಘೋಷಣೆಯನ್ನು ವಿಶ್ವಕ್ಕೆ ನೀಡಿ ಲೂಯಿ ರಾಜಮನೆತನವನ್ನು ಹೊರದೂಡಿ ಸ್ವತಂತ್ರ ಗಣರಾಜ್ಯವನ್ನು ಸ್ಥಾಪಿಸಿಕೊಳ್ಳುವತ್ತ ಹೆಜ್ಜೆ ಹಾಕಿದ್ದ ಫ್ರಾನ್ಸ್ ಇಂದು ಬೇರೊಂದು ಸಂದೇಶವನ್ನು ನೀಡುತ್ತಿದೆ. ಅಂದು ಗಣರಾಜ್ಯ ಸ್ಥಾಪನೆಯ ಬದಲು ನೆಪೋಲಿಯನ್ನನ ಸರ್ವಾಧಿಕಾರದ ಸ್ಥಾಪನೆಯಾಯಿತು ಮತ್ತು ೧೮೭೦ರಲ್ಲಿ ನೂರು ದಿನಗಳಿಗೂ ಕಡಿಮೆ ಕಾಲ ದುಡಿಯುವ ವರ್ಗವು ಪ್ಯಾರಿಸ್ ನಗರದ ಆಳ್ವಿಕೆಯನ್ನು ನಡೆಸಿತು. ಕ್ರಾಂತಿಯ ಫಲದಿಂದ ೧೭೮೯ರಲ್ಲಿ ಫ್ರಾನ್ಸಿನ ಜನತೆ ವಂಚಿತರಾದಂತೆ ೧೮೭೦ರಲ್ಲೂ ಆದರು. ಇತಿಹಾಸದ ಆ ಕಾಲಘಟ್ಟಗಳು ಹೋರಾಟದ ಹಾದಿಯಲ್ಲಿ ಎಂತೆಂತಹ ಮುಗ್ಗಟ್ಟುಗಳು, ಸಂದಿಗ್ಧತೆ, ಕುತಂತ್ರ, ವಂಚನೆ ಮತ್ತು ಆಳುವ ವರ್ಗದ ಹಿತಸಾಧನೆಯ ಕುಟಿಲೋಪಾಯ ಗಳು ಕಂಡುಬರುತ್ತವೆಂಬುದಕ್ಕೆ ಮಾಸದ ಉದಾಹರಣೆಗಳಾಗಿವೆ. ಅವು ಒಂದೊಂದು ಸನ್ನಿವೇಶದಲ್ಲಿ ಒಂದೊಂದು ರೀತಿ ಪ್ರಕಟವಾಗಬಹುದು, ಆದರೆ ಪ್ರಕಟವಾಗುವುದು ಖಂಡಿತ. ಫ್ರಾನ್ಸಿನ ಕ್ರಾಂತಿಯ ಘೋಷಣೆಯು ಸದಾಶಯಗಳ ಪ್ರತೀಕ, ಆದರೆ ಫ್ರಾನ್ಸಿನಲ್ಲಿ ಅದು ಮೂರ್ತೀಭವಿಸಲಿಲ್ಲ. ಹತ್ತಾರು ವಸಾಹತುಗಳನ್ನು ತನ್ನದಾಗಿಸಿಕೊಂಡ ಫ್ರಾನ್ಸ್ ಎರಡು ಶತಮಾನಗಳ ಕಾಲ ಆಫ್ರಿಕಾ ಮತ್ತು ಆಗ್ನೇಯ ಏಷ್ಯಾಗಳಲ್ಲಿ ಸಂಪತ್ತನ್ನು ಸೂರೆಗೊಂಡು ವಸಾಹತು ದೇಶಗಳ ಜನರನ್ನು ಅಪಾರವಾಗಿ ಬಗ್ಗುಬಡಿಯಿತು. ವಿಯೆಟ್ನಾಂ ಮತ್ತು ಆಲ್ಜೀರಿಯಾಗಳಲ್ಲಿ ಸಶಸ್ತ್ರ ಸ್ವಾತಂತ್ರ್ಯ ಹೋರಾಟಗಳು ದೀರ್ಘಕಾಲ ನಡೆದು ಕಡೆಗೆ ಫ್ರಾನ್ಸ್ ಆ ದೇಶಗಳಿಂದ ಕಾಲ್ತೆಗೆಯಬೇಕಾಯಿತು. ಆಫ್ರಿಕಾದಲ್ಲಿ ಆಲ್ಜೀರಿಯ ಅಲ್ಲದೆ ಮೊರಕ್ಕೊ, ಟ್ಯುನೀಷಿಯ, ಕ್ಯಾಮೆರೂನ್, ಕಾಂಗೋ ಮುಂತಾದ ದೇಶಗಳು ಸಹ ಫ್ರಾನ್ಸಿನ ಅಧೀನದಲ್ಲಿದ್ದು ಲೆಕ್ಕವಿಲ್ಲದಷ್ಟು ಸಂಪತ್ತನ್ನು ಕಳೆದುಕೊಂಡವು. ಪ್ರಾಣವನ್ನು ತೆತ್ತ ಜನರ ಸಂಖ್ಯೆಯೂ ಅಷ್ಟೇ ಲೆಕ್ಕವಿಲ್ಲದ್ದು. ರಾಷ್ಟ್ರೀಯ ವಿಮೋಚನಾ ಸಮರವು ಆಲ್ಜೀರಿಯಾದಲ್ಲಿ ಹಲವು ವರ್ಷಗಳ ಕಾಲ ನಡೆದು ಫ್ರಾನ್ಸಿನಲ್ಲಿ ಅದರ ಬಿಸಿ ಗಾಢವಾಗಿ ತಟ್ಟಿತು. ಫ್ರಾನ್ಸಿನ ಅನೇಕ ಧೀಮಂತರು, ದುಡಿಯುವ ವರ್ಗ ಮತ್ತು ರಾಜಕೀಯ ಪಕ್ಷಗಳು ಅಲ್ಜೀರಿಯಾದಲ್ಲಿ ನಡೆಯುತ್ತಿದ್ದ ಕೊಲೆಪಾತಕಗಳನ್ನು ತೀವ್ರವಾಗಿ ವಿರೋಧಿಸಿ ತಮ್ಮ ದೇಶವು ಆ ವಸಾಹತು ರಾಷ್ಟ್ರದಿಂದ ಹೊರಬರಬೇಕೆಂದು ಆಗ್ರಹಿಸಿ ಫ್ರಾನ್ಸಿನ ಸರ್ಕಾರದ ವಿರುದ್ಧ ತಿರುಗಿಬಿದ್ದರು. ಅಂತಹ ಫ್ರಾನ್ಸಿನಲ್ಲಿ ಈಗ ತಳಮಳ, ಅಶಾಂತಿ, ಹಿಂಸಾಚಾರ ಮತ್ತು ದಿಕ್ಕಿಲ್ಲದ ಕೋಪದ ಪ್ರದರ್ಶನ ತಾಂಡವವಾಡುತ್ತಿವೆ. ಸುಟ್ಟುಹಾಕಲು ಈಗ ಕಾರುಗಳೇ ಉಳಿದಿಲ್ಲವೆಂದು ಒಬ್ಬ ಉಗ್ರ ಯುವಕ ಹೇಳಿದ್ದು ಈಚೆಗೆ ವರದಿಯಾಗಿದೆ. ಫ್ರಾನ್ಸಿನ ಜನ ಮೂಕರಾಗಿಬಿಡುವಷ್ಟು ಹೊಡೆತ ಈಚಿನ ಗಲಭೆಗಳಿಂದ ಬಿದ್ದಿದೆ.

ಫ್ರಾನ್ಸ್ ಎಂದರೆ ಫ್ಯಾಶನ್ ಲೋಕ, ಕ್ರೀಡೆಗಳ ಪ್ರಶಾಂತ ದೇಶ, ಮುಕ್ತ ಜೀವನದ ಸ್ವರ್ಗ, ಕಲಾ ಅಭಿವ್ಯಕ್ತಿಯ ಮೇರುಸ್ಥಾನ, ಎಂದೆಲ್ಲಾ ವಿಶ್ವವು ಭಾವಿಸುವುದು ರೂಢಿಯಲ್ಲಿದೆ. ಯೂರೋಪಿನ ರಾಷ್ಟ್ರಗಳ ಪೈಕಿ ಅಮೆರಿಕಾಕ್ಕೆ ಲಗಾಮು ಹಾಕಲು ಫ್ರಾನ್ಸಿನಷ್ಟು ದಿಟ್ಟತನ ತೋರಿದ ಅನ್ಯರಾಷ್ಟ್ರವಿಲ್ಲ. ಅಂತಹ ರಾಷ್ಟ್ರದಲ್ಲಿ ಅಸಮಾಧಾನವು ಎಲ್ಲೋ ಹೊಗೆಯಾಡುತ್ತಿದ್ದಂತೆ ಭಾಸವಾಗುತ್ತಿತ್ತು. ಆದರೆ ಪ್ರಕೋಪದ ಜ್ವಾಲೆ ಇಷ್ಟು ತೀವ್ರವಾಗಿ ಭುಸುಗುಟ್ಟುತ್ತಿತ್ತೆಂದು ತಿಳಿಯಲಾಗಿರಲಿಲ್ಲ. ಜನಾಂಗೀಯ ಭಾವನೆಗಳು ಬ್ರಿಟನ್ - ಅಮೆರಿಕಾಗಳಲ್ಲಿ ಪ್ರಕಟವಾಗುತ್ತಿದ್ದಂತೆ ಫ್ರಾನ್ಸಿನಲ್ಲಿ ಬಹಿರಂಗವಾಗಿ ತೋರಿಬರುತ್ತಿರಲಿಲ್ಲ; ಕೆಲವು ಶಾಲೆಗಳ ಸಮವಸ್ತ್ರಕ್ಕೆ ಸಂಬಂಧಿಸಿದಂತೆ ತಕರಾರು ಕೇಳಿಬರುತ್ತಿದ್ದುದರಿಂದ ಈ ದ್ವಂದ್ವವು ಅಷ್ಟಕ್ಕೆ ಸೀಮಿತವಾಗಿದ್ದಿತೆಂದು ಭಾವಿಸಲಾಗಿತ್ತು. ಜಗತ್ತಿಗೆ ಕಾಣದಿದ್ದ ಫ್ರಾನ್ಸ್, ಪ್ಯಾರಿಸ್ಸಿನ ಹೊರವಲಯದ ವಸತಿ ಸಮುಚ್ಚಯಗಳು, ಅಲ್ಲಿ ವಾಸಿಸುತ್ತಿರುವ ಕೆಳಸ್ತರದ ಜನರ ಅಗಾಧ ಸಂಖ್ಯೆ, ಅವರ ಕಾರ್ಪಣ್ಯ, ರೋಷ ಎಲ್ಲಾ ಈಗ ವಿಶ್ವದ ಕಣ್ಣಿಗೆ ಕಾಣುತ್ತಿದೆ. ೧೯೪೫ರ ತರುವಾಯದಲ್ಲಿ ಫ್ರಾನ್ಸಿನ ವಸಾಹತುಗಳು ಸ್ವತಂತ್ರವಾಗತೊಡಗಿದುವು. ಅಲ್ಲಿಂದ ಕೆಲಸಗಾರರನ್ನು ಸಹಸ್ರ ಸಂಖ್ಯೆಯಲ್ಲಿ ಕರೆತಂದು ಫ್ರಾನ್ಸ್ ತನ್ನ ಔದ್ಯಮಿಕ ಪ್ರಗತಿಯನ್ನು ಸಾಧಿಸುತ್ತಾ ಹೋಯಿತು. ತಮ್ಮ ದೇಶಗಳಲ್ಲಿ ಉದ್ಯೋಗದ ಅವಕಾಶಗಳಿಲ್ಲದ ಈ ಜನ ಫ್ರಾನ್ಸಿನಲ್ಲಿ ನೆಮ್ಮದಿಯಿಂದ ದುಡಿದರು, ಫ್ರಾನ್ಸಿನ ಪ್ರಜೆಗಳಾದರು, ತಮ್ಮ ಹಿಂದಿನ ನೆಲೆಗಳ ಸ್ಮರಣೆಯನ್ನು ಕಿತ್ತುಬಿಸುಟರು. ಅವರ ವಿದ್ಯಾಭ್ಯಾಸ, ವಸತಿ ಸೌಕರ್ಯ, ಆರೋಗ್ಯದ ಸೌಲಭ್ಯ ಮುಂತಾದುವು ಫ್ರಾನ್ಸಿನ ಬೇರೆ ವರ್ಗಗಳ ಸವಲತ್ತುಗಳಿಗೆ ಸಮನಾಗಿಲ್ಲದಿದ್ದರೂ ಅವರು ಗೊಣಗಲಿಲ್ಲ. ಅವರ ಸ್ಥಿತಿಗತಿಗಳು ಹೇಗಿದ್ದವೆಂದು ತಿಳಿಯುವ ಕಷ್ಟಕ್ಕೆ ಫ್ರಾನ್ಸಿನ ಸುಸ್ಥಿತ ನಾಗರಿಕರು ಹೋಗುವ ಪ್ರಯಾಸ ಮಾಡಲಿಲ್ಲ. ಅವರ ದುಡಿಮೆಯ ಉತ್ಪಾದನೆ ಇವರನ್ನು ತೃಪ್ತಿಗೊಳಿಸಿತ್ತು. ಹಿಂದೆ ಫಿಜಿ, ಮಲಯಾ, ವೆಸ್ಟ್ ಇಂಡೀಸ್, ದಕ್ಷಿಣ ಆಫ್ರಿಕಾ ಮುಂತಾದ ದೇಶಗಳಿಗೆ ತೆರಳಿದ್ದ ಭಾರತೀಯ ದುಡಿಮೆಗಾರರ ಬವಣೆಗಳನ್ನು ನೆನೆದರೆ ಫ್ರಾನ್ಸಿಗೆ ವಲಸೆ ಬಂದು ಪ್ರಜೆಗಳಾದ ಈ ಜನರ ಪರಿಸ್ಥಿತಿ ಅರ್ಥವಾದೀತು. ಆ ಜನರ ಹೊಸತಲೆಮಾರಿನ ಯುವಕರಿಗೆ ಭೂತಕಾಲದ ನಂಟು ಕಿಂಚಿತ್ತೂ ಇಲ್ಲ. ಅವರು ಹುಟ್ಟಿ ಬೆಳೆದಿದ್ದು ಫ್ರಾನ್ಸಿನಲ್ಲಿ, ಫ್ರೆಂಚ್ ಅವರ ಭಾಷೆ. ವಿದ್ಯಾಭ್ಯಾಸ - ಉದ್ಯೋಗ ಎಲ್ಲಾ ಇಲ್ಲೇ ಆಗಬೇಕು. ಫ್ರಾನ್ಸಿನ ಶಿಷ್ಟ ಸಮಾಜ ಅದನ್ನು ಈಡೇರಿಸಲು ಸಿದ್ಧವಿರಲಿಲ್ಲ. ಪ್ಯಾರಿಸ್ಸಿನ ಪಾತಾಳಕ್ಕೆ ಇವರನ್ನು ನೂಕಿ ಸಮಚಿತ್ತದಿಂದ ನಿಸೂರಾಗಿ ಬಾಳಲಾರಂಭಿಸಿತು. ಈ ಯುವಕರಲ್ಲಿ ನಿರುದ್ಯೋಗದ ಮಟ್ಟ ಸುಮಾರು ಶೇಕಡ ನಲವತ್ತು. ವಿದ್ಯಾಭ್ಯಾಸ ಅಷ್ಟಕ್ಕಷ್ಟೆ. ಬಟ್ಟೆ, ಊಟ, ವಸತಿ, ಸಾಂಸ್ಕೃತಿಕ ಸಂಪರ್ಕ, ರಾಜಕೀಯ ಭಾಗವಹಿಸುವಿಕೆ, ಇವೆಲ್ಲಾ ಅತ್ಯಂತ ಕೆಳಮಟ್ಟದ್ದು. ಎಲ್ಲೋ ಒಬ್ಬ ಥಿಯೆರಿ ಹೆನ್ರಿಯಂತಹ ಫುಟ್‌ಬಾಲ್ ಪಟು ಹೊಮ್ಮಿದನೆಂದು ಬೀಗುತ್ತಾ ಕುಳಿತಿರಲು ಆ ಯುವಕರಿಗೆ ಸಾಧ್ಯವಾಗಲಿಲ್ಲ.

ಇಷ್ಟು ಸಾಲದೆಂಬಂತೆ ಸದ್ಯದಲ್ಲೇ ಫ್ರಾನ್ಸಿನ ಅಧ್ಯಕ್ಷಗಿರಿಗೆ ಸ್ಪರ್ಧಿಯಾಗಲಿರುವ ಮುತ್ಸದ್ದಿ ಜನಾಂಗೀಯ ಅವಹೇಳನಕರ ಮಾತುಗಳನ್ನಾಡಿ ಬೆಂಕಿಯನ್ನು ಹೊತ್ತಿಸಿದ. ಪ್ಯಾರಿಸ್ ಮಾತ್ರವಲ್ಲದೆ ಫ್ರಾನ್ಸಿನ ಅನೇಕ ನಗರಗಳು ಇದೆಲ್ಲದರ ಪರಿಣಾಮವನ್ನು ಕಂಡು ತತ್ತರಿಸಿವೆ. ಹೇಗೆ ಮಧ್ಯಪ್ರವೇಶ ಮಾಡಬೇಕೆಂಬ ಚಿಂತೆಯಲ್ಲಿ ಫ್ರಾನ್ಸಿನ ಸರ್ಕಾರ ನಿಷ್ಕ್ರಿಯವಾಗಿ ಕೂತಿದೆ. ಕ್ರಮೇಣ ಜ್ವಾಲೆಯು ತಣ್ಣಗಾಗಿ ಯಥಾಸ್ಥಿತಿ ಮರುಕಳಿಸುತ್ತದೆಯಾದರೂ ಫ್ರಾನ್ಸನ್ನು ಕಂಪಿಸಿದ ಆ ಹತ್ತು ದಿನಗಳು ಸ್ಮೃತಿಪಟಲದಲ್ಲಿ ಬಹುಕಾಲದವರೆಗೆ ಜನರ ಮನಸ್ಸನ್ನು ಕಾಡುತ್ತಿರುತ್ತದೆ.

ಯಾವುದೇ ದೇಶವು ತನ್ನ ಪ್ರಜೆಗಳ ಒಂದು ವಿಭಾಗವನ್ನು ಉಪೇಕ್ಷಿಸಿದಾಗ ಉಂಟಾಗುವ ಪರಿಣಾಮ ಇದು. ಅವರಿಲ್ಲವೋ ಎಂಬಂತೆ ನಡೆದುಕೊಂಡಾಗ ಒಂದು ದಿನ ಧಡಕ್ಕನೆ ಬೆಚ್ಚಿಬಿದ್ದು ಸರ್ಕಾರವು ಅರಿವು ಮೂಡಿಸಿಕೊಳ್ಳುವ ಪ್ರಸಂಗ ಇದು. ಆಮೇಲೆ ಅವರನ್ನು ದೂಷಿಸುವುದು, ಮೂದಲಿಸುವುದು, ನಾಗರಿಕತೆಯ ಸಭ್ಯತೆಯನ್ನು ಬೋಧಿಸುವುದು, ಪ್ರಜಾಪ್ರಭುತ್ವದ ಮೌಲ್ಯಗಳಲ್ಲಿ ಒಂದಾದ ತಾಳ್ಮೆಯ ಉಪದೇಶ ನೀಡುವುದು, ಸಾಂತ್ವನಗೊಳಿಸಲು ಕಾರ್ಯಕ್ರಮಗಳನ್ನು ಘೋಷಿಸುವುದು, ಎಲ್ಲಾ ಆರಂಭವಾಗಿ ಕೆಲಕಾಲಾನಂತರ ಮತ್ತೆ ಅದೇ ಉಪೇಕ್ಷೆಯ ಭಾವ ನೆಲೆಸುತ್ತದೆ. ಭೋರ್ಗರೆವ ಅಲೆಗಳಿಲ್ಲದ ಪ್ರಶಾಂತ ಸರೋವರ ಒಮ್ಮೆಲೇ

ಸುನಾಮಿಯ ಪ್ರಭಾವಕ್ಕೆ ಒಳಗಾಗಿ ನಂತರ ಶಾಂತವಾಗುವಂತೆ ಇದು. ನಿಜಕ್ಕೂ ಶಾಂತತೆಯು ಆವಿರ್ಭಾವಗೊಂಡಿಲ್ಲ, ಅದಕ್ಕೆ ಬೇಕಾದ ಕ್ರಮಗಳು ಪ್ರಾಯೋಗಿಕವಾಗಿ ಅನ್ವಯವಾಗಿಲ್ಲ. ಭುಗಿಲೇಳುವುದು ಮತ್ತೆ ಯಾವಾಗ ಎಂಬ ನಿರೀಕ್ಷೆಯಲ್ಲಿ ತವಕಿಸುತ್ತಾ ಉಳಿಯುವ ಘೋರ ಅಸ್ತಿತ್ವ ಇದು. ನಮ್ಮ ದೇಶದಲ್ಲಿ ತಾರತಮ್ಯಗಳ ಮಹಾಪೂರವಿದ್ದರೂ ಅದನ್ನು ಲೆಕ್ಕಿಸದೆ ಶಾಂತಿಯ ನಂದಾದೀಪವನ್ನು ಆರಾಧಿಸುವವರು ಈ ಗುಳ್ಳೆ ಯಾವಾಗ ಒಡೆಯುತ್ತದೆಂಬ ಆತಂಕದಿಂದ ಮುಕ್ತರಾಗಲು ಸಾಧ್ಯವಿಲ್ಲ. ಜೊತೆಗೆ ಅಮೆರಿಕಾದ ನೂತನ ಸಖ್ಯ ಬೇರೆ. ದಂಡನೆಯಿಂದ ಎಲ್ಲವನ್ನೂ ನಿಯಂತ್ರಿಸಬಹುದೆಂಬುದು ಆ ದೇಶದ ನಂಬಿಕೆ. ಅದನ್ನೇ ನಮಗೂ ಮಹಾಮಂತ್ರವೆಂದು ಸ್ವೀಕರಿಸುವವರು ನಮ್ಮಲ್ಲಿದ್ದಾರೆ. ಫ್ರಾನ್ಸಿನ ವಿದ್ಯಮಾನಗಳು ಈ ಭ್ರಾಂತಿಯಿಂದ ಹೊರಬರಲು ನಮಗೆ ದಾರಿದೀಪದಂತಿದೆ. ಕುರುಡನಿಗೆ ದೀಪದಿಂದ ಏನು ಪ್ರಯೋಜನವೆಂಬ ಅವಸ್ಥೆಗೆ ನಮ್ಮನ್ನು ನಾವು ನೂಕಿಕೊಳ್ಳುವುದು ಬೇಡ. ಗುರ್‌ಗಾಂವ್, ಸೆಪ್ಟೆಂಬರ್ ೨೯ರ ದೇಶವ್ಯಾಪಿ ಮುಷ್ಕರ, ಜಹಾನಾಬಾದ್, ಇರಾನ್ ಬಗ್ಗೆ ಎಡಪಕ್ಷಗಳ ಎಚ್ಚರಿಕೆಯ ಮಾತು, ಈರುಳ್ಳಿ ಅವ್ಯವಹಾರ, ಮಾಹಿತಿ ತಂತ್ರಜ್ಞಾನ ಕೋವಿದರ ಆಟಾಟೋಪ, 'ಅಹಿಂದ'ದ ಆಕಾಂಕ್ಷೆಗಳು, ಚಿದಂಬರಂ ನೀತಿಗಳ ಮಾರಕ ಪರಿಣಾಮದ ಸಂಜ್ಞೆಗಳು, ಮುಂತಾಗಿ ಎಲ್ಲವನ್ನೂ ಗಂಭೀರವಾಗಿ ಪರಿಗಣಿಸುವ ಆರ್ಥಿಕ-ರಾಜಕೀಯ ಮುಂದಾಲೋಚನೆ ನಮ್ಮ ದೇಶಕ್ಕೆ ತಂಪನ್ನೆರೆಯಬಹುದು. ಆ ತಿಳಿವಳಿಕೆಯಿಂದ ಮೂಡುವ ಕ್ರಿಯೆಯು ನಮ್ಮ ಭವಿಷ್ಯದ ಸೂಚನೆಯಾಗುತ್ತದೆ.

## ಪುಸ್ತಕ ಸಂಸ್ಕೃತಿ

ಪುಸ್ತಕಗಳನ್ನು ಓದುವವರು ಕಡಿಮೆಯಾಗುತ್ತಿದ್ದಾರೆಂದು ಕೆಲವರು ಆಗಾಗ್ಗೆ ಹೇಳುವುದುಂಟು. ಸ್ವತಃ ಅವರೇ ಓದುವುದನ್ನು ನಿಲ್ಲಿಸಿದ್ದಾರೇನೋ ಎಂಬ ಅನುಮಾನ ಮೂಡುವಷ್ಟು ದುಗುಡ ಅವರನ್ನಾವರಿಸಿಬಿಟ್ಟಿರುತ್ತದೆ. ಅವರಿಗೆ ಉತ್ತರವಾಗಿ ನಿವೃತ್ತರಾಗಿರುವ ಕಾಲೇಜು 'ರೀಡರ್' ಒಬ್ಬರು ಏನಾದರೂ ಹೇಳಬೇಕಾದರೆ ಓದಿನಿಂದಲೂ ನಿವೃತ್ತರಾಗಿರುವುದಾಗಿ ಹೇಳಿ ಅವರ ಭಾವನೆಗೆ ಇನ್ನಷ್ಟು ಗಟ್ಟಿತನ ನೀಡಬಹುದು. ಸನ್ನಿವೇಶ ಅಷ್ಟು ಹತಾಶೆಯದಾಗಿಲ್ಲ, ಏಕೆಂದರೆ ಹೊಸ ಪುಸ್ತಕಗಳೂ ಪ್ರಕಟವಾಗುತ್ತಿವೆ, ಪುಸ್ತಕ ಮೇಳಗಳು ನಡೆಯುತ್ತಿವೆ, ಜನ ಗಮನಾರ್ಹ ಸಂಖ್ಯೆಯಲ್ಲಿ ಅಲ್ಲಿಗೆ ಹೋಗುತ್ತಿದ್ದಾರೆ, ವ್ಯಾಪಾರ ಸಾಕಷ್ಟು ಚುರುಕಾಗಿ ನಡೆಯುತ್ತಿದೆ. ಸರ್ವಜ್ಞತ್ವವನ್ನು 'ಇಂಟರ್‌ನೆಟ್'ನಿಂದ ಪಡೆಯುವ ಭಾಗ್ಯವಂತರಿಗಾದರೆ ಪುಸ್ತಕಗಳ ಅಗತ್ಯವಿಲ್ಲ. ಅವರ ಕಂಪ್ಯೂಟರ್ ಪರದೆಯ ಮೇಲೆ ಕಾಣುವ ಎಲ್ಲವೂ ವಿದ್ವತ್ತಿನ ಖನಿಯ ತುಣುಕುಗಳೆಂದು ಭ್ರಮಿಸಿ ಇಲ್ಲದ ಆತಂಕವನ್ನು ಹುಟ್ಟಿಹಾಕಿಕೊಳ್ಳಲು ಬೇಕಾದಷ್ಟು ಜ್ಞಾನದ ಹೊರೆಯನ್ನು ತಮ್ಮ ಮೇಲೆ ಹೇರಿಕೊಳ್ಳಬಹುದು. ವೈದ್ಯ, ಯೋಗಶಿಕ್ಷಕ, ವಾಸ್ತುಪಂಡಿತ, ಉಪಾಧ್ಯಾಯ, ಇತಿಹಾಸತಜ್ಞ, ಯಂತ್ರಗಳ ತಂತ್ರಜ್ಞ, ಜ್ಯೋತಿಷಿ, ಎಲ್ಲರ ಕೆಲಸವನ್ನು ಇಂಟರ್‌ನೆಟ್ ಒಂದೇ ಮಾಡಿಬಿಡುತ್ತದೆಯಾದ್ದರಿಂದ ಆ ಜಾಲದಲ್ಲಿ ಸಿಲುಕಿದವರಿಗೆ ಪುಸ್ತಕಗಳು ಹುಲ್ಲುಕಡ್ಡಿ ಸಮಾನ. ಭಾವೀ ರೋಗಿಗಳಿಗೆ ಮತ್ತು ರೋಗಿಗಳ ಪಾಲಕರಿಗೆ ವೈದ್ಯರು ಹೇಳುವುದುಂಟು, ನಿಮ್ಮ ಇಂಟರ್‌ನೆಟ್ ಅಜ್ಞಾನದಿಂದ ರೋಗಿಯ ಮದ್ದನ್ನು ತೀರ್ಮಾನಿಸಿ ಸುಮ್ಮನೆ ವ್ಯಥೆಗೆ ಆಹ್ವಾನ ನೀಡಬೇಡಿ, ಎಂದು. ಇಂಟರ್‌ನೆಟ್ಟಿನಲ್ಲಿ ರಸವನ್ನೂ ತುಂಬಬಹುದು, ಕಸವನ್ನೂ ತುಂಬಬಹುದು. ತುಂಬುವವನು ಮತ್ತು ತುಂಬಲು ಆಯ್ಕೆ ಮಾಡುವವನು ಎಂಥವನು ಎಂಬುದನ್ನದು ಆಧರಿಸುತ್ತದೆ. ಗಣಕಯಂತ್ರದ ಮುಖೇನ ದಿಢೀರ್ ಪಾಂಡಿತ್ಯ ಸಂಪಾದಿಸಿ ಭಾಷಣ ಬಿಗಿಯಬಹುದು, ಪತ್ರಿಕೆಗಳಿಗೆ ಲೇಖನ ಬರೆಯಬಹುದು, ವೈದ್ಯರಿಂದ ಬಯ್ಯಿಸಿಕೊಳ್ಳಬಹುದು; ಆದರೆ ಖಚಿತವಾದ, ವೈಜ್ಞಾನಿಕವಾದ, ವಿದ್ವತ್ತು ಯಾವಾಗಲೂ ದೊರೆಯುತ್ತದೆಂದು ಭಾವಿಸುವುದು ಬಾಲಿಶವಾಗುತ್ತದೆ. ಒಂದು ಉದಾಹರಣೆಗಾಗಿ 'ಯೋಗ' ಎಂಬ ವಿಷಯದಡಿ ಅಲ್ಲಿ ದಾಖಲಾಗಿರುವ ಎಷ್ಟೋ ಮೂರ್ಖ ಪ್ರತಿಪಾದನೆಗಳನ್ನು ತಮಾಷೆಗಾಗಿಯಾದರೂ ಅವಲೋಕಿಸಬಹುದು. ಪುಸ್ತಕಗಳಲ್ಲಿ ಇದೇ ಲಕ್ಷಣ ಇರಬಾರದೆಂದೇನೂ ಇಲ್ಲ. ಆದರೆ ಆಯ್ಕೆಗೆ, ಪರಾಮರ್ಶೆಗೆ, ಇಲ್ಲಿ ಹೆಚ್ಚಿನ ಅವಕಾಶವಿದೆ. ಅಲ್ಲದೆ, ಇಂಟರ್‌ನೆಟ್‌ನಂತೆ ಪುಸ್ತಕಗಳೆಲ್ಲಾ ಅಮೆರಿಕಾದ ತಲೆಹೋಕರ ಕೈಯಲ್ಲಿ ಕೇಂದ್ರೀಕೃತವಾಗಿಲ್ಲ. ಆದ್ದರಿಂದ ಪುಸ್ತಕ ಸಂಸ್ಕೃತಿಯು ಇನ್ನೂ ಬಹುಕಾಲ ನಮ್ಮನ್ನು ಮಾರ್ದವಗೊಳಿಸುತ್ತಲೇ ಇರುತ್ತದೆ. ಕೇವಲ ಇಂಟರ್‌ನೆಟ್ಟನ್ನು ಆಶ್ರಯಿಸುವವರು ಕಡಿಮೆ. ಅದೂ ಇರಲಿ, ಪುಸ್ತಕಗಳೂ ಇರಲಿ ಎನ್ನುವವರು ಹೆಚ್ಚು.

ಕಾಲ ಮತ್ತು ಪ್ರದೇಶಗಳನ್ನು ಮೀರಿ ಅನುಭವ, ಪ್ರಜ್ಞೆ, ಚಿಂತನೆ, ಎಲ್ಲಾ ನಮ್ಮ ಸಂಪತ್ತಾಗುವುದು ಅಕ್ಷರದಿಂದ, ಲಿಖಿತ ಅಕ್ಷರ ಸಾಹಿತ್ಯದಿಂದ. ಬೇರೆ ಜ್ಞಾನದ ಮಾಧ್ಯಮಗಳ ಮಿತಿ ಇದಕ್ಕಿಲ್ಲ. ವಾಲ್ಮೀಕಿಯೊಡನೆ ಅರ್ಥವತ್ತಾದ ಸಂಭಾಷಣೆಯು ರಾಮಾಯಣದ ಗ್ರಂಥದ ಮುಖೇನ ಆಗುವಷ್ಟು ಅದರ ವೈಭವೋಪೇತ ಚಿತ್ರೀಕರಣದಿಂದ ಆಗುವುದಿಲ್ಲ. ಕಳಪೆ ಸಂಸ್ಕೃತಿಯ ವಕ್ತಾರರಿಗೆ ಪುಸ್ತಕ ಸಂಸ್ಕೃತಿಯ ಅಗತ್ಯವಿರುವುದಿಲ್ಲ. ಅವರ ಸಂಪರ್ಕ - ಸಂವಹನ ವಿಧಾನಗಳೇ ಬೇರೆ. ಅಲ್ಲಿ ವೈದಿಕ ಜ್ಯೋತಿಷ, ನೊಸ್ಟ್ರಡ್ಯಾಮುಸ್ ಭವಿಷ್ಯವಾಣಿ, ಇಂಥವೆಲ್ಲಾ ವಿಜೃಂಭಿಸುತ್ತವೆ. ಸಾಹಿತ್ಯ, ಸಂಗೀತ, ಕಲೆ, ಇತ್ಯಾದಿ ಯಾವುದರ ಮುಖಾಂತರವೂ ಪುರುಷಾರ್ಥ ಸಾಧಿಸುವ ಗೋಜಿಗೆ ಹೋಗದೆ ಕೇವಲ ಇಟ್ಟಿಗೆಯ ಮೂಲಕ ಭಾರತೀಯ ಸಂಸ್ಕೃತಿಯ ಹೆಗ್ಗಳಿಕೆಗಳನ್ನು ಸಾರುವ ಉಪದ್ರವಕ್ಕೆ ಸಮಾನವಾದ್ದು ಇದು. ರಾಮಾಯಣದ ಒಂದು ಸಾಲನ್ನೂ ಓದದೆ ಶ್ರೀರಾಮಚಂದ್ರನಿಗೆ ಕಳಂಕ ತರುವ ಮಾತು ಮತ್ತು ಕ್ರಿಯೆ ಸಾಧ್ಯವಾಗುವುದು ಉದಾತ್ತ ಪುಸ್ತಕ ಸಂಸ್ಕೃತಿಯ ಅಭಾವದಲ್ಲಿ. ''ಪಾದಾವಪ್ರಾಪ್ಯ ರಾಮಸ್ಯ ಪಪಾತ ಭರತೋ ರುದನ್'' ಎಂಬ ಅರ್ಧ ಶ್ಲೋಕದಿಂದ ವಾಲ್ಮೀಕಿಯು ಭರತನ ವ್ಯಗ್ರತೆಯನ್ನು ಸಾರವತ್ತಾಗಿ ಚಿತ್ರಿಸುವುದನ್ನು ಗ್ರಂಥವಾಕ್ಯದಿಂದಲ್ಲದೆ ಹೇಗೆ ಗ್ರಹಿಸುವುದು ? ರಾಮನ ಪಾದುಕೆ ತರಲು ಹೊರಟ ಭರತನ ಮನಸ್ಸಿನಲ್ಲಿ ಏನೆಲ್ಲ ವಿಚಾರಗಳು ತುಂಬಿವೆ ! ತಂದೆಯ ಸಾವು, ತಾಯಿಯ ಅಕ್ಷಮ್ಯ ನಿಲುವು, ತನ್ನ ದುಗುಡ, ಕ್ಷಮಾಯಾಚನೆಯ ಅಗತ್ಯ, ಕಾಡಿನ ಕಷ್ಟಗಳು, ಹೀಗೆ ಎಷ್ಟೊಂದು ವಿಷಯಗಳನ್ನು ಅಣ್ಣನಿಗೆ ತಿಳಿಸುವುದಿದೆ; ಆದರೆ ''ರಾಮನ ಪಾದಗಳನ್ನು ಸಮೀಪಿಸುವುದಕ್ಕೆ ಮೊದಲೇ ರೋದಿಸುತ್ತಾ ಭರತನು ರಾಮನ ಪಾದಗಳ ಮೇಲೆ ಬಿದ್ದನು'' ಎಂದು ವಾಲ್ಮೀಕಿ ಹೇಳಿದಾಗ ಭರತನ ಇಡೀ ಮನಸ್ಸು ಪದಗಳ ಅಭಾವದಲ್ಲೇ ನಮ್ಮ ಮುಂದೆ ತೆರೆದುಕೊಳ್ಳುತ್ತದೆ. ಹಾಗೆ ಮಾಡುವ ಸಾಮರ್ಥ್ಯವಿರುವುದರಿಂದಲೇ ವಾಲ್ಮೀಕಿಯು ''ರಾಮ ಎಂಬ ಮಧುರಾಕ್ಷರವನ್ನು ಇಂಪಾಗಿ ಹಾಡುತ್ತಾ ಕವಿತೆಯ ರೆಂಬೆಯ ಮೇಲೆ ಕುಳಿತ ಕೋಗಿಲೆ'' ಆಗಿರುವುದು. ಪುಸ್ತಕ ಸಂಸ್ಕೃತಿಯಲ್ಲಿ ಪಕ್ವಾಗಿಲ್ಲದಾಗ ಆ ಕೋಗಿಲೆಯನ್ನು ಗೂಬೆಯನ್ನಾಗಿಸಿಬಿಡುತ್ತೇವೆ ! ಅಕ್ಷರವಿಲ್ಲದಿದ್ದರೆ ಮೂರು ಲೋಕಗಳೂ ಕತ್ತಲೆಯಿಂದ ಆವೃತವಾಗಿಬಿಡುತ್ತಿತ್ತು, ಎನ್ನುತ್ತಾನೆ ದಂಡಿನ್ ಎಂಬ ಆಲಂಕಾರಿಕ. ಓದೆಂದರೆ ಪಠನ, ಬಾಯಿಪಾಠ, ಸಹಸ್ರನಾಮವನ್ನು ಯಾಂತ್ರಿಕವಾಗಿ ಒಪ್ಪಿಸುವುದು, ಅಲ್ಲ. ವೇದವನ್ನೋದಿ ಅದರರ್ಥವನ್ನು ತಿಳಿಯದೆ ಹೋಗುವವನು ಒಂದು ಕಂಭ, ಅದು

೮ನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




### ಪ್ರಶಸ್ತಿಗೆ ಆಯ್ಕೆ

ಈ ವರ್ಷ ರಾಜ್ಯೋತ್ಸವ ಪ್ರಶಸ್ತಿ ಸ್ವೀಕರಿಸಿದವರ ಸಂಖ್ಯೆ ೧೭೫ ಎನ್ನಲಾಗಿದೆ. ಅಷ್ಟುಮಂದಿ ನಮ್ಮ ರಾಜ್ಯದಲ್ಲಿ ಖ್ಯಾತನಾಮರಿರುವುದು ಸಂತೋಷದ ವಿಷಯ. ಒಂದು ಲೋಪವನ್ನು ಸರ್ಕಾರದ ಆಯ್ಕೆ ಸಮಿತಿಗಳು ಸತತವಾಗಿ ಮಾಡುತ್ತಾ ಬಂದಿವೆ; ಅದನ್ನು ಈ ವರ್ಷವೂ ಮಾಡಲಾಗಿದೆ. ವಿಜ್ಞಾನ-ತಂತ್ರಜ್ಞಾನ ಕ್ಷೇತ್ರದಲ್ಲಿ ನಮ್ಮ ರಾಜ್ಯದಲ್ಲಿ ಕೆಲಸ ಮಾಡಿರುವವರು ಬೇಕಾದಷ್ಟು ಮಂದಿ ಇದ್ದಾರೆ, ಆದರೆ ವಿಜ್ಞಾನ ವಿಭಾಗದಲ್ಲಿ ಪ್ರಶಸ್ತಿಗೆ ಆಯ್ಕೆಯಾಗುವವರು ವಿರಳ. ಈ ವರ್ಷ ಕೇವಲ ಒಬ್ಬರನ್ನು ಗುರುತಿಸಲಾಗಿದೆ. ಇದು ಭಾರಿ ನಾಚಿಕೆಗೇಡಿನ ಸಂಗತಿ. ನಮ್ಮ ಆದ್ಯತೆಗಳು ಎಷ್ಟು ದಿಕ್ಕುತಪ್ಪಿವೆಯೆಂಬುದಕ್ಕೆ ಇದೊಂದು ಸೂಚನೆ. ಒಂದು ಕವನ, ಕತೆ, ನಾಟಕ ಬರೆದವರಿಗಿಂತಲೂ ಒಂದು ಸಂಶೋಧನೆ ಮಾಡಿದವರು ಕನಿಷ್ಠರೆಂಬ ತಪ್ಪು ಭಾವನೆಯನ್ನು ಇದು ಉಂಟುಮಾಡುತ್ತದೆ. ರಾಜ್ಯೋತ್ಸವ ಪ್ರಶಸ್ತಿಯ ಮನ್ನಣೆಗೆ ಪಾತ್ರರಾಗಲು ವಿಶೇಷ ಅರ್ಹತೆಯಿರುವ ಹತ್ತಾರು ವಿಜ್ಞಾನಿಗಳ ಹೆಸರುಗಳನ್ನು ಯಾರು ಬೇಕಾದರೂ ಪಟ್ಟಿ ಮಾಡಲು ಸಾಧ್ಯವಿದೆ. ಸಾಹಿತಿಗಳಿಗೆ ಎಂಟು, ವಿಜ್ಞಾನಿಗಳಿಗೆ ಒಂದು ಎಂಬುದು ಮೂರ್ತ ಜಗತ್ತಿನ ಬಗ್ಗೆ ನಮಗಿರುವ ಅನಾದರವನ್ನೇನಾದರೂ ಪ್ರತಿಫಲಿಸುತ್ತದೆಯೇ ಎಂಬ ಅನುಮಾನ ಬರುತ್ತದೆ. ಸಾಹಿತಿಗಳನ್ನು ದೂರವಿಡ ಬೇಕೆಂದಲ್ಲ, ಆದರೆ ವಿಜ್ಞಾನಿಗಳನ್ನು ಇನ್ನೂ ಹತ್ತಿರ ಬರಮಾಡಿಕೊಳ್ಳಬೇಕು. ಜನರ ಮಧ್ಯೆ ಬಂದರೆ ಅವರ ಸಂಶೋಧನೆಗಳು ಇನ್ನೂ ಹೆಚ್ಚು ಉಪಯುಕ್ತವಾಗುತ್ತವೆ.

ಬೆಂಗಳೂರು **ಕೆ. ಬಿ. ಅನಂಗ**

### ವಾಸ್ತುವೆಂಬ ಮೌಢ್ಯ

ಮೂಢನಂಬಿಕೆಯ ಕೆಸರಿನಿಂದ ಮೇಲೇಳಲಾರದಷ್ಟು ಆಳಕ್ಕೆ ನಮ್ಮ ಜನ ಹುದುಗಿಹೋಗಿದ್ದಾರೆ. ನಂಬಿಕೆ ಮತ್ತು ಮೂಢನಂಬಿಕೆಗಳ ವ್ಯತ್ಯಾಸ ತಿಳಿಯಲಾರದಷ್ಟು ಅವೈಚಾರಿಕತೆ ವಿದ್ಯಾವಂತರನ್ನು ಆವರಿಸಿಕೊಂಡುಬಿಟ್ಟಿದೆ. ಜ್ಯೋತಿಷಕ್ಕೆ ಯಾವ ವೈಜ್ಞಾನಿಕ ನೆಲೆಗಟ್ಟು ಇರದಿದ್ದರೂ ಜನ ಮಾತ್ರ ಜಾತಕ, ಭವಿಷ್ಯ, ಅದನ್ನನುಸರಿಸಿ ಶಾಂತಿ, ಹೋಮ – ಇತ್ಯಾದಿ ಕಂದಾಚಾರದಲ್ಲೇ ಮುಳುಗಿದ್ದಾರೆ. ಇಂಥ ಜನಗಳ ಕಣ್ಣು ತೆರೆಸುವ ಬಗೆಯಲ್ಲಿ ಪ್ರೊ॥ ಬಿ. ವಿ. ವೀರಭದ್ರಪ್ಪ – ಇವರ ಲೇಖನ ಮೂಡಿಬಂದಿದೆ. ತಾವು ಹೇಳುವ ಜ್ಯೋತಿಷ ಸುಳ್ಳು ಎಂಬ ಸಂಗತಿ ಜ್ಯೋತಿಷಿಗಳಿಗೂ ಗೊತ್ತಿರುತ್ತದೆ.

ಸ್ನೇಹಿತರೊಬ್ಬರು ಮನೆ ಕಟ್ಟಲು ಹೊಸದಾಗಿ ಜಾಗ ಖರೀದಿಸಲು ಯೋಚಿಸಿ ಇಂಥ ಕಡೆ ಎಂದು ನಿರ್ಧಾರ ಮಾಡಿದರು. ತುಂಬಾ ದುಬಾರಿ ಮತ್ತು ಜನನಿಬಿಡ ಪ್ರದೇಶದಲ್ಲಿ ಜಾಗ ಸಿಕ್ಕೀತೆ ಎಂಬ ಅನುಮಾನ ಬಂತು. ಪ್ರಯತ್ನಕ್ಕಿಳಿವ ಮೊದಲು ಇದನ್ನು ಖಚಿತಪಡಿಸಿಕೊಳ್ಳುವ ಎಂದು ಪ್ರಸಿದ್ಧ ಜ್ಯೋತಿಷಿಯೊಬ್ಬರಲ್ಲಿಗೆ ಹೋದರು. ಅವರು ಬಲಾಬಲಗಳನ್ನು ಲೆಕ್ಕಹಾಕಿ ''ಇಲ್ಲಿ ನಿಮಗೆ ಜಾಗ ಸಿಗುವುದಿಲ್ಲ. ಈ ಪ್ರಯತ್ನಕ್ಕೆ ಇಳಿಯುವುದೇ ಬೇಡ'' ಎಂದು ಕಡ್ಡಿ ಮುರಿದಂತೆ ಹೇಳಿದರು. ಆ ಸ್ನೇಹಿತರ ಉತ್ಸಾಹಕ್ಕೆ ತಣ್ಣೀರೆರಚಿದಂತಾಯ್ತು. ತಮ್ಮೊಳಗೆ ಯೋಚಿಸಿ 'ಪ್ರಯತ್ನಕ್ಕೆ ಅಸಾಧ್ಯವಾದುದು ಯಾವುದು ? ನೋಡಿಯೇ ಬಿಡೋಣ' ಎಂದು ಮರುದಿನವೇ ಜಾಗದ ಅನ್ವೇಷಣೆಗೆ ತೊಡಗಿದರು. ಒಂದೇ ತಿಂಗಳೊಳಗೆ ಅವರು ಬಯಸಿದ ಕಡೆಗೆ ಜಾಗ ಮಾತುಕತೆಯಾಗಿ ಖರೀದಿಯೂ ಆಯ್ತು. ಆಮೇಲೆ ಅದೇ ಜ್ಯೋತಿಷಿಯ ಬಳಿ ಬಂದು 'ಜಾಗ ನನಗೆ ಸಿಕ್ಕಿ, ಖರೀದಿ ಆಯ್ತು. ಇದಕ್ಕೆ ನಿಮ್ಮ ಜ್ಯೋತಿಷ ಏನು ಹೇಳುತ್ತದೆ ?' ಎಂದು ಕೇಳಿದರು. ಆಗ ಆ ಪ್ರಸಿದ್ಧ ಜ್ಯೋತಿಷಿಗಳು 'ಜ್ಯೋತಿಷದ ಭವಿಷ್ಯಕ್ಕಿಂತ ಮಾನವ ಸಂಕಲ್ಪವೇ ಹೆಚ್ಚಿನದು' ಅಂದರಂತೆ. ಜನ ಆತ್ಮವಿಶ್ವಾಸದ ಮೇಲೆ ಬದುಕಬೇಕು. ಆದರೆ ಜ್ಯೋತಿಷದ ಮೇಲಿನ ನಂಬಿಕೆ ಆ ಶಕ್ತಿಯನ್ನೇ ಉಡುಗಿಸಿಬಿಟ್ಟಿದೆ. ಮಾಧ್ಯಮ




ಗಳಂತೂ ಜನಗಳಲ್ಲಿ ವೈಚಾರಿಕತೆಯನ್ನು ರೂಪಿಸುವುದು ಬಿಟ್ಟು ಮೂಢನಂಬಿಕೆಗಳನ್ನೇ ಜಾಹೀರುಪಡಿಸುವ ಪ್ರಕ್ರಿಯೆ ಯಲ್ಲಿ ತೊಡಗಿವೆ. ನಮ್ಮ ಸಿನೆಮಾ, ಧಾರಾವಾಹಿಗಳೆಲ್ಲ ಮೂಢನಂಬಿಕೆಗಳ ಸುತ್ತಮುತ್ತ ಹೊಸೆದು ನಿಂತ ಕತೆಗಳನ್ನೇ ಆಧರಿಸಿಕೊಂಡಿವೆ. ಇದು ಬದಲಾಗಬೇಕು.

ಕಿನ್ನಿಗೋಳಿ **ಸುಮುಖಾನಂದ ಜಲವಳ್ಳಿ**

### ಎಲ್ಲಿದೆ ಸಹಾನುಭೂತಿ ?

ನಮ್ಮ ದೇಶ ವಿಶಾಲವಾದ ಭೂಭಾಗ. ಪ್ರಾಕೃತಿಕ ವಿಕೋಪಗಳಿಗೆ, ತಲೆ ಕೆಟ್ಟ ವ್ಯಕ್ತಿಸಮೂಹಗಳ ಕುಕೃತ್ಯಗಳಿಗೆ ಒಂದಲ್ಲೊಂದು ರಾಜ್ಯ ಪಕ್ಕಾಗುತ್ತಿರುತ್ತಲೇ ಇರುತ್ತದೆ. ಸಹಸ್ರ ಸಹಸ್ರ ಜನ ಮನೆ-ಮಾರು ಜೀವ ಕಳೆದುಕೊಳ್ಳುತ್ತಲೇ ಇರುತ್ತಾರೆ. ವಿಚಿತ್ರವೆಂದರೆ, ಇತರ ರಾಜ್ಯಗಳವರಿಗೆ ಏನೂ ಅನ್ನಿಸುವುದಿಲ್ಲ, ಅಲ್ಲಿ ಹಬ್ಬ, ಸಮಾರಂಭಗಳು, ಸಂತೋಷ ಕೂಟಗಳು ನಡೆದೇ ಇರುತ್ತವೆ. ದಸರೆ ಹಬ್ಬದ ನಡುವೆಯೇ ಉತ್ತರ ಭಾರತ, ಪಾಕಿಸ್ತಾನಗಳು ಭೂಕಂಪ ದಿಂದ ತತ್ತರಿಸಿದವು. ಕಾಶ್ಮೀರದ ಎರಡು ಭಾಗಗಳು ೨೦-೨೫ ಸಹಸ್ರ ಜನರನ್ನು, ಅಪಾರ ಆಸ್ತಿಯನ್ನು ಕಳೆದು ಕೊಂಡವು, ಪಾಕಿಸ್ತಾನ ಸಹ. ಆದರೆ, ಇತರ ರಾಜ್ಯಗಳ ಜನ ಹಬ್ಬ ಆಚರಿಸಿದರು, ಪಾಯಸ ಉಂಡರು. ನಮ್ಮ ಕರ್ನಾಟಕ ಸರ್ಕಾರ ಅಪಾರ ಹಣ ವ್ಯಯಮಾಡಿ 'ಮೈಸೂರು ದಸರಾ' ಮಹಾನಾಟಕವಾಡಿತು. ಕೊನೆಗೆ ನಮ್ಮ ವಿಧಾನಸಭೆ ಎರಡು ನಿಮಿಷ ಮೌನ ಸಹ ಆಚರಿಸಲಿಲ್ಲ, ಧ್ವಜ ಅರ್ಧಕ್ಕಿಳಿಸಲಿಲ್ಲ, ಯಾವುದೂ ಕಡಿಮೆಯಾಗಲಿಲ್ಲ.

ದೇಶದ ಘಟಕಗಳಿಗೆ, ಇತರ ಜನರಿಗೆ ಒಂದು ಕಡೆ ಆಘಾತವಾದಾಗ ಎಲ್ಲೆಡೆಗಳಲ್ಲೂ ಸ್ಪಂದನವಿರಬೇಕು. ಎಲ್ಲ ಮನರಂಜನೆ ಕೂಡಲೇ ನಿಲ್ಲಬೇಕು. ಅಲ್ಲಿಗೆ ಸಹಾಯಕ್ಕಾಗಿ ಧಾವಿಸಬೇಕು. ಸನ್ನಿವೇಶ ಹೀಗಿದೆಯೇ ಎಂದು ನಮ್ಮನ್ನು ನಾವೇ ಕೇಳಿಕೊಳ್ಳಬೇಕು.

ಸಾಗರ **ಬ. ನಾ. ರಘುರಾಮ್**

### ಶಿಕ್ಷಣ ಕ್ರಮ

ಶಿಕ್ಷಣದ ಬಗ್ಗೆ ಅದರಲ್ಲೂ ಕನ್ನಡದ ಕಲಿಕೆಯ ಬಗ್ಗೆ ತಮ್ಮ ಪತ್ರಿಕೆಯಲ್ಲಿ ಬಂದಿರುವ ಲೇಖನಗಳನ್ನು ಶ್ರದ್ಧೆಯಿಂದ ಓದುತ್ತಿದ್ದೇನೆ. ಆದರೆ ಈ ಲೇಖಕರು ಯಾರೂ ಶಾಲಾ ತರಗತಿಗಳಲ್ಲಿ ಶಿಕ್ಷಣ ದೃಷ್ಟಿಯಿಂದ ಅನಾನುಕೂಲ ಪರಿಸರದಿಂದ ಬರುವ ಮಕ್ಕಳ ಕಲಿಕೆ ಉತ್ತಮಗೊಳ್ಳಲು ಏನು ಮಾಡಬೇಕು, ಏನು ಮಾಡಬಹುದು ಎಂಬ ವಿಚಾರ ವಿವರಿಸುತ್ತಿಲ್ಲ.

ಎಲ್ಲಾ ಶಿಕ್ಷಣಕ್ಕೂ ಭಾಷಾ ಕೌಶಲ್ಯಗಳು ಮೂಲ. ''ಶಿಕ್ಷಣದ ಬೆನ್ನುಮೂಳೆ ಭಾಷಾ ಕೌಶಲ್ಯಗಳು'' ಎನ್ನುತ್ತಾರೆ ಶಿಕ್ಷಣ ತಜ್ಞರು. ಬುದ್ಧಿ ಬೆಳವಣಿಗೆಗೂ ಭಾಷಾ ಕೌಶಲ್ಯ ಗಳಿಗೂ ನಿಕಟ ಸಂಬಂಧವಿದೆ. ಭಾಷೆ ಕಲಿಯುವುದು ಮಕ್ಕಳಿಗೆ ಉಸಿರಾಟದಷ್ಟೇ ಮುಖ್ಯ ಮತ್ತು ಸ್ವಾಭಾವಿಕ. ಓದುವುದು ಬರೆಯುವುದು ಶಾಲಾ ಶಿಕ್ಷಣದಲ್ಲಿ ಮುಖ್ಯ. ಅವುಗಳಿಗೆ ಸಂಕೇತಗಳನ್ನು ಬಳಸುವ ಕೌಶಲ್ಯ ಅತಿ ಮುಖ್ಯ. ಸಂಕೇತಗಳನ್ನು ಬಳಸುವ ಕೌಶಲ್ಯವೇ ಬುದ್ಧಿಶಕ್ತಿಯ ಬೆಳವಣಿಗೆಗೆ ಪೋಷಕಾಂಶ. ಕನ್ನಡವನ್ನು ಸಮರ್ಪಕವಾಗಿ ಪ್ರಾಥಮಿಕ ಹಂತದಲ್ಲಿ ಮಕ್ಕಳು ಕಲಿಯುತ್ತಿಲ್ಲ ಎಂಬ ಸತ್ಯವನ್ನು ಅನೇಕ ಸಮೀಕ್ಷೆಗಳು ತಿಳಿಸಿವೆ. ಆದರೆ ಈ ದೋಷ/ ಲೋಪ ಪರಿಹಾರಕ್ಕೆ ಸೂಕ್ತ ಚಿಕಿತ್ಸೆ ಯಾರೂ ರೂಪಿಸುತ್ತಿಲ್ಲ.

ತುಮಕೂರಿನ ಮಾರುತಿ ವಿದ್ಯಾಕೇಂದ್ರದ ಶಾಲೆಯಲ್ಲಿ ಕಳೆದ ಇಪ್ಪತ್ತು ವರ್ಷಗಳಿಂದಲೂ ಹಲವಾರು ಪ್ರಯೋಗ ಗಳನ್ನು ಯಶಸ್ವಿಯಾಗಿ ಮಾಡಿ ಕನ್ನಡವನ್ನು ಸಮರ್ಪಕವಾಗಿ ಕಲಿಸಲು ಸೂಕ್ತ ಕಲಿಕಾ ಸಾಮಗ್ರಿಗಳನ್ನು ರೂಪಿಸಲಾಗಿದೆ. ಇದನ್ನು ಶಿಕ್ಷಣ ಇಲಾಖೆಯ ಗಮನಕ್ಕೂ ತರಲಾಗಿದೆ. ಅದರ ಮುಖ್ಯ ಅಂಶಗಳು ಇವು :

(೧) ಅನಾನುಕೂಲ ಪರಿಸರದಿಂದ ಬರುವ ಮಕ್ಕಳಿಗೆ, ಅದರಲ್ಲೂ ಗ್ರಾಮಾಂತರ ಪ್ರದೇಶದ ಮಕ್ಕಳಿಗೆ, ಶಾಲೆಗೆ ಸೇರಿದ ಮೇಲೆ ಮೊದಲ ನಾಲ್ಕು ತಿಂಗಳು ಸಂಕ್ಷಿಪ್ತ ನರ್ಸರಿ ಶಿಕ್ಷಣ/ ಪೂರ್ವಸಿದ್ಧತೆಯ ಶಿಕ್ಷಣ ಒದಗಿಸಬೇಕು.

(೨) ಕನ್ನಡ ಭಾಷಾ ಕೌಶಲ್ಯಗಳು ಕಿರಿಯ ಪ್ರಾಥಮಿಕ ಹಂತದಲ್ಲಿ ಸರಳ ಅಕ್ಷರಗಳ ಗುಣಿತಾಕ್ಷರಗಳು ಸಂಯುಕ್ತಾಕ್ಷರಗಳು, ಮಹಾಪ್ರಾಣ, ಅಲ್ಪಪ್ರಾಣಗಳ ಬಳಕೆ ಹಂತ ಹಂತವಾಗಿ, ಹಲವಾರು ಉದಾಹರಣೆಗಳ ಮೂಲಕ ಬೋಧನೆಯಾಗಬೇಕು.

(೩) ಲಿಂಗ ಬದಲಾವಣೆ, ವಚನ ಬದಲಾವಣೆ, ಪದಗಳ ವರ್ಗೀಕರಣ ಸ್ವಲ್ಪ ಪರಿಚಯವಾದರೆ ಸಾಕು.

ಸಂಧಿ ಪ್ರಕರಣ, ಸಮಾಸ ಪ್ರಕರಣ, ಗುರು, ಲಘು ಹಾಕುವುದು, ಅಲಂಕಾರಗಳು ಮುಂತಾದ ವ್ಯಾಕರಣಾಂಶಗಳನ್ನು ಪ್ರೌಢಶಾಲೆಗಳಲ್ಲಿ ಬೇಕಾದರೆ ಕಲಿಸಲಿ, ಪ್ರಾಥಮಿಕ ಹಂತದಲ್ಲಿ ಅವುಗಳ ಗೋಜಿಗೆ ಹೋಗದಿರುವುದು ಒಳ್ಳೆಯದು.

(೪) ಗಣಿತ ಬೋಧನೆಯಲ್ಲಿ ಅಂಕಗಣಿತದ ಮೂಲ ಕೌಶಲ್ಯಗಳು – ಕೂಡುವುದು, ಕಳೆಯುವುದು, ಗುಣಾಕಾರ, ಭಾಗಾಕಾರ ಚೆನ್ನಾಗಿ ಕಲಿಯಬೇಕು. ಬೀಜಗಣಿತ, ಪ್ರಾಥಮಿಕ ಹಂತದಲ್ಲಿ ಬೇಡ, ರೇಖಾಗಣಿತದಲ್ಲೂ ಕೆಲವು ಸರಳ ಪರಿಕಲ್ಪನೆಗಳನ್ನು ಕಲಿತರೆ ಸಾಕು.

(೫) ವಿಜ್ಞಾನವನ್ನು ಸರಳ ಪ್ರಯೋಗಗಳ ಮೂಲಕ, ನೇರ ಅನುಭವಗಳ ಮೂಲಕ ಕಲಿಸಬೇಕು.

(೬) ಸಮಾಜ ವಿಜ್ಞಾನ ಪಾಠಗಳಲ್ಲಿ ಕ್ರಾಂತಿಕಾರಿ ಬದಲಾವಣೆಗಳಾಗಬೇಕು. ಈಗ ಬಳಸುತ್ತಿರುವ ಪಠ್ಯ ಪುಸ್ತಕಗಳು ಬಹಳ ಬದಲಾಗಬೇಕು. ಅನೇಕ ದೈನಂದಿನ ಪತ್ರಿಕೆಗಳು ಸಾಪ್ತಾಹಿಕ ಪುರವಣಿಗಳಲ್ಲಿ, ವಿಜ್ಞಾನ ಪುರವಣಿಗಳಲ್ಲಿ ತುಂಬ ಒಳ್ಳೆಯ ಚಿತ್ರಗಳ ಸಹಿತ ಅನೇಕ ಉಪಯುಕ್ತ ವಿಷಯಗಳನ್ನು ಚೆನ್ನಾಗಿ ವಿವರಿಸುತ್ತಿದ್ದಾರೆ. ಆದುದರಿಂದ ಪಠ್ಯಪುಸ್ತಕಗಳಲ್ಲೂ ಇದು ಸುಲಭಸಾಧ್ಯ.

ತುಮಕೂರು *ಕೆ. ವೆಂಕಟರಾಮಯ್ಯ*

**ದಸರಾ ಉದ್ಘಾಟನೆ**

ಪ್ರೊ॥ ಬರಗೂರು ರಾಮಚಂದ್ರಪ್ಪನವರು ನಾಡ ಹಬ್ಬದ ಸಾಂಸ್ಕೃತಿಕ ಆಚರಣೆಗೆ ಹೊಸ ಭಾಷ್ಯವನ್ನು ಬರೆದು, ಅದನ್ನು ಮುಂದೆ ಹೇಗೆ ಆಚರಿಸಬೇಕೆಂಬುದರ ಬಗ್ಗೆ ಒಂದು ನೀಲಿ ನಕಾಶೆಯನ್ನು ಕೊಟ್ಟು ತಮ್ಮ ಯಾವತ್ತಿನ ಛಾಪು ಒತ್ತಿರುವುದು ಸ್ವಾಗತಾರ್ಹ ಸಂಗತಿಯೇ ಸರಿ. ಅವರಾಡಿದ ''ಪೂಜೆಯ ಪಾಡಿಗೆ ಪೂಜೆ, ಸಮಾರಂಭದ ಪಾಡಿಗೆ ಸಮಾರಂಭ'' ಎಂಬ ಮಾತು ಪ್ರಾಯೋಗಿಕ ಸತ್ಯವಾಗಬೇಕು.

ಪ್ರಸ್ತುತ ಜಾಗತಿಕ ಸಾಮ್ರಾಜ್ಯಶಾಹಿಗಳ 'ಯುದ್ಧೋದ್ಯಮ' ಹಾಗೂ ಧಾರ್ಮಿಕವಾದಿಗಳ 'ಭಯೋತ್ಪಾದನೆ' ಇವೆರಡರಿಂದ ಅಮಾಯಕಜನ ಅಪಾರ ಸಾವು ನೋವು ಹಿಂಸೆಗೆ ಈಡಾಗುತ್ತಿದ್ದಾರೆ. ಇಂಥ ವಿಷಮ ಪರಿಸ್ಥಿತಿಯಲ್ಲಿ ಜನತಂತ್ರವಾದಿಗಳು ಮಹಿಷಾಸುರ, ರಾವಣ, ದುರ್ಯೋಧನ ಮುಂತಾದವರ ವಿರುದ್ಧ ಸಂಭ್ರಮಿಸುವುದನ್ನು ಬಿಟ್ಟು ಸಂಘಟಿತರಾಗಿ, ಮೇಲಿನ 'ಹಿತಶತ್ರು'ಗಳ ವಿರುದ್ಧ ನಿಲ್ಲದಿದ್ದರೆ ನಮ್ಮ ಪ್ರಜಾಪ್ರಭುತ್ವ ಕಟ್ಟಡ ಬುಡಮೇಲಾಗುತ್ತದೆ ಎಂಬ ಬರಗೂರರ ಕಳಕಳಿ ಮೆಚ್ಚತಕ್ಕದ್ದೇ.

ಆದರೆ ಸದರಿ ಭಾಷಣಕಾರರು ತಮ್ಮ ಮಾತಿನ ಓಘದಲ್ಲಿ ಆಯುಧಪೂಜೆಯನ್ನು ಕೇವಲ ''ಸಂಸಾರ ಸಂಸ್ಕೃತಿ''ಯ ವೈಭವೀಕರಣವೆಂದು ಸಾರಾಸಗಟಾಗಿ ಅರ್ಥೈಸಿಕೊಂಡಿರುವುದು ಅಷ್ಟಾಗಿ ಒಪ್ಪತಕ್ಕ ಮಾತಲ್ಲ. ಯಾಕೆಂದರೆ ಆರಂಭಕಾಲದಲ್ಲಿ ಇದು ಯುದ್ಧಾಸ್ತ್ರಗಳ ಪೂಜೆಯಾಗಿತ್ತೆಂಬುದೇನೋ ನಿಜ. ಆದರೆ ನಮ್ಮ ಕೃಷಿ ಸಂಸ್ಕೃತಿಯ ಹಿನ್ನೆಲೆಯಿಂದ ನೋಡಿದಾಗ ರೈತರ ನೇಗಿಲು, ರಂಟೆ, ಕುಂಟೆ ಮೊದಲುಗೊಂಡು ಕೈಕಸಬುದಾರರಾದ ಕಮ್ಮಾರ, ಚಮ್ಮಾರ, ಅಗಸ, ಅಕ್ಕಸಾಲಿಗ – ಇವರೆಲ್ಲರ ಸಕಲೆಂಟು ಸಾಧನಗಳೂ ಆಯುಧ ಸಾಮಗ್ರಿಗಳೂ ಪರಮ ಪವಿತ್ರವೇ. ಅವು ಇಂದಿಗೂ ಆರಾಧಿಸಲ್ಪಡುತ್ತಿವೆ. ಇದು 'ಉದ್ಧಾರ ಸಂಸ್ಕೃತಿ'ಯ ಜೀವಂತ ಲಕ್ಷಣ.

*ಬೆಂಗಳೂರು* *ಪ್ರೊ॥ ಶಿವರಾಮಯ್ಯ*

**ಕೆ. ಎಸ್. ನರಸಿಂಹಸ್ವಾಮಿ**

ಸಾಹಿತ್ಯದ ಅದ್ಭುತವಾದ ಪ್ರಕಾರವಾದ ಕಾವ್ಯವನ್ನು ಸರಳವಾಗಿ ಬದುಕಿನ ವಸ್ತುಗಳಿಂದ ತುಂಬಿ ಸಾಮಾನ್ಯ ಮನುಷ್ಯರು ಅರಿತು ಆನಂದಿಸುವ ರೀತಿಯಲ್ಲಿ ಬರೆದು ಕನ್ನಡ ಕಾವ್ಯಪರಂಪರೆಯಲ್ಲಿ ಕ್ರಾಂತಿಯನ್ನು ಮಾಡಿದ ಕವಿ ಕೆ. ಎಸ್. ನ. ರವರ ಬಗ್ಗೆ ಬರೆದಿರುವ ಚಿಕ್ಕ ಚೊಕ್ಕ ಲೇಖನವಿದು. ಮಲ್ಲಿಗೆಯ ಕಂಪಿನಿಂದ ಜನತೆಯ ಹೃದಯದಲ್ಲಿ ಸದಾ ನೆಲೆಸಿರುವ ಈ ಶ್ರೇಷ್ಠ ಕವಿ ತಮ್ಮ ಎಲ್ಲಾ ಕವಿತೆಗಳಲ್ಲಿ ಬದುಕಿನ ಸಮಗ್ರ ಚಿತ್ರಣವನ್ನು ನಿರೂಪಿಸಿರುವ ಕ್ರಮದಲ್ಲಿ ಮನಸ್ಸನ್ನು ತುಂಬುವ ಇಂಪುಗಳೊಂದಿಗೆ ಸಾಹಿತ್ಯ ವಿಕಾಸಗೊಂಡು ಭಾಷೆ ಸಮೃದ್ಧಿಯಾಗುವ ಕ್ರಮ ವಿಶಿಷ್ಟವಾದುದು. ಕಾವ್ಯಗಳೆಂದರೆ ಕಬ್ಬಿಣದ ಕಡಲೆಗಳೆಂಬ ಕಾಲದಲ್ಲಿ ಕಬ್ಬಿಣವನ್ನು ಸಂಸ್ಕರಿಸುವ ವಿಧಾನಗಳನ್ನು ಅಳವಡಿಸಿಕೊಂಡು ರುಚಿಯಾದ ಮಸಾಲೆ ಕಡಲೆಗಳಾಗಿ ಶಕ್ತಿದಾಯಕ ಗೋಡಂಬಿಗಳಾಗಿ ಜನರಲ್ಲಿ ಸಾಹಿತ್ಯದ ಅಭಿರುಚಿಯನ್ನು ಬೆಳೆಸಿ ಕವನಗಳನ್ನು ಓದುವ ಬದಲು ಹಾಡುವ ಹೊಸ ಅಧ್ಯಾಯಕ್ಕೆ ನಾಂದಿ ಹಾಡಿದ ಕೆ. ಎಸ್. ನ. ಹಾಡುವ ಕವಿಯಾಗಿ ಜನಮನದಲ್ಲಿ ನಿರಂತರವಾಗಿ ನೆಲೆಸುವ ಅಪರೂಪದ ವ್ಯಕ್ತಿಯಾಗಿ ನೆಲೆನಿಂತಿರುತ್ತಾರೆ. ಜನರನ್ನು ಹತ್ತಿರಕ್ಕೆ ಕರೆದು ಕವಿತೆಗಳ ಸಿಹಿಯನ್ನು ಹಂಚಿರುವ ನರಸಿಂಹಸ್ವಾಮಿ ಮರೆಯಾಗದ ಕವಿಶ್ರೇಷ್ಠ.

ಬೆಂಗಳೂರು *ನರೇಂದ್ರ ಸಿರಕಜೆ*

**ನವೆಂಬರ್ ಸಂಚಿಕೆ**

'ಬಾಲಕಾರ್ಮಿಕ' ಪದ್ಧತಿಯ ದಸರಾ ವಸ್ತು ಪ್ರದರ್ಶನದ ಚಿತ್ರದ ಮುಖಪುಟ ಹೊತ್ತು ತಂದ ಸಂಚಿಕೆ ತುಂಬಾ ಆಕರ್ಷಕವಾಗಿತ್ತು. 'ಈ ತಿಂಗಳು' ವಿಭಾಗದ ವಿಚಾರಗಳಂತು ಬಹಳ ಅರ್ಥವತ್ತಾಗಿವೆ. ಸಂಪಾದಕೀಯದಲ್ಲಿ ವಿವಿಧತೆಯಲ್ಲಿ ಏಕತೆ ಎಂಬ ವಿಷಯ ಅರಿವಾಗುವಂತೆ ಉದಾಹರಣೆಸಹಿತ ಕರ್ನಾಟಕದ ಜನ ''ಪರೋಪಕಾರಾರ್ಥಂ ಇದಂ ಶರೀರಮ್'' ಎಂಬ ಮಾತನ್ನು ನಿಜವಾಗಿಸಿದ್ದಾರೆ. 'ಮಂಜುಳಗಾನ' ಓದುತ್ತಾ ಓದುತ್ತಾ ತುಂಬಾ ಖುಷಿಯಾಯಿತು. ಹಳೆಯ ಸಿನೆಮಾಗಳನ್ನು ಅವಲೋಕನ ಮಾಡಿದ ಹಾಗೆ ಆಯಿತು. ಇಂದು ಮಾತೆತ್ತಿದರೆ ಡಿಸ್ಕೊ ರಾಗಗಳನ್ನು ಕೇಳಿ-ಕೇಳಿ ಬೇಸರವಾಗಿದ್ದ ಮನಸ್ಸಿಗೆ ಈ ಲೇಖನ ಆಹ್ಲಾದ ನೀಡಿತು. ತಾರಿಣಿಯವರ ಚರಮಗೀತೆ ಅರ್ಥಗರ್ಭಿತವಾಗಿತ್ತು. ತಿಂಗಳ 'ತಿಳಿವು' ನೆಲ ಮುಗಿಲುಗಳ ನಡುವೆ ಧರ್ಮದ ಹೋರಾಟವೇ ಆಗಿದೆ.

ಪಾಂಡವಪುರ *ಮಹಾಬಲ ಮೃತ್ಯುಂಜಯ*

'ಕಥನ' ಎಂಬ ಹೆಸರಿನ ಜಾಗತಿಕ ಕನ್ನಡಿಗರ ಕೂಟ ಮತ್ತು 'ಶ್ರೀ ರಾಘವೇಂದ್ರ ಪ್ರಕಾಶನದ ಅಂಬಾರಕೊಡ್ಲ' ಸಂಸ್ಥೆಗಳು ಸೇರಿ ರಾಜ್ಯಮಟ್ಟದ ಯುಗಾದಿ ಕಥಾಸ್ಪರ್ಧೆಯನ್ನು ಏರ್ಪಡಿಸಿವೆ. ಅತ್ಯುತ್ತಮವೆಂದು ಪರಿಗಣಿಸಲ್ಪಟ್ಟ ಕತೆಗಳಿಗೆ ಕ್ರಮವಾಗಿ ೫೦೦೦ ರೂಪಾಯಿ, ೩೦೦೦ ರೂಪಾಯಿ ಹಾಗೂ ೨೦೦೦ ರೂಪಾಯಿ ಬಹುಮಾನಗಳನ್ನು ಇಟ್ಟಿದೆ. ಸ್ಪರ್ಧೆಯಲ್ಲಿ ಭಾಗವಹಿಸುವವರಿಗೆ ವಯೋಮಿತಿಯ ನಿರ್ಬಂಧ ಇರುವುದಿಲ್ಲ, ಆದರೆ ಎರಡು ಪುಸ್ತಕಗಳಿಗಿಂತ ಹೆಚ್ಚು ಕೃತಿಗಳನ್ನು ಹೊರತಂದವರು ಈ ಸ್ಪರ್ಧೆಯಲ್ಲಿ ಭಾಗವಹಿಸುವಂತಿಲ್ಲ. ಕತೆಗಳು ಸ್ವತಂತ್ರ ರಚನೆಗಳಾಗಿರಬೇಕು. ಇದುವರೆಗೆ ಯಾವುದೇ ಪತ್ರಿಕೆಯಲ್ಲಾಗಲಿ, ಸಂಕಲನದಲ್ಲಾಗಲಿ ಪ್ರಕಟವಾಗಿರಕೂಡದು. ಅನುವಾದಿತ ಕತೆಗಳಿಗೂ ಅವಕಾಶವಿಲ್ಲ. ಸ್ಪರ್ಧೆಯಲ್ಲಿ ಭಾಗವಹಿಸುವವರು ಒಂದಕ್ಕಿಂತ ಹೆಚ್ಚು ಕತೆಗಳನ್ನು ಕಳಿಸಿಕೊಡುವಂತಿಲ್ಲ. ಕತೆಯನ್ನು ಕಳಿಸುವವರು ತಮ್ಮ ಹೆಸರು ಮತ್ತು ಪೂರ್ಣ ವಿಳಾಸವನ್ನು ಪ್ರತ್ಯೇಕ ಕಾಗದದಲ್ಲಿ ಬರೆದು, ಪಾಸ್‌ಪೋರ್ಟ್ ಸೈಜಿನ ತಮ್ಮ ಒಂದು (ಇತ್ತೀಚಿನ) ಭಾವಚಿತ್ರವನ್ನೂ ಅದರೊಂದಿಗೆ ಇಡಬೇಕು. ಬಹುಮಾನಿತ ಮೂರು ಕತೆಗಳೊಂದಿಗೆ ಮೆಚ್ಚುಗೆ ಪಡೆದ ಐದು ಕತೆಗಳನ್ನೂ ಸೇರಿಸಿ ಪ್ರತ್ಯೇಕ ಕಥಾ ಸಂಕಲನವೊಂದನ್ನು ಪ್ರಕಟಿಸಲಾಗುವುದು. ಸಂಕಲನರೂಪದಲ್ಲಿ ಪ್ರಕಟಿಸಿದ ಬಗ್ಗೆ ಸದ್ರಿ ಕತೆಗಾರರಿಗೆ ಪ್ರತ್ಯೇಕ ಗೌರವ ಸಂಭಾವನೆ ಇರುವುದಿಲ್ಲ. ಕತೆಯನ್ನು ಕಳಿಸುವುದಕ್ಕೆ ಕೊನೆಯ ದಿನಾಂಕ ೧೫-೦೧-೨೦೦೬. ಕತೆಯನ್ನು ಕಳಿಸಬೇಕಾದ ವಿಳಾಸ : **ಪ್ರಧಾನ ಸಂಚಾಲಕರು, ಶ್ರೀ ರಾಘವೇಂದ್ರ ಪ್ರಕಾಶನ (ಕಥಾಸ್ಪರ್ಧೆ ವಿಭಾಗ), ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪ (ಉತ್ತರ ಕನ್ನಡ ಜಿಲ್ಲೆ).**

ನಮ್ಮ ೨೩ನೇ ಪ್ರಕಟಣೆಯಾಗಿ 'ಮಕ್ಕಳು' ಎಂಬ ಹನಿಗವನ ಸಂಕಲನವನ್ನು ಹೊರತರಲು ಉದ್ದೇಶಿಸಿದೆ. ಒಬ್ಬರು ಎಷ್ಟು ಬೇಕಾದರೂ ಹನಿಗವನಗಳನ್ನು ಕಳುಹಿಸಬಹುದು. ಆಸಕ್ತಿಯುಳ್ಳವರು ಆರು ಸಾಲು ಮೀರದ 'ಮಕ್ಕಳ' ವಿಷಯಕ್ಕೆ ಸಂಬಂಧಪಟ್ಟಂತಹ ಹನಿಗವನಗಳನ್ನು ದಿನಾಂಕ ೩೧-೧-೨೦೦೬ರೊಳಗೆ ಈ ಕೆಳಕಂಡ ವಿಳಾಸಕ್ಕೆ ಕಳುಹಿಸಬಹುದು.

*ಕೋ. ಲ. ರಂಗನಾಥರಾವ್, ಗುರುರಾಜ ಪ್ರಕಾಶನ, ನಂ. ೨೩೬, ೧೧ನೇ ಮುಖ್ಯರಸ್ತೆ*
*ಏಜೀಸ್ ಕಾಲೋನಿ, ಅರೇಹಳ್ಳಿ, ಬೆಂಗಳೂರು - ೫೬೦ ೦೬೧.*

**'ಗುರುತು'**

ಮುಂಬಯಿ ಪ್ರಕಾಶಿತ 'ಗುರುತು' ಪತ್ರಿಕೆಯು ಕಥಾ ಸ್ಪರ್ಧೆಯನ್ನು ಆಯೋಜಿಸಿದೆ. ಕಥೆಯು ಫೂಲ್‌ಸ್ಕೇಪ್ ಹಾಳೆಯ ಒಂದೇ ಮಗ್ಗುಲಿನಲ್ಲಿದ್ದು ೮-೧೦ ಪುಟಗಳನ್ನು ಮೀರಿರಬಾರದು. ಕಥೆಯು ಹಿಂದೆ ಎಲ್ಲೂ ಪ್ರಕಟವಾಗಿರಬಾರದು. ಅನುವಾದಿತ ಕತೆಗಳಿಗೆ ಆಸ್ಪದವಿಲ್ಲ. ಕಥೆಗಾರರು ತಮ್ಮ ವಿಳಾಸ, ಭಾವಚಿತ್ರ ಮತ್ತು ಸ್ವಪರಿಚಯ ಪತ್ರವನ್ನು ಕಥೆಯ ಜೊತೆಗೆ ಪ್ರತ್ಯೇಕವಾಗಿ ಲಗತ್ತಿಸಿರಬೇಕು. ಕಥೆ ನಮಗೆ ತಲುಪಬೇಕಾದ ಕೊನೆಯ ತಾರೀಖು ೧೫-೧೨-೨೦೦೫. ಬಹುಮಾನದ ಮೊತ್ತ: ಪ್ರಥಮ ೫೦೦೦, ದ್ವಿತೀಯ ೩೦೦೦, ತೃತೀಯ ೨೦೦೦. *ಕಥೆ ತಲುಪಬೇಕಾದ ವಿಳಾಸ :* **The Editor, Gurutu Katha Spardhe - 2005, Billawa Jagriti Balaga, 1 Motiwala Mansion, Nadirshah Sukhia Street, Fort, Mumbai - 400 001.**

*೫ನೇ ಪುಟದಿಂದ... (ಸಂಪಾದಕೀಯ)*

ಎಂಥದೋ ಭಾರವನ್ನು ಹೊರಲು ಮಾತ್ರ ಸಮರ್ಥವಾದ್ದು, ಎನ್ನುತ್ತಾನೆ ನಿರುಕ್ತಕಾರ ಯಾಸ್ಕ. ''ಓದದ ಬಾಯಮೃತಾನ್ನವ ಮೋದದ ಬಾಯ್ ಸಜ್ಜನರ್ಗಳಂ ಪ್ರಿಯದಿಂದಾದರಿಸದ ಬಾಯದು ತಾಂ ಮೇದಿನಿಯೊಳ್ ಬಿಲದ ಬಾಯಿ ಚೂಡಾರತ್ನ'' ಎಂದು ಶುಂಠರನ್ನು ಹೀಯಾಳಿಸುವಾಗ ಅವಕಾಶದಿಂದ ವಂಚಿತರಾದವರು ಹಾಗೇಕಾದರು, ಅವಕಾಶ ಸಿಕ್ಕವರು ಪೂರ್ತಿ ಪ್ರಯೋಜನ ಏಕೆ ಪಡೆಯಲಿಲ್ಲ, ಎಂಬುದನ್ನು ಪರಾಮರ್ಶಿಸಬೇಕು. ಅಂತೆಯೇ, ಓದಿದವರು ರೂಢಿಸಿಕೊಂಡದ್ದೆಷ್ಟು, ಯಾವ ಮೌಲ್ಯಗಳು ಅವರಲ್ಲಿ ಜೀವಂತವಾಗಿವೆ, ಎಂಬ ಪ್ರಶ್ನೆಗಳೂ ಪ್ರಸ್ತುತ. ಪುಸ್ತಕಗಳನ್ನು ಓದಿದ ಮತ್ತು ಬರೆದ ಕೆಲವರ ಜೀವನ ತೊಟ್ಟಿಯನ್ನು ನೋಡಿದಾಗ ಇವರು ಏಕಾದರೂ ಬರೆದು ದೊಡ್ಡವರಾದರೋ, ದೊಡ್ಡವರಾಗಿ ಇವರಿಗೆ ಇಷ್ಟು ಸಣ್ಣತನ ಹೇಗೆ ಬಂತೋ, ಎನಿಸಬಹುದು. ''ಸಾಕ್ಷರರು ಕುಮಾರ್ಗ ಹಿಡಿದರೆ ಅವರು ರಾಕ್ಷಸರಾಗುತ್ತಾರೆ'' ಎನ್ನುತ್ತದೆ ಒಂದು ಸಂಸ್ಕೃತ ವಾಕ್ಯ (ಸಾಕ್ಷರಾ ವಿಪರೀತಾಶ್ಚೇತ್ ರಾಕ್ಷಸಾ ಏವ ಕೇವಲಮ್॥ 'ಸಾಕ್ಷರಾ' ಎಂಬುದನ್ನು ತಲೆಕೆಳಕಾಗಿ ಓದಿದರೆ ಅದು 'ವಿಪರೀತ' ಎನಿಸಿಕೊಳ್ಳುತ್ತದೆ).

ಆಂಟನ್ ಚೆಕೋವನ ಒಂದು ಸಣ್ಣಕತೆ ಇದೆ, ''ಪಣ'' (ದ ಬೆಟ್) ಎಂದು ಅದರ ಹೆಸರು. ಏಕಾಂತದಲ್ಲಿ ೧೫ ವರ್ಷ ಇರಲು ಒಬ್ಬ ಯುವಕ ಪಣ ತೊಡುತ್ತಾನೆ. ಅದು ಶ್ರೀಮಂತನೊಬ್ಬನ ಸವಾಲಿಗೆ ಉತ್ತರ. ಶ್ರೀಮಂತನು ಯುವಕನಿಗೆ ಭಕ್ಷ್ಯ - ಭೋಜ್ಯ - ಮದ್ಯ - ಪುಸ್ತಕ, ಹೀಗೆ ಏನನ್ನು ಬೇಕಾದರೂ ಸರಬರಾಜು ಮಾಡಲು ಸಿದ್ಧನಿದ್ದಾನೆ. ಯುವಕನು ಮೊದಮೊದಲಿಗೆ ಚೆನ್ನಾಗಿ ತಿಂದ, ಕುಡಿದ ; ಆಮೇಲೆ ರಂಜಕ ಸಾಹಿತ್ಯ ಓದಿದ; ನಂತರ ಕತೆ - ಕಾದಂಬರಿಗೆ ಬಂದ. ಅನತಿಕಾಲದಲ್ಲಿ ಗಂಭೀರ ಚಿಂತನೆಯ ದಾರ್ಶನಿಕ ಗ್ರಂಥಗಳು ಮನಸೆಳೆದುವು. ವಿಶ್ವದ ಎಲ್ಲ ದೈತ್ಯ ಪ್ರತಿಭೆಗಳೊಡನೆ ಸಂವಾದದಲ್ಲಿ ವಿಹರಿಸಿದ. ಕಡೆಗೆ ೧೫ ವರ್ಷದ ಗಡುವು ತೀರುವುದಕ್ಕೆ ಒಂದು ಗಂಟೆ ಮುಂಚೆ ಏಕಾಂತದಿಂದ ಹೊರಬಂದು ಪಣವನ್ನು ಸೋತ ! ಪುಸ್ತಕಗಳಿಗಿಂತಲೂ ದೊಡ್ಡ ಶ್ರೀಮಂತಿಕೆ ಇನ್ನೆಲ್ಲಿಯದೆಂದು ತಿಳಿದು ಅವನು ಪಣವನ್ನು ಸೋತು ಶ್ರೀಮಂತನಿಗೆ ಹಾಯೆನಿಸಿದ. ''ಸ್ಖಾಲಿತ್ಯ ವಿಲ್ಲದ ಒಂದು ಶಬ್ದವನ್ನು ಚೆನ್ನಾಗಿ ಅರಿತು ಸರಿಯಾಗಿ ಪ್ರಯೋಗ ಮಾಡಿದರೆ ಸ್ವರ್ಗಸುಖ ಅದರಲ್ಲಿದೆ'' ಎನ್ನುತ್ತಾನೆ ಮಹಾಭಾಷ್ಯಕಾರ ಪತಂಜಲಿ. ಭಾಷೆಯ ಶುದ್ಧತೆ ಮತ್ತು ಚಿಂತನೆಯ ಪ್ರಖರತೆ, ಎರಡೂ ಪುಸ್ತಕ ಸಂಸ್ಕೃತಿಯ ಲಕ್ಷಣಗಳು. ಎರಡರ ಅಪಪ್ರಯೋಗವೂ ನಮ್ಮಲ್ಲಿ ಹೇರಳವಾಗಿದೆ. ಶೃತಿ, ಉಚ್ಛ, ಕೃಷ್ಣ ಹೀಗೆ ಏನೆಲ್ಲಾ ಕಾಗುಣಿತಗಳು ಮತ್ತು ಎಂಥ ಪುಸ್ತಕಗಳು ಬೇಕು ಎಂಬುದರ ವಿಚಾರವನ್ನೇ ಮಾಡದೆ ಕಣಜದಲ್ಲಿ ಹೊಟ್ಟು ತುಂಬುತ್ತಿರುವುದೆಷ್ಟು! ಇದರ ಇನ್ನೊಂದು ಮುಖವೆಂದರೆ ಪುಸ್ತಕ ಸಂಸ್ಕೃತಿಯ ಜಾಗದಲ್ಲಿ ಸನ್ಮಾನ ಸಂಸ್ಕೃತಿಯನ್ನು ಪ್ರತಿಷ್ಠಾಪಿಸುತ್ತಿರುವುದು. ಒಂದು ನಿಟ್ಟಿನಿಂದ ನೋಡಿದರೆ ನಮ್ಮಲ್ಲಿ ಮೂರು ವಿಧದ ಜನರುಂಟು : (ಅ) ಪುಸ್ತಕ ಓದಿ ಸ್ವಂತಿಕೆ ಬೆಳೆಸಿಕೊಂಡು ಚಿಂತನೆ - ಕ್ರಿಯೆಗಳ ಪ್ರಕ್ರಿಯೆಯಲ್ಲಿ ತೊಡಗುವವರು; (ಆ) ಪುಸ್ತಕ ಓದಿಯೂ ಪಕ್ವವಲ್ಲದವರು, ಪ್ರಯೋಜನವಿಲ್ಲದವರು, ಪುಸ್ತಕದ ಬದನೆಕಾಯಿ ವ್ಯಕ್ತಿತ್ವದವರು; ಮತ್ತು (ಇ) ಓದದೆಯೇ ಸರ್ವಜ್ಞತ್ವ ಪ್ರದರ್ಶಿಸುವವರು. ಇವುಗಳಲ್ಲಿ ಮೊದಲನೆಯ ಬಣದ ಪುಸ್ತಕ ಸಂಸ್ಕೃತಿ ನಮ್ಮದಾಗಬೇಕಿದೆ. ರಾಮನು ಹನುಮಂತನನ್ನು ಮೊದಲ ಬಾರಿಗೆ ಕಂಡಾಗ ಅವನ ಭಾಷೆಯ ಸೊಗಸು, ಬಹುಶ್ರುತತ್ವ, ವ್ಯವಹಾರಚಾತುರ್ಯ, ಅಪಶಬ್ದವೇ ಇಲ್ಲದ ಮಾತು, ಇವುಗಳಿಂದ ಬಹುವಾಗಿ ಆಕರ್ಷಿತನಾದನೆಂದು ವಾಲ್ಮೀಕಿ ವರ್ಣಿಸಿದ್ದಾನೆ. ಅಂತಹ ಸಂಸ್ಕೃತಿ ಯಾರೊಬ್ಬರ ಸ್ವತ್ತು ಆಗದೆ ಸಮಷ್ಟಿಯ ಲಕ್ಷಣವಾಗಬೇಕೆಂಬುದು ಪುಸ್ತಕ ಸಂಸ್ಕೃತಿಯ ಮಹತ್ತರ ಆಶಯ.

*೩ನೇ ಪುಟದಿಂದ... (ಈ ತಿಂಗಳು)*

ಒಂದು ಶಾಲೆಗೆ ಬೆಂಕಿ ಹಚ್ಚಿದರೆಂದು ವರದಿಯಾಗಿದೆ. ಅವಿವೇಕ ಮತ್ತು ಧೂರ್ತತೆ ಯಾವುದೇ ಒಂದು ದೇಶದ ಏಕಸ್ವಾಮ್ಯವಲ್ಲವೆಂಬುದು ಹಳೆಯ ಜ್ಞಾನ; ಆದರೆ ಅದಕ್ಕೆ ನಿದರ್ಶನಗಳು ಹೊಸಹೊಸದಾಗಿ ಬರುತ್ತಲೇ ಇರುತ್ತವೆ. ಯಾವನೋ ಒಬ್ಬ ಕುರಾನನ್ನು ಅವಹೇಳನ ಮಾಡಿದರೆ ಅದು ಪ್ರಪಾತಕ್ಕೆ ಬೀಳುವಷ್ಟು ಕುಬ್ಜವಾದ ಗ್ರಂಥವಲ್ಲ. ಹಾಗೂ ಅಪಚಾರವೆಸಗಿದ್ದರೆ ಆ ವ್ಯಕ್ತಿಗೆ ಕಾನೂನುರೀತ್ಯಾ ಶಿಕ್ಷೆ ನೀಡುವ ವ್ಯವಸ್ಥೆ ಇದೆ. ನಿರುದ್ಯೋಗಿ ಯುವಕರ ಭಾವನೆಗಳನ್ನು ಉದ್ರೇಕಗೊಳಿಸುವ ಬಂಡವಾಳವನ್ನು ಹೆಚ್ಚಿಸಿಕೊಂಡಾಗ ಚರ್ಚುಗಳಿಗೆ, ದೇವಸ್ಥಾನಗಳಿಗೆ ಮತ್ತು ಮಸೀದಿಗಳಿಗೆ ಬೆಂಕಿಹಚ್ಚುವ ತಂಡ ಬೆಳೆಯುತ್ತದೆ. ಬ್ರಿಟನ್ನಿನಲ್ಲಿ ಅಂಚೆ ಇಲಾಖೆಯು ಒಂದು ಸ್ಟಾಂಪನ್ನು ಹೊರತಂದಿದೆಯಂತೆ; ಅದರಲ್ಲಿ ಕ್ರೈಸ್ತಮತದವರಲ್ಲದವರು ಜೀಸಸ್‌ಗೆ ನಮಿಸುತ್ತಿರುವಂತೆ ಚಿತ್ರಿಸಲಾಗಿದೆಯೆಂದು ಸಂಶೋಧನೆ ನಡೆಸಲಾಗಿದೆಯಂತೆ; ಇದು ಅನ್ಯಮತೀಯರ ಅಭಿಮಾನಕ್ಕೆ ಧಕ್ಕೆಯುಂಟುಮಾಡುತ್ತದಂತೆ; ಆದ್ದರಿಂದ ವಿಲ್ ಡ್ಯೂರಂಟ್ ಹೇಳಿದ್ದಂತೆ ಭಾರತದ ಒಂದು ಮತಧರ್ಮದವರು ಬಂದೂಕು ಹಿಡಿಯಬೇಕಂತೆ. ಲಾಹೋರ್ ಉನ್ಮತ್ತರಿಗೆ ಇಂಥದೇ ಬೋಧನೆ ಪ್ರೇರಣೆ ನೀಡಿರಬೇಕು! ಅನ್ಯಮತೀಯರು ಕ್ರಿಸ್ತನಿಗೆ ನಮಿಸಬಾರದೇಕೆ ? ಬೆಂಗಳೂರಿನಲ್ಲಿ ಬಾಲ ಯೇಸುವಿಗೆ ಪ್ರತಿ ಗುರುವಾರ ಸಹಸ್ರಾರು ಹಿಂದುಗಳು ಹರಕೆ ತೀರಿಸುತ್ತಾರೆ. ಅದು ತೀರಾ ಮೌಢ್ಯದ ಕೆಲಸವೆಂಬುದು ಬೇರೆ ಪ್ರಶ್ನೆ, ಆದರೆ ವಾಸ್ತವ ಸಂಗತಿ. ರೈತಾಪಿಗಳನ್ನು ಮತ್ತು ಗುಲಾಮರನ್ನು ಸಂಘಟಿಸಿದ ಯೇಸುವಿಗೆ ವಂದಿಸುವುದಕ್ಕೂ ಬಾಲ ಯೇಸುವಿಗೆ ಹರಕೆ ಸಲ್ಲಿಸುವುದಕ್ಕೂ ವ್ಯತ್ಯಾಸವಿದೆ. ಏನೇ ಇರಲಿ, ಲಾಹೋರಿನ ಪುಂಡರ ಕೃತ್ಯವು ಅನಾಗರಿಕವಾದ್ದು. ನಾವು ಆ ಹಾದಿಯನ್ನು ಪ್ರೋತ್ಸಾಹಿಸುವುದು ತರವಲ್ಲ.

* * *

ಬಿಹಾರದ ಚುನಾವಣೆಯಲ್ಲಿ ಲಾಲೂಪ್ರಸಾದ್ ಪಕ್ಷ ಸೋತರೆ ಅದು ಚುನಾವಣಾ ಆಯೋಗದ ವಿಜಯವಾಗಿರುತ್ತದೆಯೇ ಹೊರತು ಯಾವ ರಾಜಕೀಯ ಪಕ್ಷದ ಪ್ರಣಾಲಿಕೆ ಅಥವಾ ಕ್ರಿಯಾಶೀಲತೆಯ ವಿಜಯವಾಗಿರುವುದಿಲ್ಲ – ಹೀಗೆಂದು ವಿವಿಧ ಮೂಲಗಳಲ್ಲಿ ಅಭಿಪ್ರಾಯ ವ್ಯಕ್ತವಾಗುತ್ತಿದೆ. ತಿಂಗಳಾನುಗಟ್ಟಲೆ ಒಂದು ಶಾಸನ ಸಭೆಗೆ ಚುನಾವಣೆ ನಡೆಸುವುದು ಮತ್ತು ಆ ಅವಧಿಯಲ್ಲಿ ಜನರಿಗೆ ಯಾವ ಅನುಕೂಲವನ್ನೂ ಮಾಡಿಕೊಡಕೂಡದು ಎಂಬ ನಿಯಮವನ್ನು ಯಾವುದೇ ಪ್ರಜಾಪ್ರಭುತ್ವದ ಮಾದರಿಯಲ್ಲೂ ಒಂದು ಅಪರಾಧವೆಂದು ಪರಿಗಣಿಸಬೇಕು. ಬಿಹಾರದ ಚುನಾವಣಾ ಆಯೋಗದ ಒಬ್ಬ ಪ್ರತಿನಿಧಿ ಒಂದು ಪಟ್ಟಣವನ್ನು 'ಪಾಕಿಸ್ತಾನಿ ಮೊಹಲ್ಲಾ' ಎಂದು ಬಹಿರಂಗವಾಗಿ ಹೇಳಿದ್ದಾನೆಂದರೆ ಅಧಿಕಾರದ ಮತ್ತು ಎಷ್ಟು ಹಾನಿಕರವೆಂದು ಗೊತ್ತಾಗಬೇಕು. ಇರಾಕಿನಲ್ಲಿ ಅಮೆರಿಕಾದ ಪ್ರತಿನಿಧಿಗಳು ಚುನಾವಣೆ ನಡೆಸಿದಂತೆ ನಾವು ಬಿಹಾರದಲ್ಲಿ ನಡೆಸಲು ಹೊರಟಿದ್ದೇವೆಯೇ ? ಚುನಾವಣಾ ಆಯೋಗದ ಇತಿಮಿತಿಗಳನ್ನು ಸ್ಪಷ್ಟವಾಗಿ ನಿಗದಿಗೊಳಿಸಬೇಕು, ನಿಯಂತ್ರಿಸಬೇಕು. ಇಲ್ಲದಿದ್ದರೆ ಅದೊಂದು ಆಯೋಗವಾಗಿ ಕಾರ್ಯ ನಿರ್ವಹಿಸುವ ಬದಲಾಗಿ ಅಧಿಕಾರಕೇಂದ್ರವಾಗಿಬಿಡುತ್ತದೆ.

* * *

ವಿಶ್ವಸಂಸ್ಥೆಯಲ್ಲಿ ಅಮೆರಿಕಾದ ಪ್ರತಿನಿಧಿಯಾಗಿರುವ ದುರಹಂಕಾರಿ ಜಾನ್ ಬೋಲ್ಟನ್ ಒಂದು 'ರೋಗ್ ಸ್ಟೇಟ್'ನ ವಕ್ತಾರನಾಗಿ ವಿಜೃಂಭಿಸುತ್ತಿದ್ದಾನೆ. ಭಾರತ ಸರ್ಕಾರದ ಮಂತ್ರಿಮಹೋದಯರು ಅವನ ಸುತ್ತ ಗಿರಿಕಿ ಹೊಡೆಯುತ್ತಿದ್ದಾರೆ. ಭಾರತದಲ್ಲಿ ಅಮೆರಿಕಾ ಸರ್ಕಾರದ ಸಚಿವನೋ ಉಪಸಚಿವನೋ ಇಲ್ಲದ ದಿನವೇ ಇಲ್ಲದಂತಾಗಿದೆ ಮತ್ತು ಬಂದವರೆಲ್ಲಾ ಯಜಮಾನರಂತೆ ಆದೇಶ ನೀಡುವ ಶೈಲಿಯಲ್ಲಿಯೇ ಹರಟುತ್ತಾರೆ. ನಾವಿಂದು ಬೀದಿ ಬೀದಿಗಳಲ್ಲಿ ''ಗೆಟೌಟ್ ರೋಗ್ಸ್'' ಎಂದು ಅಮೆರಿಕಾದ ಚಿಲ್ಲರೆ ಮತ್ತು ಗಟ್ಟಿ ಪ್ರತಿನಿಧಿಗಳಿಗೆ ಹೇಳಬೇಕಾಗಿದೆ. ನಾವು ಕೆಲವು ವರ್ಷಗಳಿಂದ ಹೇಳುತ್ತಾ ಬಂದಿರುವುದನ್ನು ಇತ್ತೀಚೆಗೆ ಬೋಲ್ಟನ್ ಖುದ್ದಾಗಿ ಹೇಳಿದ್ದಾನೆ. ಪುರಸೊತ್ತಿದ್ದರೆ ಮತ್ತು ಮಿದುಳಿಗೆ ಸ್ವಲ್ಪ ಶ್ರಮ ಕೊಡಲು ಸಾಧ್ಯವಿದ್ದರೆ ಮನಮೋಹನ್ ಸಿಂಗ್ ಮುಂತಾದ ಕಾಂಗ್ರೆಸ್ಸಿಗರು ಹಾಗೂ ಅದ್ವಾನಿ ಪಕ್ಷದವರು ಅದನ್ನು ಚೆನ್ನಾಗಿ ಗ್ರಹಿಸಬೇಕು. ಆತನ ಇಡೀ ಹೇಳಿಕೆಯನ್ನು ಉದ್ಧರಿಸುವುದು ದಂಡದ ಕೆಲಸ, ಆದರೆ ಎರಡು ವಾಕ್ಯಗಳನ್ನು ಎಚ್ಚರಿಕೆಯಿಂದ ಗಮನಿಸೋಣ : ''ವಿಶ್ವಸಂಸ್ಥೆಯು ಅಮೆರಿಕಾದ ವಿದೇಶಾಂಗ ನೀತಿಯನ್ನು ಪ್ರಭಾವಶಾಲಿಯಾಗಿ ಅನುಷ್ಠಾನಕ್ಕೆ ತರಲು ಸಾಧನವಾಗಿರಬಲ್ಲದು. ಅಮೆರಿಕಾದ ಹಿತಾಸಕ್ತಿಗಳನ್ನು ಕಾಪಾಡಲು ಕಾಲದಿಂದ ಕಾಲಕ್ಕೆ ಅದು ಸಮರ್ಥವಾಗಿ ಕಾರ್ಯ ನಿರ್ವಹಿಸಿದೆ.'' ಅಂದರೆ, ವಿಶ್ವಸಂಸ್ಥೆಯನ್ನು 'ರೋಗ್ ಸ್ಟೇಟ್'ನ ಕೈಗೊಂಬೆಯಾಗಿ ಪರಿವರ್ತಿಸಿದ್ದೇವೆಂದು ಬೋಲ್ಟನ್ ಹೇಳಿಕೊಳ್ಳುತ್ತಿದ್ದಾನೆ. ಈ ಕೈಗೊಂಬೆಯು 'ರೋಗ್ ಸ್ಟೇಟ್'ನ ಆದೇಶದಂತೆ ಇರಾಕಿನಲ್ಲಿ ಅಮೆರಿಕಾ ಸೈನ್ಯವು ಡಿಸೆಂಬರ್ ೨೦೦೬ರವರೆಗೂ ಇರಲು ಅವಕಾಶ ನೀಡುವ ನಿರ್ಣಯವನ್ನು ಅಂಗೀಕರಿಸಿದೆ. ''ಮಾರಣ ಹೋಮ ಮುಂದುವರಿಯಲಿ, ಅದು ನವನಾಗರಿಕತೆ; ಇರಾಕಿನ ಸಂಪತ್ತು ದೋಚಿ, ಅದು ಪ್ರಜಾಪ್ರಭುತ್ವಕ್ಕೆ ಸಹಕಾರಿ,'' ಎಂದು ವಿಶ್ವಸಂಸ್ಥೆಯ ಮೂಲಕ ಅಮೆರಿಕಾ ತನಗೆ ತಾನೇ ಹೇಳಿಕೊಂಡಿದೆ. ಇನ್ನೂ ಭ್ರಮೆಯೆ ನಿಮಗೆ ಮನಮೋಹನ ಸಿಂಗ್ - ಅದ್ವಾನಿ ದ್ವಯರೇ ?

ವೋಲ್ಕರ್ ವರದಿಯನ್ನು ಈ ಹಿನ್ನೆಲೆಯನ್ನು ಮರೆತು ವಿವೇಚಿಸುವಂತಿಲ್ಲ. ಅಮೆರಿಕಾಕ್ಕೆ ಇಷ್ಟಬಂದವನನ್ನು ತನಿಖೆಗೆ ನೇಮಿಸಲಾಯಿತು, ಅವನು ಸದ್ದಾಂ ಹುಸೇನ್‌ಗೆ ಚಿತ್ತು ಮಾಡುವಂತಹ ಪೆಟ್ಟು ನೀಡುವಾಗ ಆತನ ಪರ ನಿಂತಿದ್ದವರ ಮೇಲೆಲ್ಲಾ ಗೂಬೆ ಕೂರಿಸಿದ. ಕಾಂಗ್ರೆಸ್ ಆಗಲಿ ನಟ-ವರ ಸಿಂಗ್ ಆಗಲಿ ಸದ್ದಾಂನಿಂದ ಹಣ ಪಡೆದಿಲ್ಲವೆಂದು ಹೇಳುವುದು ರಾಜಕೀಯವಾಗಿ ಕೆಲವರಿಗೆ ರುಚಿಸುವುದಿಲ್ಲ. ವೋಲ್ಕರ್‌ಗೆ ಅಧಿಕಾರ ನೀಡಿದ್ದ ಸಮಯದಲ್ಲಿ ಅದ್ವಾನಿ ಅಮೆರಿಕಾದ ಕೇಂದ್ರೀಯ ಗೂಢಚಾರ ಸಂಸ್ಥೆಯ ಕೇಂದ್ರ ಕಚೇರಿಗೆ ತೆರಳಿ ರಹಸ್ಯ ಮಾತುಕತೆ ನಡೆಸಿದ್ದರು. ಆಗ ಯಾವ ವಿಷಯಗಳು ಚರ್ಚೆಗೆ ಬಂದು ಏನು ನಿರ್ಧಾರಗಳನ್ನು ಕೈಗೊಳ್ಳಲಾಯಿತೆಂದು ಗೊತ್ತಾಗುವ ತನಕ 'ರೋಗ್ ಸ್ಟೇಟ್'ನ ಚಾಲಾಕಿ ತಂತ್ರಗಳನ್ನು ಭೇದಿಸಿ ಅರ್ಥಮಾಡಿಕೊಳ್ಳಲಾಗುವುದಿಲ್ಲ.

ಕಲ್ಲಿಕೋಟೆಯ ಕಾಲೇಜಿನಲ್ಲಿ ನನ್ನ ಸಹೋದ್ಯೋಗಿಯಾಗಿದ್ದ ಡಾ॥ ವಾಸುದೇವರಾವ್‌ಗೆ ಶತಾಭಿಷೇಕಂ !!

ಸಮಾರಂಭಕ್ಕೆ ಒಂದು ದಿನ ಮುಂಚೆಯೇ ಅವರನ್ನು ಹಾರೈಸಿ ಬರೋಣವೆಂದುಕೊಂಡು ನಾನು ನನ್ನ ಹೆಂಡತಿ ವಿಜಯಳ ಜೊತೆ ತಿರುವನಂತಪುರಕ್ಕೆ ಹೋದೆ.

ತಂದೆಯ ಶತಾಭಿಷೇಕದ ಸಲುವಾಗಿಯೇ ನ್ಯೂಜೆರ್ಸಿಯಿಂದ ಬಂದಿದ್ದ ಅವರ ಹಿರಿಯಮಗ ಡಾ॥ ಪದ್ಮನಾಭನ್ (ಪದ್ದು) ನಮ್ಮನ್ನು ಕಂಡೊಡನೆ ಆದರದಿಂದ ಸ್ವಾಗತಿಸಿ ಮನೆಯೊಳಗೆ, ಕರೆದುಕೊಂಡು ಹೋದ. ಅಲ್ಲೊಬ್ಬಳು ವಿದೇಶಿ ಹೆಂಗಸು ಹಣೆಯಲ್ಲಿ ಕುಂಕುಮ, ಮೈತುಂಬಾ ಆಭರಣ, ಕಚ್ಚೆಹಾಕಿ ಉಟ್ಟಿದ್ದ ಸೀರೆಯಲ್ಲಿ ಶೋಭಿಸುತ್ತಿದ್ದಳು ! ಅವಳನ್ನು ''ನನ್ನ ಪತ್ನಿ ಬಾರ್ಬರಾ'' ಎಂದು ಪರಿಚಯಿಸಿದ. ಆಕೆ ನಗುತ್ತಾ ಕೈಜೋಡಿಸಿ ''ನಮಸ್ತೆ'' ಎಂದಳು. ಅದೇ ವೇಳೆಗೆ ಒಳಗಿನಿಂದ ಹಾರಿಕೊಂಡು ಬಂದ ರಾಯರ ಎರಡನೆಯ ಮಗ ಹನುಮಂತು ''ಬರಬೇಕು, ಬರಬೇಕು...'' ಎಂದು ವಿಶೇಷ ಕಹಳೆ ಊದಿದ್ದಲ್ಲದೆ ಸಾಷ್ಟಾಂಗವಾಗಿ ಬಿದ್ದು ನಮಗೆ ನಮಸ್ಕಾರ ಮಾಡಿದ ! ಅವನು ಒಂದು ಕಾಲದಲ್ಲಿ ನನ್ನ ವಿದ್ಯಾರ್ಥಿಯಾಗಿದ್ದ. ಅವನ ಪಂಜಾಬಿ ಹೆಂಡತಿಯೂ ನಮ್ಮನ್ನು ಆದರಿಸುತ್ತ ''ನಿಮ್ಮನ್ನು ಕುರಿತು ಸಾಕಷ್ಟು ಮನೆಯವರು ಹೇಳಿದ್ದಾರೆ'' ಎಂದಳು. (ಏನು ಹೇಳಿದ್ದಾರೋ ? ಒಳ್ಳೆಯದೋ, ಕೆಟ್ಟದ್ದೋ... ಯಾರಿಗೆ ಗೊತ್ತು? ಎಂದುಕೊಂಡೆ.) ವಾಸುದೇವರಾಯರ ಒಬ್ಬಳೇ ಮಗಳು ಯಮುನಾ ಗುರುತೇ ಸಿಗದ ಹಾಗೆ ಬದಲಾಯಿಸಿದ್ದಳು. ಹಿಂದೆ ನೋಡಿದ್ದಕ್ಕಿಂತ ಈಗ ಎರಡರಷ್ಟು ದಪ್ಪವಾಗಿದ್ದಳು. ತಲೆಗೂದಲನ್ನು ಬಾಬ್ ಮಾಡಿಕೊಂಡಿದ್ದಳು. ಸಿಡ್ನಿಗೆ ಹೋಗಿ ಹತ್ತು ವರ್ಷಗಳಿಗೂ ಮೇಲಾಗಿರಬಹುದು. ಓದಲು ಹೋದ ಜಾಗದಲ್ಲೇ ವಯಸ್ಸಾದ ವಿದೇಶಿ ಪ್ರೊಫೆಸರರಿಗೆ ಎರಡನೆಯ ಹೆಂಡತಿಯಾಗಿ ಹೋದದ್ದರಿಂದ ಹೆತ್ತವರಿಗೆ ಅವಳ ಮೇಲೆ ವಿಪರೀತ ಕೋಪವಿತ್ತು.

''ಸರಿ, ಅಪ್ಪಾ ಎಲ್ಲಿ ?''

''ಕ್ಲಾಸ್ ರೂಂನಲ್ಲಿದ್ದಾರೆ... ಈಗ ಬರ್ತಾರೆ...''

''ಕ್ಲಾಸ್ ರೂಮಾ !''

''ಅಪ್ಪಾ ಈಗಲೂ going strong ! ಅಮೋಘವಾಗಿ ಲೆಕ್ಚರ್ ಮಾಡ್ತಾರೆ. ಅವರ ಮನಸ್ಸಿನಾರೋಗ್ಯಕ್ಕೆ ಇದು ಬಹಳ ಅವಶ್ಯಕವಾಗಿದೆ. ನಮ್ಮ ಫ್ಯಾಮಿಲಿ ಡಾಕ್ಟರ್ ಆರಾವಮುದನ್‌ರೇ ಈ ರೀತಿ ಏರ್ಪಾಡು ಮಾಡಬೇಕೆಂದು ಹೇಳಿದ್ದು, ಪಕ್ಕದ ರೂಮೇ ಕ್ಲಾಸ್‌ರೂಂ. ಪ್ಲಾಟ್‌ಫಾರ್ಮ್, ಬೋರ್ಡು... ಎಲ್ಲಾ ಇದೆ... ಬನ್ನಿ ತೋರುಸ್ತೀನಿ'' ಎಂದು ನಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋದ.



# 'ಶತಾಭಿಷೇಕಂ'

ಜಿ. ಎಸ್. ಬಾಲಕೃಷ್ಣನ್

ಅಲ್ಲಿ ಖಾಲಿ ಕುರ್ಚಿಗಳ, ಮೇಜುಗಳ ಮುಂದೆ ತಮ್ಮ ಕೈಕಾಲು ಆಡಿಸುತ್ತ 'ಕಳೆದುಹೋದ ಸ್ವರ್ಗ' (Paradise Lost) ಪಾಠ ನಡೆಸುತ್ತಿದ್ದರು... ಪ್ರೊಫೆಸರ್ ರಾವ್ ! ಕೆಲಕ್ಷಣ ಅವರನ್ನೇ ನೋಡುತ್ತಾ ನಿಂತೆ. ನಮ್ಮ ಪರಿವೆಯೇ ಇರಲಿಲ್ಲ ಪ್ರೊಫೆಸರರಿಗೆ. ಓಡಿಹೋಗಿ ಕಪ್ಪುಹಲಗೆ ಮೇಲೆ ಏನೋ ಬರೆದರು ! ಜೋಕು ಹೊಡೆದರು ! ಸನಿಹದಲ್ಲಿದ್ದ ಕಲ್ಪನಾ ವಿದ್ಯಾರ್ಥಿಗಳ ಸಂದೇಹಗಳಿಗೆ ವಿವರಣೆ ನೀಡಿದರು ! ಪ್ರಶ್ನೆಗಳನ್ನು ಕೇಳುತ್ತಾ ಹೋದರು !

ವಿರಾಮದ ಸಮಯ ಮುಗಿದ ನಂತರ ವಿಜಯಳನ್ನೂ, ನನ್ನನ್ನೂ ಅವರ ಬಳಿಗೆ ಕರೆದೊಯ್ದ ಪದ್ದು,

''ಇವರ್‍ಯಾರು ಗೊತ್ತಾಯ್ತ ಅಪ್ಪಾ...? ಬಾ..ಲ..ಕೃ...''

ಪ್ರೊ॥ ರಾವ್ ನನ್ನನ್ನು ದಿಟ್ಟಿಸುತ್ತಾ 'ಗೊತ್ತಾಗ್ದೆ ಏನು ? ನನ್ನ ಮೆಮೊರಿ ಅಷ್ಟೊಂದು ಕೆಟ್ಟುಹೋಗಿದೆ ಅಂತ ತಿಳ್ಕೊಂಡಿದ್ದೀಯ ? ಇತರ ಮುದುಕರಂತೆ ನಾನೇನು ತಡವರಿಸುತ್ತೀನಾ ? ನನ್ನ ಹಳೆಯ ವಿದ್ಯಾರ್ಥಿ ''ಬಾಕೋ'' ತಾನೇ ? ಐಯಂಗಾರ್ ಹೆಣ್ಣು ಜೇಬುನ್ನಿಸಾ ಜೊತೆ ಓಡಿಹೋಗಿ ರಾದ್ಧಾಂತ ಮಾಡಿದ ಅಧಿಕಪ್ರಸಂಗೀನ ಅಷ್ಟು ಬೇಗ ಮರೆಯಕ್ಕಾಗತ್ಯೆ ? ನಿನ್ನನ್ನು ಕಾಲೇಜಿಂದ ಹೊರಹಾಕಲು ಪ್ರಯತ್ನಿಸುವಾಗ ಎಂಬತ್ತು ವಯಸ್ಸಿನ ನಿನ್ನ ಅಜ್ಜೀನ ಕರ್ಕೊಂಡು ಬಂದು ಮೊರೆಯಿಟ್ಟಿದ್ದಿಯಲ್ಲ...' ಎಂದು ಪಟಪಟನೆ ಮಾತಾಡಿದರು. ನನ್ನ ಪಕ್ಕದಲ್ಲಿ ನಿಂತಿದ್ದ ವಿಜಯಳನ್ನ ನೋಡಿ 'ಓ... ಅಜ್ಜೀನೂ ಬಂದಿದ್ದಾರಾ... ? ... ನಮಸ್ತೆ... ಅಜ್ಜಮ್ಮಾ...' ಎಂದು ಗೌರವದಿಂದ ಉಪಚರಿಸಿದರು.

ತನ್ನ ವಯಸ್ಸಿನ ವಿಷಯದಲ್ಲಿ ಹೀಗೆ ದಿಢೀರ್ ಪ್ರೊಮೋಷನ್ ಸಿಕ್ಕಿದ್ದಕ್ಕೆ ವಿಜಯಳಿಗೆ ರೇಗಿ ಹೋಗಿರಬೇಕು.

ಮನೆಯೊಳಗಿಂದ ಹೊರಗೆ ಬಂದ ಪ್ರೊಫೆಸರರ ಹೆಂಡತಿ ಸಕ್ಕೂಬಾಯಿ ತಮ್ಮ ಕಣ್ಣುಗಳನ್ನು ಹಿಗ್ಗಿಸಿಕೊಂಡು ನೋಡುತ್ತಾ ''ಓಹೋ ಬಾಲಕೃಷ್ಣನ್ ತಾನೇ ?'' ಎಂದರು. ನನ್ನ ಗುರುತು ಅವರಿಗೆ ಸಿಕ್ಕಿದ್ದು ಕಂಡು ನನಗೆ ಭಲೇ ಖುಷಿ ಆಯಿತು. ಆದರೆ ಮರುಕ್ಷಣವೇ ಆ ಖುಷಿ ಮಾಯವಾಗಬೇಕೆ !

''ಕ್ರಿಸ್ಟೀನ ಡೈವೋರ್ಸ್ ಮಾಡಿದೆಯಲ್ಲ, ಈಗ ಅವಳೆಲ್ಲಿ ಇದ್ದಾಳೆ ? ಏನು ಮಾಡ್ತಾಳೆ ಈಗ ?'' ಎಂದು ಕೇಳಿದರು !

''ಇವಳು ನಿನ್ನ ಎರಡನೇ ಹೆಂಡತೀನಾ ?... ಯಾವ ಊರು ?'' ಎಂದು ವಿಜಯಳನ್ನು ಮೇಲೆ ಕೆಳಗೆ ಅಳೆಯುತ್ತಾ ಬಡಬಡಿಸಿದರು.

ಡೈವೋರ್ಸು !... ನಾನು ಬದುಕಿನಲ್ಲಿ ಮದುವೆ ಎಂಬ ತಪ್ಪನ್ನು ಒಂದು ಸಲ ತಾನೇ ಮಾಡಿರೋದು ! ಎರಡನೇ ಸಲ ಮಾಡೋದಕ್ಕೆ ನಾನೇನು ದಡ್ಡನೇ ?... ಮನಸ್ಸಿನಲ್ಲೇ ಅಂದ್ಕೊಂಡೆ. ಇದನ್ನೆಲ್ಲಾ ಕೇಳಿ ಸುಸ್ತಾದ ವಿಜಯ ''ಹೊತ್ತಾಯ್ತು, ಇನ್ನು ಹೊರಡೋಣ'' ಎನ್ನುವ ಅರ್ಥದ ನೋಟ ನನ್ನ ಕಡೆ ಬೀರಿದಳು. ಅಲ್ಲಿಂದ ಬೇಗ ಕಳಚಿಕೊಳ್ಳಲು ಬಯಸಿ ಪ್ರೊಫೆಸರ್ ರಾವ್‌ಗಾಗಿ ತೆಗೆದುಕೊಂಡು ಬಂದಿದ್ದ ಗಿಫ್ಟ್ ಪ್ಯಾಕೆಟನ್ನು (ಬೇರೆ ಏನು ?... ಪುಸ್ತಕಗಳೇ... !) ಅವರ ಮಗ ಪದ್ದುವಿಗೆ ಕೊಡುತ್ತ ''ನಿಮ್ಮನ್ನೆಲ್ಲಾ ಒಟ್ಟಿಗೆ ನೋಡುತ್ತಿರುವುದು ಬಹಳ

ಸಂತೋಷವಾಗಿದೆ. ಶತಾಭಿಷೇಕವನ್ನು ಗ್ರ್ಯಾಂಡಾಗಿ ನಡೆಸುವ ನಿಮ್ಮ ಸಿದ್ಧತೆಯನ್ನು ನೋಡಿ ನಾನು ಭಾವುಕನಾಗದೇ ಇರಲು ಸಾಧ್ಯವಾಗ್ತಿಲ್ಲ, ಹೆತ್ತವರ ಮೇಲೆ ನಿಮಗಿರುವ ಅಪರಿಮಿತ ಪ್ರೀತಿ, ಅಭಿಮಾನಗಳು ಈ ರೀತಿ ಪ್ರತಿಫಲಿಸುತ್ತಿದೆ ಅಂತ ಅಂದ್ಕೊಂಡಿದ್ದೀನಿ. ಆದರೆ ನನಗೆ ಒಂದು ಸಂದೇಹ. ಮಕ್ಕಳೆಲ್ಲರೂ ವಿದೇಶದಲ್ಲಿ ನೆಲೆಸಿದ್ದೀರಿ, ಕೈತುಂಬಾ ಸಂಪಾದಿಸುತ್ತಿದ್ದೀರಿ, ಅಮೋಘವಾಗಿ ಬದುಕುತ್ತಿದ್ದೀರಿ. ಎಲ್ಲಾ ನಿಜ. ಆದರೆ ವಯಸ್ಸಾದ ಅಪ್ಪ-ಅಮ್ಮಂದಿರನ್ನು ಇಲ್ಲಿ ಯಾರು ಅಕ್ಕರೆಯಿಂದ ನೋಡಿ ಕೊಳ್ತಾರೆ? ಇಬ್ಬರಿಗೂ ಜ್ಞಾಪಕಶಕ್ತಿ ಬೇರೆ ನಶಿಸಿ ಹೋಗಿದೆ... ಈ ಸ್ಥಿತಿಯಲ್ಲಿ ಅವರ ಜೀವಕ್ಕೆ ಏನಾದರೂ ಹೆಚ್ಚು ಕಡಿಮೆ ಆದಲ್ಲಿ ಅವರನ್ನು ಗಮನಿಸುವವರು ಯಾರು ?'' ಎಂದು ಕಾಳಜಿಯಿಂದ ಕೇಳಿದೆ.

''ನೀವು ಹೀಗೆ ಕೇಳ್ತೀರಿ ಅಂತ ನನಗೆ ಗೊತ್ತು. ನಿಮಗಲ್ಲದೆ ಇನ್ಯಾರಿಗೆ ಈ ತರಹ ಕೇಳೋದಕ್ಕೆ ಹಕ್ಕಿದೆ ? ಅಪ್ಪ-ಅಮ್ಮನನ್ನು ನೋಡಿಕೊಳ್ಳೋದಿಕ್ಕೆ ಅಂತ್ಲೇ ಮೊದಲಿಂದ ಪಂಢರಿಬಾಯಿ ಇದ್ದಾರಲ್ಲ !... ಆ ಧೈರ್ಯದಲ್ಲಿ ತಾನೇ ನಾವುಗಳು ವಿದೇಶದಲ್ಲಿರೋದು ! ಅದೂ ಅಲ್ಲದೆ ಪಂಢರಿಬಾಯಿ ಬರೇ ಕೆಲಸದವರಲ್ಲ, ನಮ್ಮ ಬಂಧುವೂ ಆಗಿದ್ದಾರೆ. ಅಪ್ಪ-ಅಮ್ಮನ ಬಗ್ಗೆ ಅವರಿಗೆ ಎಣೆಯಿಲ್ಲದ ಪ್ರೀತಿ-ಪ್ರೇಮ. ಒಬ್ಬಂಟಿಗರಾಗಿದ್ದ ಅವರು ಐವತ್ತು ವರ್ಷಗಳಿಂದ ನಮ್ಮ ಕುಟುಂಬದಲ್ಲಿ ಒಬ್ಬರಾಗಿ ಸೇರಿಹೋಗಿದ್ದಾರೆ. ಇದು ನಿಮಗೆ ಗೊತ್ತಿರಲಿಕ್ಕಿಲ್ಲ'' ಎಂದ ಪದ್ದು. ಹನುಮಂತು, ಯಮುನಾ ಹಲ್ಕಿರಿದು ತಲೆಯಾಡಿಸಿದರು. ಎಲ್ಲಾ ವಿಷಯಗಳಲ್ಲೂ ಮೂವರಿಗೂ ಒಂದೇ ಅಭಿಪ್ರಾಯವಿದ್ದಿರಬೇಕು ! ಎಂದುಕೊಂಡೆ.

''ಅಪ್ಪನಿಗೆ ಲೆಕ್ಚರ್ ಬಿಗಿಯೋದರಲ್ಲಿ ತುಂಬಾ ಆಸೆ. ಅಮ್ಮನಿಗೆ ಪೂಜೆ-ಪುನಸ್ಕಾರ... ಇಷ್ಟಿದ್ದರೆ ಆಯ್ತು. ಈ ಎರಡಕ್ಕೂ ಬೇಕಾದ ವ್ಯವಸ್ಥೆಯನ್ನು ಎಕ್ಸ್‌ಪ್ರೆಸ್ ವೇಗದಲ್ಲಿ ಮಾಡಿದ್ದಾಗಿದೆ. ನೀವು ಅಂದುಕೊಂಡ ಹಾಗೆ ನಾವು ಅಪ್ಪ-ಅಮ್ಮ ಅವರನ್ನು ಉದಾಸೀನ ಮಾಡಿಲ್ಲ, ಇತರ ಕೆಲವು ಜನರು ಮಾಡುವಂತೆ ಅವರನ್ನು ಕರೆದುಕೊಂಡು ಹೋಗಿ ಓಲ್ಡ್ ಹೋಮ್‌ನಲ್ಲೋ, ಗೀಮ್‌ನಲ್ಲೋ ತಳ್ಳಲಿಲ್ಲ, ಅವರ ಎಲ್ಲಾ ಅಗತ್ಯಗಳನ್ನು ಚಾಚೂ ತಪ್ಪದಂತೆ ಪೂರೈಸುತ್ತಿದ್ದೇವೆ ! ಪ್ರೀತಿ-ಗೀತಿ ಎಲ್ಲವೂ ಬೇಕಾದದ್ದೇ. ಎಲ್ಲವೂ ಮಿತಿಯಲ್ಲಿದ್ದರೆ ಚೆನ್ನ. ಹೆಡ್ಡರಂತೆ ಪ್ರೀತಿ-ಪಾಶವನ್ನೇ ನೆಚ್ಚಿಕೊಂಡು ಅಳುತ್ತಾ ಕೂತರೆ ಹಣ ಮಾಡೋದು ಹೇಗೆ ? ಬದುಕಿನಲ್ಲಿ ಮುಂದೆ ಬರೋದು ಹೇಗೆ ?'' ಎಂದು ಮುಖಕ್ಕೆ ರಾಚುವಂತೆ ಕೇಳಿದ ಪದ್ದು. ನನಗೆ ಏನೂ ಮಾತಾಡಲು ತೋಚದೆ ಸುಮ್ಮನಾದೆ.

ಅಲ್ಲಿಂದ ಹೊರಡಲು ಸಿದ್ಧರಾಗುತ್ತಿದ್ದ ನಮಗೆ ಏನನ್ನೋ ಕೊಡಲು ನಿಧಾನವಾಗಿ ಕಾಲೆಳೆಯುತ್ತಾ ಬಂದರು ಪಂಢರಿಬಾಯಿ. ಅವರು ಕುಂಟುತ್ತಾ ಬರುವುದನ್ನು ನೋಡಿ ''ನಾವೇ ಅಲ್ಲಿಗೆ ಬರ್ತೀವಿ'' ಎನ್ನುತ್ತ ಹಜಾರದೊಳಗೆ ಬಂದೆವು. ಅವರು ನನಗೆ ಒಂದು ಕಿತ್ತಳೆಹಣ್ಣನ್ನು ಕೊಟ್ಟು, ವಿಜಯಳಿಗೆ ಕುಂಕುಮದ ಜೊತೆಗೆ ರವಿಕೆಖಣ, ಎಲೆ ಅಡಿಕೆ ತಾಂಬೂಲ ನೀಡಿದರು.

ನಾವು ಪ್ರತ್ಯೇಕವಾಗಿ ಮಾತನಾಡಲು ಸಿಕ್ಕ ಅವಕಾಶ ಬಳಸಿಕೊಂಡು ಅವರು ತಮ್ಮ ಅಳಲನ್ನು ತೋಡಿಕೊಂಡರು –

''ಮತ್ತೆ ನಿಮ್ಮನ್ನು ನಾನೆಲ್ಲಿ ನೋಡ್ತೀನಿ ?... ಇವತ್ತೋ, ನಾಳೆಯೋ ಅಂತಿದೆ ನನ್ನ ದೇಹಸ್ಥಿತಿ. ಆಯಿತು... ! ಐವತ್ತು ವರ್ಷಗಳು ಈ ಮನೆಗಾಗಿ ನಿಸ್ಪೃಹಳಾಗಿ ದುಡಿದೆ. ಮಕ್ಕಳೆಲ್ಲಾ ಬೆಳೆದನಂತರ ಇಲ್ಲಿಂದ ಬಿಟ್ಟುಹೋಗೋಣ ಅಂದ್ಕೊಂಡಿದ್ದೆ. ನನ್ನ ಮೊಮ್ಮಗಳು ನಾಗರಕೋಯಿಲ್‌ನಲ್ಲಿ ಇಂಜಿನಿಯರಾಗಿ ಕೆಲಸ ಮಾಡ್ತಿದ್ದಾಳೆ. ತನ್ನ ಜೊತೆಗೆ ಇರೋದಕ್ಕೆ ಅಂತ ನನ್ನನ್ನು ಕರೆಯುತ್ತಲೇ ಇದ್ದಾಳೆ. ಆದರೆ ಅಲ್ಲಿಗೆ ಹೋಗೋದಕ್ಕೆ ಸಾಧ್ಯವಾದರೆ ತಾನೇ ? ಪ್ರೊಫೆಸರ್ ಸಾರ್ ಹಾಗೂ ಮಾಮಿಯವರನ್ನು ಇಲ್ಲಿ ಒಂಟಿಯಾಗಿ ಬಿಟ್ಟು ನಾನ್ಹೇಗೆ ಹೋಗಲಿ ? ಅವರ ಮಕ್ಕಳಿಗೆ ಅದು ಅರ್ಥವಾದರೆ ತಾನೇ ? ಹಣ... ಪದವಿ... ಅಂತ ಅಲೆಯುತ್ತಿದ್ದಾರೆ ! ತಿಂಗಳಿಗೆ ತಪ್ಪದೆ ಚೆಕ್ ಕಳಿಸಿದರೆ ಆಯ್ತೇ ? ಹಣವನ್ನು ಬಾಚಿ ಬಿಸಾಡುವ ಬದಲಿಗೆ ಪ್ರೀತಿ, ಪ್ರೇಮವನ್ನು... ಸಾಮೀಪ್ಯವನ್ನು... ನಾನು ಏನನ್ನೂ ಹೇಳೋದಿಲ್ಲ... ಹೇಳಬಾರದು. ಅಮೆರಿಕಾ, ಆಸ್ಟ್ರೇಲಿಯಾ ಮೋಹ ನಮ್ಮ ಕುಟುಂಬಗಳಲ್ಲಿದ್ದ ಹಿಂದಿನ ಆ ಪ್ರೀತಿ, ಅನುಬಂಧ, ಬಂಧಗಳನ್ನು ಹಾಳು ಮಾಡೋದಕ್ಕೆ ಅಂತ ಆಗಿದೆ. ಯಾರನ್ನು ತಾನೇ ದೂಷಿಸೋಣ ? ಎಲ್ಲಾ ಕಾಲದ ಮಹಿಮೆ... ! ಅಷ್ಟೇ...'' ಎಂದು ಆಯಾಸದಿಂದ ಏದುಸಿರುಬಿಡುತ್ತಾ ಸೆರಗಿನಿಂದ ಕಣ್ಣೊರೆಸಿಕೊಂಡರು.

ಅವರ ಮಾತುಗಳಿಗೆ ಹೇಗೆ ಪ್ರತಿಕ್ರಿಯಿಸುವುದೆಂದು ತಿಳಿಯದೆ ಕ್ಷಣಕಾಲ ಮೂಕನಾಗಿ ನಿಂತೆ.

* * *

ರೈಲಿನಲ್ಲಿ ಊರಿಗೆ ಹಿಂತಿರುಗುತ್ತಿರುವಾಗ ಪಂಢರಿಬಾಯಿಯವರ ಮಾತುಗಳೇ ನನ್ನ ಕಿವಿಯಲ್ಲಿ ಮಾರ್ದನಿಸುತ್ತಿದ್ದವು. ಸೇವಕರಿಗಿರುವ ಮಾನವೀಯ ದೃಷ್ಟಿ, ಕರ್ತವ್ಯಗಳು, ಹೆತ್ತ ಮಕ್ಕಳಲ್ಲಿ ಕಂಡುಬರುತ್ತಿಲ್ಲವಲ್ಲ ಎಂಬ ಕಹಿಸತ್ಯ ನನ್ನನ್ನು ತೀವ್ರವಾಗಿ ವೇದಿಸಿತು. ದುಃಖದಿಂದ ನನ್ನ ಹೃದಯ ಭಾರವಾಗಿ ವಿಷಾದದ ನಿಟ್ಟುಸಿರೊಂದು ಹೊರಬಿತ್ತು.

---

ತಮಿಳಿನಿಂದ ಅನುವಾದ : ಕೆ.ವಿ. ಉಭಯಭಾರತಿ
ನಂ. ೧೮೦/೨೮, ೧೫ನೇ ಮೇನ್, ೩ನೇ ಕ್ರಾಸ್
ಕುರುಬರಹಳ್ಳಿ, ಮಹಾಲಕ್ಷ್ಮೀಪುರಂ, ಬೆಂಗಳೂರು – ೫೬೦ ೦೮೬

# ಸುಧಾರಣೆಗಳ ಮತ್ತೊಂದು ಮುಖವೇ ಉದ್ಯೋಗ ನಾಶ !

**ಕೆ. ಮಹಾಂತೇಶ್**

'ನಿರುದ್ಯೋಗ – ಇದು ಅನಿವಾರ್ಯವಲ್ಲ. ಅಭಿವೃದ್ಧಿ ಪ್ರಕ್ರಿಯೆಯ ಬೆಳವಣಿಗೆಯು ಸ್ವಾಭಾವಿಕವಾಗಿಯೇ ಉದ್ಯೋಗಾವಕಾಶವನ್ನು ಸೃಷ್ಟಿಸುವುದರಿಂದ ಉದ್ಯೋಗವನ್ನು ಖಾತ್ರಿಗೊಳಿಸುವ ಯೋಜನೆ ನಮಗೆ ಅನವಶ್ಯಕ.' – ಯೋಜನಾ ಆಯೋಗದ ಉಪಾಧ್ಯಕ್ಷ ಶ್ರೀ ಮಾಂಟೆಕ್‌ಸಿಂಗ್ ಅಹ್ಲುವಾಲಿಯಾ ಹೇಳಿದ ಮಾತುಗಳಿವು !

ಇದೇ ಮಾಂಟೆಕ್‌ಸಿಂಗ್ ನೇತೃತ್ವದಲ್ಲೇ ಭಾರತದ ಯೋಜನಾ ಆಯೋಗದಿಂದ ರಚಿಸಲಾಗಿದ್ದ ಕ್ಷಿಪ್ರ ಕಾರ್ಯಪಡೆಯೇ ನೀಡಿದ ವರದಿಯಿಂದ ಸ್ಪಷ್ಟಗೊಂಡಿರುವುದೇನೆಂದರೆ –

''ದಶಕಗಳ ಸುಧಾರಣೆಗಳು ನಿರುದ್ಯೋಗ ಸಮಸ್ಯೆಯನ್ನು ಮತ್ತಷ್ಟು ಹದಗೆಡಿಸಿವೆಯೇ ಹೊರತು ಸಮಸ್ಯೆಯನ್ನು ತಗ್ಗಿಸಿಲ್ಲ'' ಎನ್ನುವುದು. ಇದರರ್ಥವೇನೆಂದರೆ ನಮ್ಮ ದೇಶದಲ್ಲಿ ಸುಧಾರಣೆಯ ಹೆಸರಿನಲ್ಲಿ ಜಾರಿಗೊಳಿಸಲ್ಪಡುತ್ತಿರುವ ಆರ್ಥಿಕ ಕಾರ್ಯಕ್ರಮಗಳು ಯಾರಿಗೆ ಲಾಭವನ್ನು ತಂದೊಡ್ಡುತ್ತಿವೆ ಎಂಬುದು ದಿನ ಕಳೆದಂತೆ ಸ್ಪಷ್ಟಗೊಂಡಿದೆ.

**ಸುಧಾರಣೆ ಯಾತಕ್ಕಾಗಿ ? ಯಾರಿಗಾಗಿ ?**

ಭಾರತದಲ್ಲಿ ೯೦ರ ದಶಕದಿಂದಲೇ ಆರಂಭಗೊಂಡ ಈ ಸುಧಾರಣಾ ನೀತಿಗಳ ಉದ್ದೇಶವಾದರೂ ಏನು ? ನಮ್ಮ ಆರ್ಥಿಕತೆಯನ್ನು ಉತ್ಪಾದನಾ ವ್ಯವಸ್ಥೆಯಿಂದ ಲಾಭದ ಬೆಂಬತ್ತಿರುವ ವಿದೇಶಿ ಬಹುರಾಷ್ಟ್ರೀಯ ಕಂಪನಿಗಳ ಮಾರುಕಟ್ಟೆಯಾಗಿ ಪರಿವರ್ತಿಸುವುದು. ದೊಡ್ಡ ಕೈಗಾರಿಕಾ ಕ್ಷೇತ್ರದಿಂದ ಬಂಡವಾಳ ವಾಪಸ್ ಪಡೆಯುವುದು ಮತ್ತು ನವೀನ ತಂತ್ರಜ್ಞಾನದ ಮೂಲಕ ಹೊಸ ಉದ್ಯೋಗಗಳ ಸೃಷ್ಟಿಗೆ ಕಡಿವಾಣ ಹಾಕುವುದು. ಕೈಗಾರಿಕೆಗಳನ್ನು ರೋಗಗ್ರಸ್ತ ಮಾಡಿ ಮುಚ್ಚುವುದು ಮತ್ತು ಕೊಂಡುಕೊಳ್ಳುವಿಕೆ/ವಿಲೀನದಿಂದಾಗಿ ಉದ್ಯೋಗ ನಷ್ಟ ಮಾಡುವುದರ ಮೂಲಕ ಭಾರಿ ನಿರುದ್ಯೋಗ ಸೃಷ್ಟಿಸುವುದು ಈ ಸುಧಾರಣೆಗಳ ಹಿಂದಿರುವ ಕ್ರೂರಮುಖ. ಆದರೆ ಈ ನಿಜವಾದ ಮುಖವನ್ನು ತೋರಿಸಲು ಇಷ್ಟಪಡದ ಬಂಡವಾಳಶಾಹಿ ವ್ಯವಸ್ಥೆಯ ಪರಿಣತರು ಹೇಳುತ್ತಿರುವುದು ಏನೆಂದರೆ – ಪ್ರಸಕ್ತ ಸಂದರ್ಭದಲ್ಲಿ ನಿರುದ್ಯೋಗ ಎಂಬುದು ಹಿಂದುಳಿದ – ಮುಂದುವರೆದ ಸೇರಿದಂತೆ ಎಲ್ಲಾ ದೇಶಗಳಲ್ಲಿದೆ. ಈ 'ನಿರುದ್ಯೋಗ ನಿವಾರಣೆಗಾಗಿ ನಾವೇನು ಹೆಚ್ಚು ತಲೆ ಕೆಡಿಸಿಕೊಳ್ಳಬೇಕಿಲ್ಲ, ಅದು ಎಲ್ಲಾ ಕಡೆ ಇರುವುದು ವಾಸ್ತವಿಕ ಸಂಗತಿಯಾಗಿರುವಾಗ ನಿರುದ್ಯೋಗದೊಂದಿಗೆ ಬದುಕುವುದನ್ನು ನಾವು ರೂಢಿಸಿಕೊಳ್ಳಬೇಕು. ಯಾಕೆಂದರೆ ಎಲ್ಲರಿಗೂ ಉದ್ಯೋಗ ನೀಡುವುದು ಸಾಧ್ಯವಿಲ್ಲ' ಎಂಬ ಉದ್ಗಾರವನ್ನು ಸುಧಾರಣಾ ಪರವಾಗಿರುವವರು ಬಿಂಬಿಸುತ್ತಾರೆ.

ಭಾರತವನ್ನು ಒಳಗೊಂಡಂತೆ ತೃತೀಯ ಜಗತ್ತಿನ ದೇಶಗಳಲ್ಲಿ ಪ್ರಸ್ತುತ ಜಾರಿಯಾಗುತ್ತಿರುವ ಈ ಸಾಮ್ರಾಜ್ಯಶಾಹಿ ಪ್ರೇರಿತ ಉದಾರೀಕರಣ – ಖಾಸಗೀಕರಣ ನೀತಿಗಳ ಒಟ್ಟಾರೆ ಪ್ರತಿಫಲನವೆಂದರೆ ಉದ್ಯೋಗಹೀನ ಬೆಳವಣಿಗೆ. ಆದರೆ ಇದೇ ನೀತಿಗಳು ೨ನೇ ತಲೆಮಾರಿನ ಸುಧಾರಣೆಗಳ ಹೆಸರಲ್ಲಿ ಮತ್ತೆ ವಕ್ರರಿಸಿ – ಉದ್ಯೋಗ ನಷ್ಟ ಬೆಳವಣಿಗೆಯಾಗುವ ಸಂಚು ರೂಪಿಸುತ್ತಿವೆಯಾಗುತ್ತಿವೆ. ಅಂದರೆ ಸ್ವಾತಂತ್ರ್ಯದ ದಶಕಗಳಲ್ಲಿ ಅಲ್ಪಸ್ವಲ್ಪ ಉದ್ಯೋಗ ಸೃಷ್ಟಿಸುವ ಪ್ರಕ್ರಿಯೆಯಲ್ಲಿ ನಾವು ತೊಡಗಿಸಿಕೊಂಡಿದ್ದಾಗಲೇ ಅಂತಹ ಅವಕಾಶಗಳನ್ನೆಲ್ಲ ಆಧುನೀಕರಣ ಮತ್ತು ಗಣಕೀಕರಣದ ಹೆಸರಲ್ಲಿ ಇಲ್ಲವಾಗಿಸಿದ್ದು ಒಂದೆಡೆಯಾದರೆ ಮತ್ತೊಂದೆಡೆ ಪ್ರಸ್ತುತ ಇರುವ ಉದ್ಯೋಗಗಳನ್ನೇ ಇಲ್ಲವಾಗಿಸುವ ಪ್ರಕ್ರಿಯೆ ಶರವೇಗದಲ್ಲಿ ನಡೆದಿದೆ.

ಈ ಸುಧಾರಣೆಗಳ ಇನ್ನೊಂದು ಮುಖವೆಂದರೆ ಅತ್ಯಂತ ಕಡಿಮೆ ಉದ್ಯೋಗಾವಕಾಶಗಳನ್ನು ತೋರಿಸಿ ಭಾರಿ ಪ್ರಚಾರ ಗಿಟ್ಟಿಸುವುದು ! ಬ್ಯಾಂಕಿಂಗ್ ಕ್ಷೇತ್ರದಲ್ಲಿ ಹಿಂದೆಲ್ಲಾ ಉದ್ಯೋಗಗಳಿಗೆ ಆಯ್ಕೆ ಮಾಡುತ್ತಿದ್ದ ಬ್ಯಾಂಕಿಂಗ್ ಸರ್ವಿಸ್ ರಿಕ್ರುಟ್‌ಮೆಂಟ್ ಬೋರ್ಡ್ ಅನ್ನು ರದ್ದು ಮಾಡಲಾಯಿತು. ವಿಮಾ – ದೂರಸಂಪರ್ಕ – ಅಂಚೆ ಕ್ಷೇತ್ರಗಳಲ್ಲಿ ಕಳೆದ ೧೧ ವರ್ಷಗಳಿಂದ ನೇಮಕಾತಿ ಪ್ರಕ್ರಿಯೆಯನ್ನೇ ನಿಲ್ಲಿಸಲಾಗಿದೆ. ಅಷ್ಟೇಲ್ಲಾ ಯಾಕೆ ? ಉದ್ಯೋಗ ಮತ್ತು ತರಬೇತಿ ಎಂಬ ಹೆಸರಿನಲ್ಲಿ ಕಾರ್ಮಿಕ ಇಲಾಖೆಯ ಅಡಿಯಲ್ಲಿ ಕೆಲಸ ಮಾಡುತ್ತಿದ್ದ 'ಉದ್ಯೋಗ ವಿನಿಮಯ ಕೇಂದ್ರ'ಗಳಲ್ಲಿ 'ಉದ್ಯೋಗ' ಎನ್ನುವ ಪದ ಬಳಕೆಯನ್ನೇ ತೆಗೆಯಲಾಗಿದೆ. ಕೇಂದ್ರ ಸರ್ಕಾರದ ಮಂತ್ರಿಮಂಡಲದಲ್ಲಿಯೇ 'ಉದ್ಯೋಗ ನಾಶಕ್ಕೆ ಒಬ್ಬ ಮಂತ್ರಿ'ಯನ್ನೇ ನೇಮಿಸುತ್ತಿರುವಾಗ 'ಉದ್ಯೋಗ' ಎಂಬ ಪದ ಬಳಕೆಯನ್ನು ರದ್ದುಪಡಿಸುವುದರಲ್ಲಿ ಯಾವ ತಪ್ಪಿದೆ ? ಹತ್ತಾರು ವರ್ಷಗಳಿಂದ ತುಂಬದೇ ಇರುವ ಬ್ಯಾಕ್‌ಲಾಗ್ ಹುದ್ದೆಗಳನ್ನು ಇತ್ತೀಚೆಗೆ – ಸುಪ್ರೀಂ ಕೋರ್ಟ್ ಛೀಮಾರಿ ಹಾಕಿದ್ದರಿಂದ ತುಂಬಬೇಕಾಯಿತು. ತುಂಬಿದ್ದಾದರೂ ಎಷ್ಟು ಹುದ್ದೆಗಳು ? ಒಂದೊಂದು ಇಲಾಖೆಯಲ್ಲಿ ೧ ಅಥವಾ ೨, ಜಾಸ್ತಿಯೆಂದರೆ ೫ ರಿಂದ ೧೦ ಮಾತ್ರ. ಇನ್ನು ಇತ್ತೀಚೆಗೆ ಕರ್ನಾಟಕ ಸರ್ಕಾರದವರು ಶಿಕ್ಷಕರ ಹುದ್ದೆಗಾಗಿ ಪರೀಕ್ಷೆ ನಡೆಸಿದರು. ಹುದ್ದೆಗಳ ಸಂಖ್ಯೆ – ೨೦೦೦, ಪರೀಕ್ಷೆ ಬರೆದವರು ೫೦ ಸಾವಿರ ! ಕರ್ನಾಟಕ ಲೋಕಸೇವಾ ಆಯೋಗ ವಿವಿಧ ಇಲಾಖೆಗಳಲ್ಲಿ ಖಾಲಿ ಇರುವ ೫೩೪ ಪ್ರಥಮದರ್ಜೆ ಸಹಾಯಕ ಹುದ್ದೆಗಾಗಿ ಅರ್ಜಿ ಕರೆದಿದೆ. ಅರ್ಜಿ ಸಲ್ಲಿಸಲು ಜುಲೈ ೨೩ ಕೊನೆಯ ದಿನಾಂಕವಾಗಿತ್ತು. ಈ ಲೇಖನ ಸಿದ್ಧಪಡಿಸುವ ವೇಳೆಗೆ ಕೆಪಿಎಸ್‌ಸಿಯನ್ನು ಸಂಪರ್ಕಿಸಿದಾಗ ಅವರು ಹೇಳಿದ್ದಿಷ್ಟು : ''ಇದುವರೆಗೆ ಸುಮಾರು ೨ ಲಕ್ಷದಷ್ಟು ಅರ್ಜಿಗಳನ್ನು ನಾವು ಸ್ವೀಕರಿಸಿದ್ದೇವೆ. ಆದರೆ ನಿಖರ ಮಾಹಿತಿ ಸಿಕ್ಕಾಗ ಸಂಖ್ಯೆ ಇನ್ನೂ ಜಾಸ್ತಿಯಾಗುತ್ತದೆ. ಯಾಕೆಂದರೆ ರಾಜ್ಯದ ೭೦ ಅಂಚೆ ಕಛೇರಿಗಳಲ್ಲಿ ಸ್ವೀಕಾರಾರ್ಹವಾಗಿರುವ ಅರ್ಜಿಗಳು ಇನ್ನೂ ಬರುತ್ತಲೇ ಇವೆ'' ಎನ್ನುತ್ತಾರೆ. ಒಂದೊಂದು ಅರ್ಜಿಗೂ ರೂ. ೫೦ ಕೊಡಬೇಕು. ಭರ್ತಿ ಮಾಡಿ ಸಲ್ಲಿಸುವಾಗ ಪರಿಶಿಷ್ಟ ಜಾತಿ/ವರ್ಗದವರಿಗೆ ರೂ. ೧೦೦ ಹಾಗೂ ಇತರೆಯವರು ರೂ. ೩೦೦ ನಗದು/ಡಿಡಿ ತುಂಬಬೇಕು. ಇನ್ನೂ ಸ್ವಾರಸ್ಯದ ಸಂಗತಿಯೆಂದರೆ – ಈ ೫೩೪ ಅಭ್ಯರ್ಥಿಗಳನ್ನು ಪರೀಕ್ಷೆಯಲ್ಲಿ ಪಾಸು ಮಾಡಿಸಲು ಪಣತೊಟ್ಟು ಭಾರಿ ಪ್ರಚಾರದೊಂದಿಗೆ – ಹಲವು ದಿನಪತ್ರಿಕೆಗಳು ನಿತ್ಯ ಕಾಲಂ ಆರಂಭಿಸಿವೆ. ಬೆಂಗಳೂರು ವಿಶ್ವವಿದ್ಯಾಲಯ ಸೇರಿದಂತೆ ನೂರಾರು ಸಂಸ್ಥೆಗಳು ಅಬ್ಬರದ ಪ್ರಚಾರದೊಂದಿಗೆ ತರಬೇತಿ ಪ್ರಾರಂಭಿಸಿವೆ. ಇನ್ನು ಪರೀಕ್ಷಾರ್ಥಿಗಳಿಗೆ ಸಹಾಯ ಮಾಡಲು ನಾ ಮುಂದು - ತಾ ಮುಂದು ಎಂಬಂತೆ ಹತ್ತಾರು ತರಹದ ಪ್ರಕಟಣೆಗಳು ಹೊಸ ಹೊದಿಕೆಯೊಂದಿಗೆ ಮಾರುಕಟ್ಟೆ ಪ್ರವೇಶಿಸಿ ನಿರುದ್ಯೋಗಿಗಳಿಂದ ಹಣ ಸುಲಿಗೆ ಮಾಡುತ್ತಿವೆ. ಇಲ್ಲಿ ಒಂದು ಅಂಶವನ್ನು ಪರೀಕ್ಷಿಸೋಣ – ೨ ಲಕ್ಷ ಅರ್ಜಿಗಳಿಂದ ಒಂದು ಕೋಟಿ ಹಣ ಆಗುತ್ತದೆ.

ಇದಲ್ಲದೆ ಅಭ್ಯರ್ಥಿಗಳ ಡಿ.ಡಿ. ಹಣದಿಂದ ೫ ಕೋಟಿ ರೂ. ಕೆಪಿಎಸ್‌ಸಿಯನ್ನು ಈಗಾಗಲೇ ಸೇರಿದೆ. ಅಂದರೆ ೫೩೪ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಪೂರ್ವದಲ್ಲಿ ೨ ಲಕ್ಷ ಅಭ್ಯರ್ಥಿಗಳಿಂದ ಸುಮಾರು ೧ ಕೋಟಿ ಹಾಗೂ ಡಿಡಿ/ನಗದು ರೂಪದಲ್ಲಿ ೫ ಕೋಟಿ ಒಟ್ಟು ಸುಮಾರು ೬ ಕೋಟಿ ಹಣವನ್ನು ನಿರುದ್ಯೋಗಿ ಯುವಜನರಿಂದ ಹಗಲು ದರೋಡೆ ನಡೆಸಿದೆ. ಈ ರೀತಿ ಸುಲಿಗೆಗೆ ಸರ್ಕಾರವೇ ನೇರ ಸಹಕರಿಸುತ್ತಿದೆ. ಹಿಂದಿನ ರಾಜ್ಯ ಸರ್ಕಾರ 'ಕಂಪು' ಎನ್ನುವ ಯೋಜನೆಯನ್ನು 'ಉದ್ಯೋಗ ವಿನಿಮಯ ಕೇಂದ್ರ'ದಲ್ಲಿಯೇ ತೆರೆಯಲು ಅವಕಾಶ ನೀಡಿ ಖಾಸಗಿ ಸಂಸ್ಥೆಯೊಂದು ೨೦ ಕೋಟಿ ಹಣ ಮಾಡಿಕೊಳ್ಳಲು ಅವಕಾಶ ಮಾಡಿಕೊಟ್ಟಿತು. ಈಗಿನ ಕಾರ್ಮಿಕ ಸಚಿವ ತನ್ವೀರ್ ಸೇಟ್ ಈ ಉದ್ಯೋಗ ವಿನಿಮಯ ಕೇಂದ್ರಗಳನ್ನು 'ಮಾಹಿತಿ ಪಾರ್ಕು'ಗಳನ್ನಾಗಿ ಮಾಡಲು ಹೊರಟಿದ್ದಾರೆ. ಇದು ಮತ್ಯಾರಿಗೆ ಲಾಭ ನೀಡುತ್ತದೋ ಕಾದು ನೋಡಬೇಕು.

### ಸೇವಾರಂಗದಲ್ಲಿ ಸುಧಾರಣೆಯ ದಾಳಿ

ಭಾರತದಲ್ಲಿ ಜಾರಿಯಾಗುತ್ತಿರುವ ಈ ಸುಧಾರಣೆಗಳ ದಾಳಿಗಳು ಸಾರ್ವಜನಿಕರಂಗ ಮತ್ತು ಸೇವಾರಂಗದಲ್ಲಿ ಭಾರಿ ಸಂಚಲನವನ್ನುಂಟುಮಾಡುತ್ತಿವೆ. ಭಾರತದ ಸಾರ್ವಜನಿಕ ಹಾಗೂ ಖಾಸಗಿ ಕ್ಷೇತ್ರಗಳೆರಡರಲ್ಲೂ ಈ ನೀತಿಗಳ ಪರಿಣಾಮವಾಗಿ ಭಾರಿ ಉದ್ಯೋಗಗಳು ಕಡಿತಗೊಂಡಿವೆ. ೨೦೦೧ರಲ್ಲಿ ಸಂಘಟಿತ ವಲಯದಲ್ಲಿ ೨೭೭.೮೯ ಲಕ್ಷ ಇದ್ದ ಉದ್ಯೋಗಗಳು, ೨೦೦೩ರಲ್ಲಿ ೨೭೦ ಲಕ್ಷಗಳಿಗಿಳಿದಿವೆ. ಅಂದರೆ ಕೇವಲ ಮೂರು ವರ್ಷದಲ್ಲಿ ೭.೮೯ ಲಕ್ಷ ಉದ್ಯೋಗಾವಕಾಶಗಳು ನಾಶಗೊಂಡವು.

ಸಂಘಟಿತ ವಲಯದ ಸಾರ್ವಜನಿಕ ಕ್ಷೇತ್ರದಲ್ಲಿ ಈ ರೀತಿ ಉದ್ಯೋಗ ನಾಶಕ್ಕೆ ಪ್ರಮುಖ ಕಾರಣವೆಂದರೆ ಬಂಡವಾಳ ಹಿಂತೆಗೆದುಕೊಳ್ಳುವ ಪ್ರಕ್ರಿಯೆ ಒಂದೆಡೆಯಾದರೆ, ಸರ್ಕಾರಿ ನೇಮಕಾತಿಗಳನ್ನೇ ಸಂಪೂರ್ಣ ರದ್ದುಪಡಿಸಬೇಕೆಂಬ ವಿಶ್ವಬ್ಯಾಂಕ್ ಒತ್ತಡ ಇನ್ನೊಂದೆಡೆ. ಪರಿಣಾಮವಾಗಿ ೯೦ರ ದಶಕದಿಂದ ಇಲ್ಲಿಯವರೆಗೆ ಸುಧಾರಣೆಯ ಹೆಸರಲ್ಲಿ ರಚಿತವಾದ ರಾಕೇಶ್ ಮೋಹನ್ ಸಮಿತಿಯು ರೈಲ್ವೆಯಲ್ಲಿ ನೇಮಕಾತಿಯನ್ನು ರದ್ದುಪಡಿಸುವುದಕ್ಕೆ ಶಿಫಾರಸ್ಸು ಮಾಡಿ, ಕಂಟ್ರಾಕ್ಟ್ ಪದ್ಧತಿ ಜಾರಿಗೊಳಿಸಲು ಕಾರಣವಾಯಿತು. ಒಂದೆಡೆ ದಿನಗೂಲಿಗಳಾಗಿ ರೈಲ್ವೆಯಲ್ಲಿ ಲಕ್ಷಾಂತರ ನೌಕರರಿರುವಾಗಲೇ ಅವರ ಬಗ್ಗೆ ಏನೂ ಮಾತನಾಡದೇ ರೈಲ್ವೆ ಖಾಸಗೀಕರಣಕ್ಕೆ ಚಾಲನೆ ನೀಡಲು ಸೂಚಿಸಲಾಯಿತು. ಸಂಘಟಿತ ಕ್ಷೇತ್ರದಲ್ಲಿನ ಆಡಳಿತ ವೆಚ್ಚವನ್ನು ನಿಯಂತ್ರಿಸುವ ಸಲುವಾಗಿ ರಚಿತವಾದ ಗೀತಾ ಕೃಷ್ಣನ್ ಸಮಿತಿಯು ಎಲ್ಲಾ ರಾಜ್ಯಗಳಲ್ಲಿಯೂ ಮತ್ತು ಕೇಂದ್ರ ಸರ್ಕಾರದ ಎಲ್ಲಾ ಇಲಾಖೆಗಳಲ್ಲಿಯೂ ಆಡಳಿತ ವೆಚ್ಚಗಳನ್ನು ತಗ್ಗಿಸಲು ಅಗತ್ಯ ಸುಧಾರಣೆಗಳನ್ನು ನಡೆಸಬೇಕೆಂಬ ಬಗ್ಗೆ ಶಿಫಾರಸ್ಸು ಮಾಡಿತು. ಭಾರತದ ಯೋಜನಾ ಆಯೋಗದ ಅಡಿಯಲ್ಲಿ ರಚಿತವಾದ ಶ್ರೀ ಮಾಂಟೆಕ್‌ಸಿಂಗ್ ಅಹ್ಲುವಾಲಿಯಾ ನೇತೃತ್ವದ ಕ್ಷಿಪ್ರ ಕಾರ್ಯಪಡೆಯು ಯೋಜನಾ ವಿಷಯಗಳಿಗೆ ಸಂಬಂಧಿಸಿ ಮತ್ತು ತೆರಿಗೆ ಸುಧಾರಣೆ ಸಂಬಂಧಿಸಿ ಮತ್ತು ಈ ಕಾರ್ಯಪಡೆಯು ಎರಡು ಪ್ರಮುಖ ಕ್ಷೇತ್ರಗಳಾದ ಕಾರ್ಮಿಕ ಕ್ಷೇತ್ರ ಮತ್ತು ವಿದ್ಯುತ್ ಕ್ಷೇತ್ರದಲ್ಲಿ ತೀವ್ರತರವಾದ ಸುಧಾರಣೆಗಳನ್ನು ಜಾರಿಗೊಳಿಸಲು ಶಿಫಾರಸ್ಸು ಮಾಡಿತು. ನಂತರದಲ್ಲಿ ಬಂದ ನರೇಶ್ ಕಮಿಟಿ ಪ್ರಮುಖವಾಗಿ ಸೇವಾಸೌಲಭ್ಯಗಳ ಹಾಗೂ ಕೊಂಡುಕೊಳ್ಳುವಿಕೆ ಹಾಗೂ ವಿಲೀನ ಸಂಬಂಧಿಸಿ ಮತ್ತು ಕೇಳ್ಕರ್ ಸಮಿತಿ, ಗೋಪಾಲ ರೆಡ್ಡಿ ಸಮಿತಿಗಳು ಪ್ರಮುಖವಾಗಿ ತೆರಿಗೆ ಸುಧಾರಣೆಗಳು, ಕೊರತೆ ಬಜೆಟ್ ಶೇ. ೩ ಮೀರದಂತೆ ತಡೆಯುವುದು, ಮತ್ತು ನೌಕರರ ೧೨ನೇ ವೇತನ ಆಯೋಗದ ಶಿಫಾರಸ್ಸುಗಳಿಗೆ ಸಂಬಂಧಿಸಿ ಚರ್ಚಿಸಿ ಸರ್ಕಾರಕ್ಕೆ ಆಯಾ ಸಂದರ್ಭಗಳಲ್ಲಿ ವರದಿಗಳನ್ನು ನೀಡಿವೆ.

ಕರ್ನಾಟಕದಲ್ಲಿ ವಿಶ್ವಬ್ಯಾಂಕಿನ ಆಣತಿಯಂತೆ ಕೆಲಸ ಮಾಡುತ್ತಿದ್ದ ಹಿಂದಿನ ಮುಖ್ಯಮಂತ್ರಿ ಎಸ್. ಎಂ. ಕೃಷ್ಣರವರು ಹಿಂದೆ ಬೀಳಲಿಲ್ಲ. ಅವರು ಆಡಳಿತ ಸುಧಾರಣೆ ಹೆಸರಲ್ಲಿ ಹಾರ್‍ನಳ್ಳಿ ರಾಮಸ್ವಾಮಿ ಆಯೋಗವನ್ನು ರಚಿಸಿದರು. ಮಾತ್ರವಲ್ಲ, ಅವರು ನೀಡಿದ ಎಲ್ಲಾ ನೌಕರ ವಿರೋಧಿ – ದುಡಿಯುವ ಜನ ವಿರೋಧಿ ಶಿಫಾರಸ್ಸುಗಳನ್ನು ಜಾರಿಗೊಳಿಸಿದರು. ಅಲ್ಲದೆ ಇತ್ತೀಚೆಗೆ ಸುಂದರ್‌ಸಿಂಗ್ ನೇತೃತ್ವದಲ್ಲಿ ಐಎಎಸ್-ಐಪಿಎಸ್ ಹುದ್ದೆಗಳ ಕಡಿತಕ್ಕೆ ಸಂಬಂಧಿಸಿ ವರದಿಯು ಸರ್ಕಾರಕ್ಕೆ ಸೇರಿದೆ.

### ಒಟ್ಟಾರೆ ಫಲ : ಉದ್ಯೋಗಗಳ ನಾಶ

ಸುಧಾರಣೆಯ ಹೆಸರಿನಲ್ಲಿ ರಚಿತವಾದ ರಾಕೇಶ್ ಸಿಂಗ್ ಕಮಿಟಿಯಿಂದ ಹಿಡಿದು ನಮ್ಮ ರಾಜ್ಯದಲ್ಲಿ ಜಾರಿಗೊಂಡ ಹಾರ್‍ನಳ್ಳಿ ರಾಮಸ್ವಾಮಿ ಹಾಗೂ ಸುಂದರ್‌ಸಿಂಗ್ ನೇತೃತ್ವದ ಎಲ್ಲಾ ಆಡಳಿತ ಮತ್ತು ಇತರೆ ಎಲ್ಲಾ ಸುಧಾರಣೆಗಳ ಒಟ್ಟಾರೆ ಫಲಿತಾಂಶವೆಂದರೆ – ವಿಶ್ವಬ್ಯಾಂಕ್ ನಿರ್ದೇಶನದಂತೆ ಆಡಳಿತವನ್ನು ಸುಧಾರಿಸುವ ನೆಪದಲ್ಲಿ, ತೆರಿಗೆಗಳನ್ನು, ಸಾಲ ಸೌಲಭ್ಯಗಳನ್ನು ಸರಳೀಕರಿಸುವ ನೆಪದಲ್ಲಿ ಜನ ಸಾಮಾನ್ಯರು, ಬಡವರು ಹಾಗೂ ಮಧ್ಯಮವರ್ಗದವರ ಎಲ್ಲಾ ಸವಲತ್ತುಗಳನ್ನು, ಹಕ್ಕುಗಳನ್ನು ಕಿತ್ತುಕೊಳ್ಳುವುದು.

ಈ ನೀತಿಗಳ ಪರಿಣಾಮವಾಗಿ ಕಳೆದ ೧೫ ವರ್ಷಗಳಿಂದ ಉದ್ಯೋಗ ನೇಮಕಾತಿಯ ಮೇಲೆ ನಿರ್ಬಂಧ ಹೇರಲಾಗಿದೆ. ಶೇ. ೧೦ರಷ್ಟು ಉದ್ಯೋಗಗಳನ್ನು ಕಡಿತ ಮಾಡುವ ತೀರ್ಮಾನದ ಫಲವಾಗಿ ಹಿಂದೆ ಇದ್ದ ಎನ್‌ಡಿಎ ಸರ್ಕಾರ ಪ್ರತಿವರ್ಷ ೬೬ ಸಾವಿರ ಹುದ್ದೆಗಳನ್ನು ರದ್ದುಗೊಳಿಸುವ ತೀರ್ಮಾನ ಕೈಗೊಂಡಿತು.

ನಮ್ಮ ದೇಶದಲ್ಲಿ ನವ-ಉದಾರವಾದಿ ನೀತಿಗಳು ಜಾರಿಯಾದಾಗಿನಿಂದ ಇಲ್ಲಿಯವರೆಗೂ ಕೇಂದ್ರ ಸರ್ಕಾರದ ವಿವಿಧ ಇಲಾಖೆಗಳಲ್ಲಿ ೭ ಲಕ್ಷ ಹುದ್ದೆಗಳನ್ನು ರದ್ದುಪಡಿಸಲಾಗಿದೆ ಮತ್ತು ಖಾಲಿ ಇದ್ದ ೩ ಲಕ್ಷ ಹುದ್ದೆಗಳನ್ನು ತುಂಬಲಾಗಿಲ್ಲ. ಒಟ್ಟಾರೆ ೧೦ ಲಕ್ಷ ಉದ್ಯೋಗಗಳು ನಾಶಗೊಂಡಿವೆ. ಇದಲ್ಲದೆ ವಿವಿಧ ರಾಜ್ಯಗಳಲ್ಲಿ ಖಾಲಿ ಇರುವ ೧೫ ಲಕ್ಷ ಸರ್ಕಾರಿ ಹುದ್ದೆಗಳನ್ನು ತುಂಬಲು ಅನುಮತಿ ನೀಡಲಾಗಿಲ್ಲ. ಈ ಎಲ್ಲಾ ನೀತಿಗಳ ಪರಿಣಾಮ ಭಾರಿ ಪ್ರಮಾಣದ ನಿರುದ್ಯೋಗಕ್ಕೆ ಪ್ರೇರೇಪಿಸುತ್ತದೆ ಮತ್ತು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದ ವಿಭಾಗಕ್ಕೂ ಸಿಗಬೇಕಾದ ಸಾಮಾಜಿಕ ನ್ಯಾಯವನ್ನು ನಿರಾಕರಿಸಲಾಗುತ್ತಿದೆ.

ಕರ್ನಾಟಕ ರಾಜ್ಯದಲ್ಲಿ ಈ ಎಲ್ಲಾ ಸುಧಾರಣೆಗಳ ಫಲವಾಗಿ, ರಾಜ್ಯದಲ್ಲಿ ಖಾಲಿ ಇದ್ದ ೧ ಲಕ್ಷ ಹುದ್ದೆಗಳನ್ನು ಹಿಂದಿನ ಎಸ್. ಎಂ. ಕೃಷ್ಣ ನೇತೃತ್ವದ ಸರ್ಕಾರ ರದ್ದುಪಡಿಸಿತು. ಮತ್ತೆ ಅದೇ ನೀತಿಗಳ ಭಾಗವಾಗಿ ಧರ್ಮಸಿಂಗ್ ನೇತೃತ್ವದ ಸಮ್ಮಿಶ್ರ ಸರ್ಕಾರ ೨೦೧೪೨ ಖಾಲಿ ಹುದ್ದೆಗಳನ್ನು ರದ್ದುಪಡಿಸುವ ತೀರ್ಮಾನ ಕೈಗೊಂಡಿದೆ. ಇದಲ್ಲದೆ, ರಾಜ್ಯದಲ್ಲಿರುವ ಸಾರ್ವಜನಿಕ ಉದ್ದಿಮೆಗಳನ್ನು ಮುಚ್ಚುವುದು, ಇಲ್ಲವೇ ಮಾರುವುದು, ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸಿನನ್ವಯ ವಿವಿಧ ಇಲಾಖೆಗಳನ್ನು ಮುಚ್ಚುವುದು ಇಲ್ಲವೇ ವಿಲೀನಗೊಳಿಸುವುದು, ನೌಕರರಿಗೆ – ಕಾರ್ಮಿಕರಿಗೆ ಸ್ವಯಂ ನಿವೃತ್ತಿ ಯೋಜನೆಗಳನ್ನು ಜಾರಿಗೊಳಿಸುತ್ತಿರುವುದು, ಇಲ್ಲವೇ ವಜಾಗೊಳಿಸುತ್ತಿರುವುದು, ಅನುಕಂಪದ ಆಧಾರದ ಮೇಲಿನ ನೇಮಕಾತಿ ನಿರ್ಬಂಧ ಹೇರುವುದು, ಮಿತವ್ಯಯ ಕ್ರಮಗಳ ಹೆಸರಲ್ಲಿ, ವಿದ್ಯುನ್ಮಾನ ಆಡಳಿತ ಹೆಸರಲ್ಲಿ, ಇಲಾಖೆ ಸಮೀಕ್ಷೆ ಕಾರ್ಯಗಳ ಹೆಸರಲ್ಲಿ, ಹೊರ ಸಂಪನ್ಮೂಲ ಬಳಕೆಯ ಹೆಸರಲ್ಲಿ ಮತ್ತು ಖಾಸಗೀ ಸಹಭಾಗಿತ್ವದ ಹೆಸರಲ್ಲಿ ಹಲವಾರು ಜನವಿರೋಧಿ ನೀತಿಗಳನ್ನು ಹರಿಯಬಿಡಲಾಗುತ್ತಿದೆ.

ಇಂತಹ ಎಲ್ಲಾ ನೀತಿಗಳನ್ನು ಒಪ್ಪಿಕೊಳ್ಳುವುದೆಂದರೆ ನಮ್ಮ ಸ್ವಾತಂತ್ರ್ಯ, ಸಾರ್ವಭೌಮತ್ವವನ್ನು ಮತ್ತೆ ವಿದೇಶಿಯರಿಗೆ ಶಿರಬಾಗಿ ಒಪ್ಪಿಸುವುದೆಂದೇ ಅರ್ಥ. ಇಂತಹ ಜನವಿರೋಧಿ – ದೇಶವಿರೋಧಿ ಹಾಗೂ ಯುವಜನ ವಿರೋಧಿ ನೀತಿಗಳ ವಿರುದ್ಧ ಹೋರಾಡುವುದೊಂದೇ ಈಗ ನಮ್ಮೆದುರು ಉಳಿದಿರುವ ಏಕೈಕ ಮಾರ್ಗ.

**ಕೆ. ಮಹಾಂತೇಶ್**
ನಂ. ೬೮೧, ೫ನೇ 'ಎ' ಮುಖ್ಯರಸ್ತೆ, ಬಾಹುಬಲಿ ನಗರ
ಜಾಲಹಳ್ಳಿ, ಬೆಂಗಳೂರು – ೫೬೦ ೦೧೩

# ತಲೆಯೊಂದರ ತಳಮಳ



“ಇವೊತ್ತು ಅಮಾವಾಸ್ಯೆ, ನಿಮ್ಗೆ ತಲೆ ಸರಿಯಾಗಿದ್ಯ ಅಂತೀನಿ, ಕತ್ತಲಾದ್ಮೇಲೆ ವಾಕಿಂಗ್ ಹೊರಟಿದಿರಲ್ಲ...'' ಅಂತ ಅರ್ಧಾಂಗಿ ತಾಕೀತಿಗಿಳಿದಿದ್ದಳು ನಿನ್ನೆ ಸಂಜೆ ವಾಯುಸೇವನೆಗೆ ಹೊರಡಲು ಸಿದ್ಧನಾದಾಗ. 'ನನಗೆ ಇನ್ನು ಏನು ತಾನೆ ಕೆಟ್ಟದಾಗಬೇಕಾಗಿದೆ ಹೇಳು. ನಿನ್ನ ಕೈ ಹೇಗೂ ಹಿಡಿದಾದ್ಮೇಲೆ' ಎಂದು ನಾನು ಮೆಲುಧ್ವನಿಯಲ್ಲಿ ಉದ್ಗರಿಸಿದೆ. ''ಆಹಾ! ಇದಕ್ಕೇನೂ ತಲೆಗೆ ಕಡಿಮೆಯಿಲ್ಲ ನೋಡಿ ನಿಮ್ಗೆ'' ಅನ್ನುವ ಟೀಕೆಯೂ ಸಿದ್ಧವಾಗಿತ್ತು. ಮನೆಬಿಟ್ಟು ಹತ್ತು ಮಾರು ಕೂಡ ಸಾಗಿರಲಿಲ್ಲ, ಆ ಕಿರಾಣಿ ಪಾರ್ಕಿನ ಮುಂದಿರುವ ಬೋಡು ತೆಂಗಿನ ಮರದ ಬುಡದ ಬಳಿ ಒಂದು ಅಕ್ಷರಶಃ ಮುಂಡದಿಂದ ಬೇರ್ಪಟ್ಟ ತಲೆ ನನ್ನನ್ನು ಕಾಣುತ್ತಲೇ ಚಡಪಡಿಸಿತೊಡಗಿತು. ನಾನು ಹೌಹಾರಿ ಚಳಿಯಲ್ಲೂ ಬೆವರಿದೆ.

''ಬಾ ಮಾರಾಯ, ಯಾಕೆ ಈ ಪರಿ ಹೆದರುತ್ತಿ? ನೀನು ಸಿಕ್ಕಿದ್ದು ನನಗೆ ಒಳ್ಳೆಯದೇ ಆಯಿತು ನೋಡು'' ಎಂದು ಅದು ಆಕಳಿಸಿದಾಗಲಂತೂ ನಾನು ಅರ್ಧಪ್ರಜ್ಞೆಯನ್ನೇ ಕಳೆದುಕೊಂಡಿದ್ದೆ ಅನ್ನಿ. ಧೈರ್ಯಂ ಸರ್ವತ್ರ ಸಾಧನಂ... ಭೀತನಾಗದೆ ಸಂಯಮ ತಳೆದು ''ಏನಿದು ನಿನ್ನ ಅವಸ್ಥೆ ತಲೆಯೆ? ನಾನೇ ನಿನಗೆ ಬೇಕಿತ್ತೇನಪ್ಪ ಮಹಾನುಭಾವ?'' ಎಂದು ಕೇಳಿದೆ.

''ನಿಜ ಕಣಯ್ಯ ಮಿತ್ರ. ಇನ್ನು ಹೆಚ್ಚು ಸಮಯ ವ್ಯರ್ಥಮಾಡದೆ ನಿನಗೆ ನನ್ನ ಕಥೆ ವ್ಯಥೆ ಹೇಳಿಕೊಂಡುಬಿಡುವೆ.''

''ಏನಂದೆ? ನಿನಗೆಂಥದಪ್ಪ ವ್ಯಥೆ? ಶಿರಸ್ತ್ರಾಣ, ಟೋಪಿ ಯಾಕೆ, ಅದೃಷ್ಟ ಒಲಿದರೆ ಕಿರೀಟವನ್ನೇ ಧರಿಸುವೆಯಲ್ಲಪ್ಪ ಪುಣ್ಯಾತ್ಮ!''

''ಉಬ್ಬಿಸು... ಉಬ್ಬಿಸು. ಒಮ್ಮೊಮ್ಮೆ ಅಕ್ಷತೆಯನ್ನೂ ಹಾಕಿ ಹರಸುತ್ತಾರೆ ಸರಿ. ಆದರೆ ನನ್ನ ಇನ್ನೊಂದು ಮುಖವಿದೆ ಅದರದೆ ನೋಡು ಗೋಳು.''

ಕುತೂಹಲಗೊಂಡು ''ಏನು ತಲೆಯೆ? ಅದೆಲ್ಲವನ್ನು ಸಂಕೋಚವಿಲ್ಲದೆ ನನ್ನ ಬಳಿ ವಿವರಿಸು'' ಅಂದೆ. ತಲೆ ದೊಡ್ಡ ಪ್ರಲಾಪಕ್ಕಿಳಿಯಿತು.

''ಮನುಷ್ಯ ಏನೇ ತಪ್ಪು ಮಾಡಲಿ, ತಬ್ಬಿಬ್ಬಿಗೊಳಗಾಗಲಿ, ಅನಾರೋಗ್ಯಪೀಡಿತನಾಗಲಿ ನನ್ನ ಮೇಲೆಯೇ ಗೂಬೆ ಕೂರಿಸಲಾಗುತ್ತದೆ. ಒಂದು ಮಾತು ಹೆಚ್ಚಾಗಿ ಆಡಿದರೂ ಸಾಕು ತಲೆಯೆಲ್ಲ ಮಾತಾಡ್ತಾನೆ, ತಲೆ ಹಾಕ್ತಾನೆ, ತಲೆಹರಟೆ... ಹೀಗೆ ವಿಶೇಷಣಗಳು ನನ್ನ ಬಗ್ಗೆ! ಕೈಕಾಲುಗಳು ಎಸಗುವ ಅವಾಂತರಗಳಿಗೂ ನನ್ನನ್ನೇ ಹೊಣೆಯಾಗಿಸುತ್ತಾರೆ ಪ್ರಜೆಗಳು. ಸ್ಕ್ಯಾಂಪಲ್ಲೆಂದರೆ ಬೈಕನ್ನೋ, ಕಾರನ್ನೋ ಅಡ್ಡಾದಿಡ್ಡಿ ಓಡಿಸಿದರೆ ಆಯಾ ಚಾಲಕರಿಗೆ ಯಾಕೆ ತಲೆ ನಟ್ಟು ಬೋಲ್ಟು ಲೂಸಾಗಿದ್ಯ ಎಂಬ ತರಾಟೆ! ನಾನು ಎಷ್ಟೇ ನೇರವಾಗಿದ್ದರೂ ತಲೆ ನೆಟ್ಟಗಿದ್ಯ ನಿಮ್ಗೆ ಎನ್ನುವ ಪ್ರಶ್ನೆ ಮಾತು ಮಾತಿಗೂ ಇದ್ದದ್ದೇ ನೋಡು. ನಿಜವಾಗಲೂ ಇದೇ ನನಗೆ ದೊಡ್ಡ ನೋವು. ತಲೆನೋವು ಎಂದು ನೀನೂ ಹಾಸ್ಯ ಮಾಡುವಿಯೆಂದು ನನಗೆ ಗೊತ್ತು ಬಿಡು! ಆಮೇಲೆ ಮರೆತಿದ್ದೆ, ನನ್ನ ಬಗೆಗಿನ ಕೆಲವು ಪದಪ್ರಯೋಗಗಳು ಶೀರಾ ಭಯಾನಕ, ಅಷ್ಟೇ ಅಸಂಬದ್ಧವಾಗಿರುತ್ತವೆ. ತಲೆಮೇಲೆ ಚಪ್ಪಡಿ ಎಳೆದಂತೆ, ತಲೆ ತಿನ್ನುವುದು, ತಲೆಗೆ ಕಟ್ಟಿದ್ದು.... ಇಂಥವೆಲ್ಲ ಅದಕ್ಕೆ ನಿದರ್ಶನಗಳು. ನನ್ನ ಕುರಿತು ಗಾದೆಗಳಿಗೇನೂ ಬರವಿಲ್ಲ ಕಣಯ್ಯ. 'ತಲೆ ತಾಕಬೇಕು, ಬುದ್ಧಿ ಬರಬೇಕು', 'ತಲೆ ಇದ್ದೋರು ಶರದಾಡ್ತಾರೆ'... ಹೀಗೆ. ನಾನು ಲೆಕ್ಕದಲ್ಲೋ, ತಿಳಿವಳಿಕೆಯಲ್ಲೋ ಸ್ವಲ್ಪ ಎಡವಿದರೂ ಸರಿ ಜನ ಕಾದಿರ್ತಾರೆ ನೋಡು. ಏನ್ ಒಳಗೆ ಜೇಡಿಮಣ್ಣಿದೆಯೋ ಅಥವಾ ಸಗಣಿ ಇದೆಯೋ ಅನ್ನೋಕೆ! ನನ್ನೊಳಗಿರುವ ಮಿದುಳೆಂಬ ಮಹಾಯಂತ್ರದ ಕಿಮ್ಮತ್ತೇ ಯಾರಿಗೂ ತಿಳಿದಿಲ್ಲವಲ್ಲ! ಅದೇ ಮಾರಾಯ ಆಶ್ಚರ್ಯ! ಮಾನವ ಸೇವಿಸುವ ಆಮ್ಲಜನಕದ ಪೈಕಿ ಐದನೇ ಒಂದು ಭಾಗ ಬಳಸಿಕೊಂಡು ಇಡೀ ಶರೀರವನ್ನು ಚಟುವಟಿಕೆಯಿಂದಿಟ್ಟಿರೋದು ನನ್ನಲ್ಲಿನ ಆ ಮಿದುಳಪ್ಪ. ಇರಲಿ ನಿಂಗೆ ತುಂಬಾನೆ ಬೋರು ಹೊಡಿಸ್ತಾಯಿದೀನಿ ಕ್ಷಮಿಸು...''

ತಲೆ ಹಾಗೆಂದಾಗ ನಾನು ಅದುಮಿಟ್ಟಿದ್ದ ಪ್ರಶ್ನೆಯೊಂದನ್ನು ಎಸೆದೆ.

''ನೀನು ಯಾರದೋ ಮುಂಡದಿಂದ ಹೊರಬಂದು ಬಹಳ ಹೊತ್ತಾಯಿತು. ಹೋಗು ಪಾಪ! ಆ ಆಸಾಮಿ ನೀನಿಲ್ಲದೆ ಎಷ್ಟೊಂದು ಪೇಚಾಡಿಯಾನು ಅಲ್ಲವೆ?''

''ಸುಮ್ನಿರು... ನಾನು ಎಷ್ಟಾದ್ರು ತಲೆ ಕಣಯ್ಯ. ಕಾಮನ್‌ಸೆನ್ಸ್ ನನಗಲ್ಲದೆ ಬೇರೆ ಯಾರಿಗಿದ್ದೀತು? ಅಂದಹಾಗೆ ಆ ಆಸಾಮಿ ಒಬ್ಬ ರಾಜಕಾರಣಿ, ತಲೆ ಗಂಟೆಗಟ್ಟಲೆ ಏನು ದಿನಗಟ್ಟಲೆ ಇಲ್ಲದಿದ್ದರೂ ನಡೆದೀತು!!'' ಅನ್ನುವುದೇ ಆ ತಲೆ?

...ತಲೆ ...ತಲೆ ಭೇಷ್ ತಲೆ... ಎನ್ನುತ್ತಲೇ ಇದ್ದೆ. ಅರ್ಧಾಂಗಿ ಏಳಿ ಸಾಕು ಮಧ್ಯಾಹ್ನದ ನಿದ್ದೆ, ನಿಮ್ಮ ತಲೆಯನ್ನು ನೀವೇ ಹೊಗಳಬೇಕಷ್ಟೆ ಎಂದು ಛಿಂಬು ಸರಿಸಿದ್ದಳು.

ಬಿಂಡಿಗನವಿಲೆ ಭಗವಾನ್
ಗಣಿತ ಉಪನ್ಯಾಸಕರು, ಶ್ರೀ ಕೊಂಗಾಡಿಯಪ್ಪ ಪಿಯು ಕಾಲೇಜ್, ದೊಡ್ಡಬಳ್ಳಾಪುರ –

# ಸಾವಿನ ದೂತನ ಪುನರ್‌ಪರಿಶೀಲನೆ ಏಜೆಂಟ್ ಆರೆಂಜ್ ಕಥೆ

■ ಡಾ॥ ಎಸ್. ಚಟರ್ಜಿ

ವ್ಯಕ್ತಿಗತವಾಗದೆ ಬದುಕುವುದು ಅಸಾಧ್ಯ. ೧೯೭೫ರ ಏಪ್ರಿಲ್ ೩೦ನ್ನು ನಾನು ನೆನಪಿಸಿಕೊಳ್ಳುತ್ತೇನೆ. ''ಹೊರಬನ್ನಿ, ಓಡಿ. ಹಬ್ಬವನ್ನು ಆಚರಿಸಲಾಗುತ್ತಿದೆ. ವಿಯೆಟ್ನಾಂಅನ್ನು ಸ್ವತಂತ್ರಗೊಳಿಸಲಾಗಿದೆ'' ಎಂದು ಹೇಳುತ್ತಾ ವಿಶ್ವವಿದ್ಯಾನಿಲಯದಲ್ಲಿನ ನನ್ನ ಸಹೋದ್ಯೋಗಿಯು ಬಂದರು. ಆ ಸಂತೋಷದ ಕ್ಷಣದಲ್ಲಿ ವಿಯೆಟ್ನಾಮಿ ಜನತೆಯ ಮೇಲೆ ಸುರಿದಿದ್ದ ಅಮಾನವೀಯ ಸಂಕಟಗಳನ್ನು ನಾವು ಮರೆಯಲು ಸಾಧ್ಯವಾಯಿತು. ಬರಲಿರುವ ಕಾರ್ಮಿಕ ದಿನವಾದ ಮೇ ದಿನವು ಹಿಂದೆಂದಿಗಿಂತಲೂ ಹೆಚ್ಚು ಖುಷಿಕೊಡುವಂತಾಯಿತು. ನಂತರದ ದಿನಗಳಲ್ಲಿ ನಾನು ಕಂಡ ಮೇ ದಿನದ ಚಿತ್ರಣವು ನಾನು ೩೦ ವರ್ಷಗಳ ಹಿಂದೆ ಕಂಡಿದ್ದ ಮುರಿದುಬಿದ್ದ ಅಮೆರಿಕಾದ ರಾಯಭಾರ ಕಛೇರಿಯೊಳಗೆ ವಿಯೆಟ್ನಾಮಿ ಸೈನಿಕನು ತನ್ನ ಟ್ಯಾಂಕರ್‌ನ್ನು ನುಗ್ಗಿಸುವ ಚಿತ್ರದಂತಿತ್ತು. ೩೦ನೇ ವಾರ್ಷಿಕೋತ್ಸವ ಆಚರಣೆಯು ಮತ್ತಷ್ಟು ವಿಜೃಂಭಣೆಯಿಂದ ನಡೆದದ್ದು ಮಾತ್ರವಲ್ಲದೆ 'ಏಜೆಂಟ್ ಆರೆಂಜ್' ಬಾಂಬು ದಾಳಿಯ ಬಗ್ಗೆ ವಿಯೆಟ್ನಾಮಿ ಸಂತ್ರಸ್ತರ ಪ್ಯಾರಿಸ್ ಸಭೆಯ ಬಗ್ಗೆ ನನಗೆ ತಿಳಿದಾಗ ಅಮೆರಿಕಾದ ಅನಾಗರಿಕತೆಯು ಮತ್ತೊಮ್ಮೆ ನೆನಪಿಗೆ ಬಂತು. ಹಿರೋಶಿಮಾ ಮತ್ತು ನಾಗಸಾಕಿ ಜನರ ಸಂಕಷ್ಟಗಳನ್ನು ನಾವು ಕಂಡಿದ್ದೇವೆ. ಆದರೂ ವಿಯೆಟ್ನಾಮಿ ಸಂತ್ರಸ್ತರ ಸಂಕಟಗಳು ಜಗತ್ತಿಗೆ ಗೊತ್ತಿರಲಾರದು.

೧೯೫೦ರ ದಶಕದಲ್ಲಿ ಮಲಯಾದಲ್ಲಿ ಕಮ್ಯುನಿಸ್ಟ್ ಗೆರಿಲ್ಲಾಗಳ ವಿರುದ್ಧದ ಆಂದೋಲನದಲ್ಲಿ ಆಗ್ನೇಯಾ ಏಷ್ಯಾದಲ್ಲಿ ಮರದ ಎಲೆಗಳುದುರುವಂತೆ ಮಾಡುವ ರಾಸಾಯನಿಕಗಳನ್ನು ಬಳಸಿಕೊಂಡು ಬ್ರಿಟಿಷರು ಮಾಡಿದ ಪ್ರಯೋಗದಿಂದಲೇ ಏಜೆಂಟ್ ಆರೆಂಜ್ ಕಥೆಯನ್ನು ಶುರುಮಾಡಬೇಕಿದೆ. ಈ ಪ್ರದೇಶದಲ್ಲಿ ಕಮ್ಯುನಿಸಂ ಅನ್ನು ನಿಯಂತ್ರಿಸಲು ಅಮೆರಿಕಾದ ಹೊಸ ಮಿಲಿಟರಿ ತಂತ್ರಗಾರಿಕೆಯನ್ನು ಇದು ಶುರು ಮಾಡಿತು. ಎಲೆಯುದುರುವಂತೆ ಮಾಡುವ ರಾಸಾಯನಿಕಗಳನ್ನು ಬಳಸುವುದು ಬಹುಮುಖ್ಯವಾದ ಮಿಲಿಟರಿ ಉದ್ದೇಶವೆಂದು ಗುರುತಿಸಲಾಗಿದೆ. ಮೊದಲನೆಯದಾಗಿ, ಮರದ ಎಲೆಗಳು ಉದುರಿಹೋಗುವಂತೆ ಮಾಡುವುದರಿಂದ ಗೆರಿಲ್ಲಾಗಳು ಅಡಗಿಕೊಳ್ಳಲು ಸಾಧ್ಯವಿರುವುದಿಲ್ಲ ಮತ್ತು ಆಹಾರಕ್ಕಾಗಿ ಹಣ್ಣುಗಳು ಸಿಗುವುದಿಲ್ಲ. ಅತಿ ಮುಖ್ಯವಾಗಿ, ರಾಜಕೀಯ ಸಂಪರ್ಕ ಮತ್ತು ರಕ್ಷಣೆಗಾಗಿ ಗೆರಿಲ್ಲಾಗಳು ಅವಲಂಬಿಸಿರುವ ಗ್ರಾಮೀಣ ಆರ್ಥಿಕತೆಯನ್ನು ಅದು ನಾಶಪಡಿಸುತ್ತದೆ.

ಬ್ರಿಟಿಷರ ಈ ಯಶಸ್ಸಿನ ಮುಂದುವರಿಕೆಯಾಗಿ ರಣರಂಗದಲ್ಲಿ ಏಜೆಂಟ್ ಆರೆಂಜ್‌ಅನ್ನು ಬಳಕೆಗೆ ತರಲಾಯಿತು. ಎಲೆಯುದುರುವಂತೆ ಮಾಡುವ ವಿವಿಧ ರಾಸಾಯನಿಕಗಳು (Defoliants) ತಮ್ಮ ಬಣ್ಣದಿಂದಾಗಿ ಆ ಹೆಸರು ಪಡೆದಿದ್ದು ಅತಿಹೆಚ್ಚು ವಿಷಕಾರಿ ರಾಸಾಯನಿಕವಾದ ಡೈ ಆಕ್ಸಿನ್‌ಅನ್ನು ಹೊಂದಿರುತ್ತವೆ. ೧೯೫೯ರಲ್ಲಿ, ಏಜೆಂಟ್ ಪರ್ಪಲ್ ಕಾರ್ಯಾಚರಣೆಯ ಸಂದರ್ಭದಲ್ಲಿ ನ್ಯೂಯಾರ್ಕ್‌ನ ಕ್ಯಾಂಪ್ ಡ್ರಮ್‌ನಲ್ಲಿ ಪ್ರಥಮ ಪ್ರಯೋಗಗಳನ್ನು ಅಮೆರಿಕಾದ ರಕ್ಷಣಾ ಇಲಾಖೆಯು ನಡೆಸಿತು. ಪ್ರತಿ ಹೆಕ್ಟೇರ್‌ಗೆ ೨೮ ಲೀಟರ್‌ನಷ್ಟು ರಾಸಾಯನಿಕವನ್ನು ಸಿಂಪಡಿಸುವುದರ ಜೊತೆಗೆ, ರಾಸಾಯನಿಕದ ಪರಿಣಾಮವನ್ನು ಕೇಂದ್ರೀಕರಿಸುವ ಸಲುವಾಗಿ ತುಂತುರು ಹನಿಯಾಗಿ ಸಿಂಪಡಿಸುವ ರಾಸಾಯನಿಕದ ಕನಿಷ್ಠ ಗತಿಯನ್ನು ಖಚಿತಪಡಿಸಲು ವಿಶೇಷ ಹನಿ ವ್ಯವಸ್ಥೆಯನ್ನು ಕಂಡುಹಿಡಿಯಲಾಯಿತು. ಈ ಪ್ರಯೋಗಗಳ ಯಶಸ್ವಿ ಸಂಪೂರ್ಣತೆಯ ಜೊತೆಗೆ, ದಕ್ಷಿಣ ವಿಯೆಟ್ನಾಂನಲ್ಲಿ ಮುಂದಿನ ಹಂತದ ಪ್ರಯೋಗಗಳನ್ನು ನಡೆಸಲಾಯಿತು. ಅಲ್ಲಿನ ಸರ್ಕಾರಗಳು ಅಮೆರಿಕಾದ ಕೈಗೊಂಬೆಯಾಗಿದ್ದು ಮಾನವ ಮತ್ತು ಪ್ರಜಾಸತ್ತಾತ್ಮಕ ಹಕ್ಕುಗಳ ಉಲ್ಲಂಘನೆಯ ದಬ್ಬಾಳಿಕೆಯಲ್ಲಿ ದಾಖಲೆಯನ್ನೇ ನಿರ್ಮಿಸಿದ್ದವು.

ಈ ಪ್ರಯೋಗಗಳು ರಕ್ಷಣಾ ಇಲಾಖೆಯ ಕಾರ್ಯಕ್ರಮದ ಭಾಗವಾಗಿದ್ದರೂ (ಫಾರ್ಮ್‌ಗೇಟ್ ಎಂಬ ನಿಗೂಢ ಹೆಸರು ಪಡೆದಿದ್ದ – ಕೃಷಿ ಧ್ಯೇಯವನ್ನು ಅರ್ಥೈಸುವ) ಪ್ರಾಣಿ, ಪಕ್ಷಿ ಮತ್ತು ಕ್ರಿಮಿಗಳನ್ನು ಕೊಲ್ಲುವ ವಿಷಯಗಳಲ್ಲಿ ಕೃಷಿಗೆ ಸಂಬಂಧಿಸಿದ ಗುರಿಗಳನ್ನು ಘೋಷಿಸುತ್ತಾ ಮಿಲಿಟರಿ ಉದ್ದೇಶಗಳನ್ನು ಸಂಪೂರ್ಣವಾಗಿ ಮರೆಮಾಚಲಾಗುತ್ತದೆ. ಮಿಲಿಟರಿ ಶಿಬಿರಗಳನ್ನು ತೀವ್ರಗತಿಯಲ್ಲಿ ಸ್ಥಾಪಿಸಲು ಅರಣ್ಯವನ್ನು ಸ್ವಚ್ಛ ಮಾಡಿ ದಕ್ಷಿಣ ವಿಯೆಟ್ನಾಂಗೆ ಅನುದಾನ ನೀಡುವ ಹಾಗೆ ಇದನ್ನು ತೋರಿಸಿಕೊಳ್ಳಲಾಗುತ್ತಿತ್ತು. ೧೯೬೧ರ ಆಗಸ್ಟ್ - ಸೆಪ್ಟೆಂಬರ್‌ನಲ್ಲಿ ದಕ್ಷಿಣ ವಿಯೆಟ್ನಾಂನಲ್ಲಿ ಪ್ರಥಮ ಪ್ರಯೋಗಗಳನ್ನು ನಡೆಸಲಾಯಿತು. ೧೯೬೨ರ ಸೆಪ್ಟೆಂಬರ್-ನವೆಂಬರ್‌ನಲ್ಲಿ ಏಜೆಂಟ್ ಪರ್ಪಲ್ ಮತ್ತು ಏಜೆಂಟ್ ಬ್ಲೂಗಳ ಬೃಹತ್ ಮಟ್ಟದ ಹಡಗು ಸಾಗಣೆ ಅಲ್ಲಿಗೆ ಬಂದರೆ, ೧೯೬೫ ಮತ್ತು ೧೯೭೧ರ ನಡುವೆ ಏಜೆಂಟ್ ಆರೆಂಜ್‌ಅನ್ನು ಬಳಸಲಾಯಿತು. ತಮ್ಮದೇ ಪ್ರಜೆಗಳ ಸ್ವಂತ ಭೂಮಿಯ ಜೈವಿಕ ಸಂಪನ್ಮೂಲಗಳ ಸುರಕ್ಷತಾ ಗುಣಮಟ್ಟವನ್ನು ಕಡೆಗಣಿಸುತ್ತಾ, ದಕ್ಷಿಣ ವಿಯೆಟ್ನಾಂನ ನಾಯಕರು ಒಂದೋ ಉದಾಸೀನರಾದರು ಅಥವಾ ಅಮೆರಿಕನ್ನರೊಂದಿಗೆ ಸ್ವಯಿಚ್ಛೆಯಿಂದ ಭಾಗೀದಾರರಾದರು. ಬಂದರುಗಳಲ್ಲಿ 'ಕಡಾಯಿ'ಗಳು ಬಿರುಕು ಬೀಳುವ ಅಪಾಯ ಮತ್ತು ಹೊರಚೆಲ್ಲುವುದರಿಂದಾಗುವ ದುಷ್ಪರಿಣಾಮಗಳ ಜೊತೆಗೆ ಈ ರಾಸಾಯನಿಕಗಳನ್ನು ಕೈಯಿಂದ ಕೆಳಗಿಳಿಸಲಾಯಿತು. ನಾಗರಿಕ ವಿಮಾನಗಳನ್ನು ಹಾರಾಡಿಸುವ, ನಾಗರಿಕ ದಿರಿಸುಗಳನ್ನು ಧರಿಸಿದ ಪೈಲಟ್‌ಗಳಿಗೆ ಈ ಅಪಾಯಕಾರಿ ರಾಸಾಯನಿಕಗಳನ್ನು ಗಾಳಿಯಲ್ಲಿ ಸಿಂಪಡಿಸುವ ಕಾರ್ಯವನ್ನು

೧೯೫೦ರ ದಶಕದಲ್ಲಿ ಮಲಯದಲ್ಲಿ ಕಮ್ಯುನಿಸ್ಟ್ ಗೆರಿಲ್ಲಾಗಳ ವಿರುದ್ಧದ ಆಂದೋಲನದಲ್ಲಿ ಆಗ್ನೇಯಾ ಏಷ್ಯಾದಲ್ಲಿ ಮರದ ಎಲೆಗಳುದುರುವಂತೆ ಮಾಡುವ ರಾಸಾಯನಿಕಗಳನ್ನು ಬಳಸಿಕೊಂಡು ಬ್ರಿಟಿಷರು ಮಾಡಿದ ಪ್ರಯೋಗದಿಂದಲೇ ಏಜೆಂಟ್ ಆರೆಂಜ್ ಕಥೆಯನ್ನು ಶುರುಮಾಡಬೇಕಿದೆ. ಈ ಪ್ರದೇಶದಲ್ಲಿ ಕಮ್ಯುನಿಸಮ್ ಅನ್ನು ನಿಯಂತ್ರಿಸಲು ಅಮೆರಿಕಾದ ಹೊಸ ಮಿಲಿಟರಿ ತಂತ್ರಗಾರಿಕೆಯನ್ನು ಇದು ಶುರು ಮಾಡಿತು. ಎಲೆಯುದುರುವಂತೆ ಮಾಡುವ ರಾಸಾಯನಿಕಗಳನ್ನು ಬಳಸುವುದು ಬಹುಮುಖ್ಯವಾದ ಮಿಲಿಟರಿ ಉದ್ದೇಶವೆಂದು ಗುರುತಿಸಲಾಗಿದೆ. ಮೊದಲನೆಯದಾಗಿ, ಮರದ ಎಲೆಗಳು ಉದುರಿಹೋಗುವಂತೆ ಮಾಡುವುದರಿಂದ ಗೆರಿಲ್ಲಾಗಳು ಅಡಗಿಕೊಳ್ಳಲು ಸಾಧ್ಯವಿರುವುದಿಲ್ಲ ಮತ್ತು ಆಹಾರಕ್ಕಾಗಿ ಹಣ್ಣುಗಳು ಸಿಗುವುದಿಲ್ಲ. ಅತಿ ಮುಖ್ಯವಾಗಿ, ರಾಜಕೀಯ ಸಂಪರ್ಕ ಮತ್ತು ರಕ್ಷಣೆಗಾಗಿ ಗೆರಿಲ್ಲಾಗಳು ಅವಲಂಬಿಸಿರುವ ಗ್ರಾಮೀಣ ಆರ್ಥಿಕತೆಯನ್ನು ಅದು ನಾಶಪಡಿಸುತ್ತದೆ.



ವಹಿಸುತ್ತಿದುದಲ್ಲದೆ ವೈರಿಗಳ ಮೇಲೆ ಅವರು ಸಿಂಪಡಿಸುವ ಸಸ್ಯನಾಶಕಗಳಿಗೆ, ಅಗತ್ಯ ಸುರಕ್ಷತಾ ಸಾಧನಗಳಿಲ್ಲದಿದ್ದರಿಂದ ತಾವೇ ಆ ರಾಸಾಯನಿಕಗಳಿಗೆ ಬಲಿಯಾಗುತ್ತಿದ್ದರು.

ಈ ಪ್ರಯೋಗಗಳ ಯಶಸ್ಸು ನವೀನ ರೂಪದ ಮಿಲಿಟರಿ ದಾಳಿಗೆ ಅವಕಾಶ ಒದಗಿಸಿತು (ಪ್ರತ್ಯಕ್ಷದರ್ಶಿಗಳು ತಿಳಿಸುವಂತೆ ಒಂದೇ ದಿನದಲ್ಲಿ ಎಲೆಗಳು ನಾಶವಾಗುತ್ತಿದ್ದವು). ಡೈ ಆಕ್ಸಿನ್ ಒಂದು ಬಗೆಯ ಕ್ಯಾನ್ಸರ್ ಉಂಟುಮಾಡುವ ಮೂಲವಸ್ತುವೆಂದು ಗೊತ್ತಿದ್ದರೂ ಸಹ, ಡೈ ಆಕ್ಸಿನ್‌ಅನ್ನು ಸಾಗಿಸುವ ಕಾರ್ಯ (ಇದಕ್ಕೆ ಆಪರೇಷನ್ ರ‍್ಯಾಂಚ್ ಹ್ಯಾಂಡ್ ಎಂಬ ನಿಗೂಢ ಹೆಸರಿಡಲಾಗಿತ್ತು)ದಲ್ಲಿದ್ದ ಅಮೆರಿಕಾದ ಸೈನಿಕರಿಗೆ ಕೆನಡಿ, ಜಾನ್ಸನ್, ನಿಕ್ಸನ್ ಯುಗದ ಅಮೆರಿಕಾದ ಮಿಲಿಟರಿ ಆಡಳಿತಗಳು ಎಚ್ಚರಿಕೆ ನೀಡಲಿಲ್ಲ. ವೈರಿಗಳ ಮೇಲೆ ಸಿಂಪಡಿಸಿದ ರಾಸಾಯನಿಕದ ಪ್ರಮಾಣಕ್ಕಿಂತ ಹೆಚ್ಚಿನ ಸೋಂಕು ಅಮೆರಿಕಾದ ಕೆಲವು ಸೈನಿಕರ ಮೇಲಾಗಿತ್ತೆಂದು ಸ್ವತಃ ಯೋಧೆಯಾಗಿದ್ದು ವಿಯೆಟ್ನಾಂ ಯುದ್ಧದಲ್ಲಿ ನರ್ಸ್ ಆಗಿ ಸೇವೆ ಸಲ್ಲಿಸಿದ ಡಾ|| ಲಿಂಡಾ ಸ್ವಾರ್ಜ್ ತಮ್ಮ ಇತ್ತೀಚಿನ ಸಂಶೋಧನೆಗಳಿಂದ ಕಂಡುಕೊಂಡಿದ್ದಾರೆ. ರಾಸಾಯನಿಕಗಳ ಸಮೀಪದಲ್ಲೇ ಸೈನಿಕರಿದ್ದ ಕಾರಣ ಇದು ನಡೆದಿದೆ. ಇದು ಸೈನಿಕರ ಉದಾಸೀನತೆಯಿಂದೇನೂ ಆಗಲಿಲ್ಲ. ಈ ದುರಂತಕ್ಕೆ ಮಿಲಿಟರಿ ನಾಯಕರ ಕ್ರಿಮಿನಲ್ ರಹಸ್ಯತೆಯೇ ಮೂಲ ಕಾರಣ. ಡೈ ಆಕ್ಸಿನ್‌ಗಳನ್ನು ತುಂಬಿಡುತ್ತಿದ್ದ ಸಣ್ಣ ತಗಡಿನ ಖಾಲಿ ಡಬ್ಬಗಳನ್ನು ಇಬ್ಭಾಗ ಮಾಡಿ ಶಿಬಿರಗಳಲ್ಲಿ ಒಲೆಗಳಾಗಿ ಉಪಯೋಗಿಸುತ್ತಿದ್ದನ್ನು ಅನೇಕ ಹಿರಿಯ ಯೋಧರು ಈಗಲೂ ನೆನಪಿಸಿಕೊಳ್ಳುತ್ತಾರೆ. ಡೈ ಆಕ್ಸಿನ್ ವಿಷದ ಅಪಾಯಕ್ಕೆ ವಿಯೆಟ್ನಾಂ ಯುದ್ಧದಲ್ಲಿನ ಅಮೆರಿಕಾದ ಪ್ರತಿಯೊಬ್ಬ ಮಾಜಿ ಯೋಧನು ಸಿಲುಕಿದ್ದಾನೆಂದು ಡಾ|| ಸ್ವಾರ್ಜ್ ಅಂದಾಜುಮಾಡಿದ್ದಾರೆ.


ಏಜೆಂಟ್ ಆರೆಂಜ್ ಪರಿಣಾಮ

ಅವರ ಸಂಶೋಧನೆಗಳನ್ನು ಬಹಿರಂಗಗೊಳಿಸಿದ ದಿನದಿಂದ ಅವುಗಳಲ್ಲಿ ವಿವರಿಸಿರುವ ಗುರುತುಗಳು ತಮ್ಮ ಸಂಶೋಧನೆಗಳಿಗೆ ಹೊಂದುತ್ತವೆ ಎಂದು ಅಭಿಪ್ರಾಯಪಟ್ಟಿದ್ದ ಮಾಜಿ ಯೋಧರ ಗುಂಪುಗಳಿಂದ ಅವರಿಗೆ ಫೋನು ಕರೆಗಳು ಬರುತ್ತಿದ್ದವು ಎಂಬುದಾಗಿ ಡಾ|| ಸ್ವಾರ್ಜ್ ಹೇಳುತ್ತಾರೆ. ಡೈ ಆಕ್ಸಿನ್ ವಿಷಯುಕ್ತತೆಯಿಂದ ೨೮ ಅಪಾಯಕಾರಿ ರೋಗಗಳು ಬರುತ್ತವೆ. ಕೊಬ್ಬಿನಲ್ಲಿ ಸುಲಭವಾಗಿ ಕರಗಬಹುದಾದ ಅತಿ ಸ್ಥಾಯಿಯಾದ ಕ್ಯಾನ್ಸರ್‌ಕಾರಕ ಡೈ ಆಕ್ಸಿನ್, ನಂತರದ ಪೀಳಿಗೆಗಳಿಗೆ ಪ್ಲಾಸೆಂಟಾ ಮೂಲಕ ಗರ್ಭಾವಸ್ಥೆಗೆ ಸಾಗಿಸಬಲ್ಲದು. ಇದು ಮೀನು, ಮಾಂಸ ಮತ್ತು ಡೈರಿ ಉತ್ಪನ್ನಗಳ ಮೂಲಕ ದೇಹವನ್ನು ಪ್ರವೇಶಿಸಬಲ್ಲದು. ೩೦ ವರ್ಷಗಳ ನಂತರವೂ ಈ ಮೂಲಕ ವಿಯೆಟ್ನಾಂ ಪ್ರಜೆಗಳು ನಿರಂತರವಾಗಿ ಡೈ ಆಕ್ಸಿನ್ ವಿಷಕ್ಕೊಳಗಾಗುತ್ತಿದ್ದಾರೆ. ಅದರ ಲಕ್ಷಣಗಳು ಕಾಣಿಸಿಕೊಳ್ಳಲು ೨೫-೩೦ ವರ್ಷಗಳಿಗೂ ಹೆಚ್ಚು ಕಾಲ ಬೇಕಾಗುತ್ತದೆ. ಡೈ ಆಕ್ಸಿನ್ ಪರೀಕ್ಷೆಯೊಂದಕ್ಕೆ ರೂ. ೪೫,೦೦೦ ವೆಚ್ಚವಾಗುತ್ತದೆ. ನಂತರದ ಚಿಕಿತ್ಸೆಗೆ ತಗಲುವ ವೆಚ್ಚ ಇನ್ನೂ ಹೆಚ್ಚಿನದು. ಡೈ ಆಕ್ಸಿನ್‌ಗೆ ಸಂಬಂಧಿಸಿದ ಲಕ್ಷಣಗಳ ಬಗ್ಗೆ ೮೦ರ ದಶಕದಲ್ಲಿ ವಿಯೆಟ್ನಾಂ ಯುದ್ಧದಲ್ಲಿ ತೊಡಗಿದ ೩ ಲಕ್ಷ ಅಮೆರಿಕಾದ ಮಾಜಿ ಯೋಧರು ಮಾಡಿದ ವರದಿಯು ಒಂದು ದೊಡ್ಡ ಬಿಕ್ಕಟ್ಟಾಗಿ ಪರಿಣಮಿಸಿತು ಮತ್ತು ಆ ಯೋಧರು ಸಸ್ಯನಾಶಕ ಉತ್ಪಾದಕರನ್ನು ನ್ಯಾಯಾಲಯಕ್ಕೆಳೆದಾಗ ರೂ. ೮,೧೦೦ ಮಿಲಿಯನ್ ಪರಿಹಾರ ನೀಡಲು ಮುಂದೆಬಂದಿದ್ದರು. ಆದರೆ, ಇದರಲ್ಲಿ ವಿಯೆಟ್ನಾಂ ಜನತೆಗೆ ಏನೂ ಸಿಕ್ಕಲಿಲ್ಲ. ಈ ಬಿಕ್ಕಟ್ಟು ಅಂದು ಅಮೆರಿಕಾದಲ್ಲಿ ಆ ಪ್ರಮಾಣಕ್ಕೇರಿದ್ದರೆ, ಯುದ್ಧದಿಂದ ವಿನಾಶಗೊಂಡ ವಿಯೆಟ್ನಾಂನಲ್ಲಿ ಅದರ ತೀವ್ರತೆಯನ್ನು ಊಹಿಸಬಹುದಾಗಿದೆ. ಡೈ ಆಕ್ಸಿನ್ ವಿಷಯುಕ್ತತೆಯಿಂದಾಗಿ ವಿಯೆಟ್ನಾಂ ೫ ಲಕ್ಷ ಜನರನ್ನು ಕಳೆದುಕೊಂಡಿದ್ದು, ಡೈ ಆಕ್ಸಿನ್ ಜೊತೆ ಗುರುತಿಸಬಹುದಾದ ದೈಹಿಕ ಮತ್ತು ಮಾನಸಿಕ ವಿರೂಪತೆಗಳ ಹಲವು ಲಕ್ಷಣಗಳನ್ನು ಹೊಂದಿರುವವರು ಈಗಾಗಲೇ ೬.೫ ಲಕ್ಷದಷ್ಟು ಜನರು ಇರುವ ಭಯಾನಕ ವಾಸ್ತವವನ್ನು ಕಲ್ಪಿಸಿಕೊಳ್ಳಬಹುದು. ಒಂದು ಅಂದಾಜಿನಂತೆ ಒಟ್ಟಾರೆ ಜನಸಂಖ್ಯೆ ೪೦ ಮಿಲಿಯನ್‌ನಲ್ಲಿ ಡೈ ಆಕ್ಸಿನ್ ಸಿಂಪಡಿಕೆಗೊಳಗಾದ ಜನರು ೪.೨ ಮಿಲಿಯನ್. ವಿಷಯುಕ್ತತೆಯಿಂದ ನೊಂದವರ ಅಂಕಿಅಂಶಗಳನ್ನು ಖಚಿತಪಡಿಸಿಕೊಳ್ಳುವುದು ಅಸಾಧ್ಯದ ಮಾತು. ವಿಯೆಟ್ನಾಮಿನ ಆರೋಗ್ಯ ಇಲಾಖೆಯು ಭವಿಷ್ಯದ ಪೀಳಿಗೆಗೆ ಈ ವಿನಾಶಕಾರಿ ರೋಗರುಜಿನಗಳು ಹರಡುವ ಅಪಾಯವನ್ನು ತಡೆಗಟ್ಟುವ ಕಾರ್ಯದೊಂದಿಗೆ ಹೆಣಗಾಡುತ್ತಿದೆ. ಡೈ ಆಕ್ಸಿನ್ ವಿಷದ ಸೋಂಕಿನಿಂದ ರೋಗಪೀಡಿತರಾಗಿರುವ ಅಮೆರಿಕಾದ ಯೋಧರು ಎಷ್ಟು ಜನರಿದ್ದಾರೆ, ಜಗತ್ತಿನಾದ್ಯಂತ ಆ ರಾಷ್ಟ್ರವು ಸ್ಥಾಪಿಸಿರುವ ಯಾವ ಯಾವ ಯುದ್ಧನೆಲೆಗಳಲ್ಲಿ ಹಂಚಿಹೋಗಿದ್ದಾರೆ ಎಂಬ ವಿವರಗಳ ಬಗ್ಗೆ ಡಾ|| ಸ್ವಾರ್ಜ್ ಸಲ್ಲಿಸಿರುವ ವರದಿಯನ್ನು ವಿಯೆಟ್ನಾಂ ಆರೋಗ್ಯ ಇಲಾಖೆಯು ಒಪ್ಪಿಕೊಂಡಿದೆ.

ವಿಯೆಟ್ನಾಂ ಯುದ್ಧದ ಅಪರಾಧದ ಬೇರುಗಳು ಅಮೆರಿಕಾದ ಮಿಲಿಟರಿಯಲ್ಲಿದ್ದು, ಅದು ಅಲ್ಲಿನ ರಾಜಕೀಯ ನಾಯಕರಿಗೆ ಮನುಷ್ಯ ಜೀವದ ಬಗ್ಗೆ ಇರುವ ಉದಾಸೀನತೆಯನ್ನು ತೋರಿಸುತ್ತದೆ. ೧೯೬೫ರ ಹೊತ್ತಿಗೆ ಏಜೆಂಟ್ ಆರೆಂಜ್ ಪರಿಣಾಮಗಳು ಗೊತ್ತಾಗುವ ವೇಳೆಗೆ ೫,೦೦೦ ಅಮೆರಿಕಾದ ವಿಜ್ಞಾನಿಗಳು (ಅದರಲ್ಲಿ ೧೭ ಮಂದಿ ನೊಬೆಲ್ ಪ್ರಶಸ್ತಿ ಗಳಿಸಿದ್ದವರು), ೧೨೯ ಮಂದಿ ವಿಜ್ಞಾನ ಅಕಾಡೆಮಿಯ ಸದಸ್ಯರು. ಯುದ್ಧಗಳಲ್ಲಿ ರಾಸಾಯನಿಕ ವಸ್ತುಗಳ ಬಳಕೆಯನ್ನು ಹಿಂತೆಗೆಯಬೇಕೆಂದು ಆಗ್ರಹಿಸಿದರು. ಸರ್ಕಾರವು ಇದಕ್ಕೆ ಯಾವುದೇ ಗಮನ ನೀಡಲಿಲ್ಲ, ಏಕೆಂದರೆ, ಅಮೆರಿಕಾದ ಉದ್ಯಮಗಳು ವಿಯೆಟ್ನಾಂನ ಸರ್ವನಾಶಕ್ಕೆ ತಯಾರಿ ನಡೆಸಿದ್ದವು. ಅವರು 'ಮಿಲಿಟರಿ ಆದೇಶಗಳೊಂದಿಗೆ ಉತ್ತೇಜಿಸಬಹುದಾದ' ಶಾಶ್ವತ ಯುದ್ಧದ ಆರ್ಥಿಕತೆಯನ್ನು ಜಾರಿಗೆ ತರುವ ಹುನ್ನಾರ ನಡೆಸಿದ್ದರು. ಅದು ರಾಸಾಯನಿಕ ಯುದ್ಧಕಲೆಯ ಯೋಜನೆಯ ಭಾಗವಾಗಿತ್ತು. ೧೯೬೩ರ ತನ್ನ ನೊಬೆಲ್ ಉಪನ್ಯಾಸದಲ್ಲಿ, ಅಮೆರಿಕಾದ ರಾಸಾಯನಿಕ ಮತ್ತು ಜೈವಿಕ ಶಸ್ತ್ರಾಸ್ತ್ರಗಳು ದಶಕವೊಂದರಲ್ಲಿ ೧೬ ಪಟ್ಟು ಹೆಚ್ಚಳವಾಗುವುದೆಂದು ಪ್ರಸಿದ್ಧ ವಿಜ್ಞಾನಿ ಲೈನಸ್ ಪಾಲಿಂಗ್ ಎಚ್ಚರಿಸಿದ್ದರು. ೯೩ ಕಸ ವಿಸರ್ಜನಾ ಪ್ರದೇಶಗಳಲ್ಲಿ ಅಪಾಯಕಾರಿ ರಾಸಾಯನಿಕಗಳನ್ನು ವಿಸರ್ಜಿಸಿರುವುದಕ್ಕಾಗಿ ಸಂಭವನೀಯ ಜವಾಬ್ದಾರಿಯೆಂದು ಅಮೆರಿಕಾದ ಪರಿಸರ ಸಂರಕ್ಷಣಾ ಏಜೆನ್ಸಿಯು ಗುರುತಿಸಿರುವ ಮಾನ್ಸ್ಯಾಂಟೊ ಬಹುರಾಷ್ಟ್ರೀಯ ಕಂಪನಿಯು ರಾಸಾಯನಿಕ ಬಾಂಬು ದಾಳಿಯ ಅತಿ ದೊಡ್ಡ ಫಲಾನುಭವಿ. ಮಹಾರಾಷ್ಟ್ರ, ರಾಜಸ್ಥಾನ, ಗುಜರಾತ್ ಮತ್ತು ಹರಿಯಾಣಗಳಲ್ಲಿ ರೈತರಲ್ಲಿ ಬೌಂಟ್ ಕಾಟನ್ ಪ್ರಯೋಗಗಳು ಕಂಪನ ಸೃಷ್ಟಿಸಿದ್ದರೆ ಈ ಕಂಪನಿಯ ಪ್ರಯೋಗಾಲಯವೊಂದು ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಸ್ಥಾಪಿತವಾಗಿ ಇರುವುದು ಭಾರತೀಯ ಜನತೆಗೆ ಎಚ್ಚರಿಕೆಯ ಗಂಟೆಯಾಗಿದೆ. ಕಂಪನಿಯು ಮುಗ್ಧತೆಯ ಸೋಗು ಹಾಕಿಕೊಂಡಿದ್ದರೂ ಯುದ್ಧಭೂಮಿಯಲ್ಲಿ ಡೈ ಆಕ್ಸಿನ್ ಬಳಕೆಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಕಂಪನಿಯ ಮತ್ತು ಅಮೆರಿಕಾದ ಸೇನೆಗಳ ನಡುವೆ ನಡೆದ ಚರ್ಚೆಗಳನ್ನು ಇದುವರೆಗೂ ರಹಸ್ಯ ದಾಖಲೆಗಳೆಂದು ವರ್ಗೀಕರಿಸಲಾಗಿದೆ.

ವಿಯೆಟ್ನಾಂ ಮೇಲಿನ ಈ ಪೈಶಾಚಿಕ ಆಕ್ರಮಣವನ್ನು ಅಲ್ಲಿನ ಜನತೆ ದೂಷಿಸುತ್ತಲೇ ಬಂದಿದ್ದಾರೆ. ಅವರ ಪರಿವೀಕ್ಷಣೆಗಳನ್ನು ಪಾಶ್ಚಿಮಾತ್ಯ ವೈಜ್ಞಾನಿಕ ಪತ್ರಿಕೆಗಳು ಪ್ರಕಾಶಿಸುವುದಿಲ್ಲ; ಪಾಶ್ಚಿಮಾತ್ಯ ಪತ್ರಿಕಾವಲಯವು ಅದಕ್ಕೆ ಪ್ರಚಾರ ನೀಡುವುದಿಲ್ಲ. ವಿಯೆಟ್ನಾಂ ನದಿಗಳಲ್ಲಿ ಈಜುವಾಗ ಅಥವಾ ಮೀನು ತಿನ್ನುವಾಗ ಡೈ ಆಕ್ಸಿನ್ ವಿಷಯುಕ್ತತೆಯಿಂದಾಗಿ ತನ್ನ ಮಗನನ್ನು ಒಬ್ಬ ಸೈನಿಕ ಕಳೆದುಕೊಂಡ. ಅಮೆರಿಕಾದ ನೌಕಾಪಡೆಯ ಮಾಜಿ ಕಮ್ಯಾಂಡರ್ ಅಡ್ಮಿರಲ್ ಎಲ್ಮೊ ಜುಮ್ವಾಲ್ಟ್‌ರ ಮಧ್ಯಪ್ರವೇಶದಿಂದಾಗಿ ದಾಖಲಾಗದಿದ್ದ ಹಲವು ವಿಷಯಗಳು ಹೊರಬಂದವು. ಇದು ಹಲವು ವಿವಾದಗಳಿಗೆ ಕಾರಣವಾಗಿ ಹಲವು ಅಧ್ಯಯನಗಳು ಹೊರಬಂದಿದ್ದು ಸಿಂಪಡಿಸಿರುವ ಡೈ ಆಕ್ಸಿನ್‌ನ ಒಟ್ಟಾರೆ ಪ್ರಮಾಣದ ಹೊಸ ಅಂದಾಜಿನಂತೆ ಈ ಮುಂಚೆ ತಿಳಿದಿದ್ದಕ್ಕಿಂತ ಇನ್ನೂ ಹಲವು ಪಟ್ಟು ಹೆಚ್ಚಿನದ್ದಾಗಿದೆ. (ಸ್ಟೆಲ್‌ಮನ್ ಮತ್ತು ಇತರರು, ನೇಚರ್, ೧೭ನೇ ಏಪ್ರಿಲ್ ೨೦೦೩). ಪ್ರತ್ಯೇಕ ಪೈಲಟ್‌ಗಳ ದಿನಚರಿ ಮತ್ತು ಹೊಡೆತಗಳ ವಾಸ್ತವ ಗುರಿ ನಿಗದಿಗಳ ಅಧ್ಯಯನದಿಂದ ವಿಮಾನಗಳ ಹಾದಿ, ಎಲೆನಾಶಕಗಳನ್ನು ಸುರಿದುದರ ಪ್ರಮಾಣ, ಸೈನ್ಯದ ನೆಲೆಗಳು, ಚಲನೆಗಳು, ಭೂ-ಚಿತ್ರಣ, ಮಣ್ಣಿನ ವಿವಿಧತೆ ಮತ್ತು ವಿಯೆಟ್ನಾಮಿ ಜನರ ನೆಲೆಗಳು – ಇವೆಲ್ಲವನ್ನು ಈಗ ಕ್ರೋಢೀಕರಿಸುವ ಸಾಧ್ಯತೆಯಿದೆ. ೨೦,೦೦೦ ವಿಯೆಟ್ನಾಮಿ ಗ್ರಾಮಗಳ ಜನಸಂಖ್ಯೆ ಅಂಕಿ ಅಂಶವನ್ನು ಬಳಸಿಕೊಂಡು, ೩,೦೦೦ ಜನರಿಗೆ ನೇರವಾಗಿ ಪ್ರವಹಿಸಿದ್ದರೆ ೨೦-೪೦ ಲಕ್ಷ ಜನರಿಗೆ ದುಷ್ಪರಿಣಾಮವುಂಟುಮಾಡಿದೆಯೆಂದು ಕಂಡುಕೊಳ್ಳಲಾಗಿದೆ. ಮಿಲಿಟರಿ ನೆಲೆಗಳ ದಾಖಲೆಗಳನ್ನು ಉಪಯೋಗಿಸಿಕೊಂಡು, ಸಿಂಪಡಿಸುವ ಸಮಯದಲ್ಲಿ ಹಾಜರಿದ್ದ ಪ್ರತಿಯೊಬ್ಬ ಸೈನಿಕನನ್ನು ಗುರುತಿಸಲು ಮತ್ತು ಪ್ರತಿಯೊಬ್ಬ ವ್ಯಕ್ತಿಗಿರುವ ಅಪಾಯದ ಮೌಲ್ಯಮಾಪನವನ್ನು ಮಾಡಲು ಅವರು ಈಗ ಪ್ರಯತ್ನಿಸುತ್ತಿದ್ದಾರೆ. ಈ ಕಾರ್ಯಾಚರಣೆಗಳಿಗಾಗಿ ಬೇಡಿಕೆಯಿಟ್ಟಿದ್ದ ಡೈ ಆಕ್ಸಿನ್ ಮೂಲಗಳ ಒಟ್ಟಾರೆ ಪ್ರಮಾಣವನ್ನು ಅಂದಾಜು ಮಾಡಲು ಮತ್ತು ಅವುಗಳನ್ನು ವಿಸರ್ಜಿಸುವ ವಿಧಾನವನ್ನು ಕಂಡುಹಿಡಿಯಲು ಸಹ ಅವರು ಪ್ರಯತ್ನಿಸುತ್ತಿದ್ದಾರೆ. ಇದಕ್ಕಿರುವ ದೊಡ್ಡ ಅಡಚಣೆಯೆಂದರೆ ಅಪೂರ್ಣವಾಗಿ ಸಂಗ್ರಹಿಸಿರುವ ಅಂಕಿಅಂಶಗಳು. ಆದಾಗ್ಯೂ, ವಿಯೆಟ್ನಾಂ, ಲಾವೋಸ್

ಮತ್ತು ಕಾಂಬೋಡಿಯಾ (ಮುಖ್ಯವಾಗಿ ಹೊ. ಚಿ. ಮಿನ್‌ರು ಓಡಾಡಿದ ಪ್ರದೇಶಗಳಲ್ಲಿ)ಗಳ ಮೇಲೆ ಸಿಂಪಡಿಸಿದ ಡೈ ಆಕ್ಸಿನ್‌ನ ಒಟ್ಟು ಪ್ರಮಾಣದ ಅಂದಾಜನ್ನು ವಿಮಾನ ಕಾರ್ಯಾಚರಣೆಗಳ ವಿವರಗಳು ನೀಡುತ್ತವೆ.

ವಿಯೆಟ್ನಾಂನಲ್ಲಿ ಸಾಂಕ್ರಾಮಿಕ ರೋಗಗಳ ಅಧ್ಯಯನಕ್ಕೆ ಇಂತಹದೊಂದು ಸೇರ್ಪಡೆ ಮಾಡಬೇಕೆಂದೂ ಇಂತಹ ಅಧ್ಯಯನವು ಪ್ರಥಮವಾದದ್ದೆಂದೂ ಅಮೆರಿಕಾದ ವೈದ್ಯಕೀಯ ಸಂಸ್ಥೆ ಪರಿಗಣಿಸಿ ಈ ಅಧ್ಯಯನಗಳನ್ನು ಪ್ರೋತ್ಸಾಹಿಸಬೇಕೆಂದು ರಾಷ್ಟ್ರೀಯ ವಿಜ್ಞಾನ ಅಕಾಡೆಮಿಯು ಅಲ್ಲಿನ ಸರ್ಕಾರವನ್ನು ಕೋರಿಕೊಂಡಿದೆ. ವಿಯೆಟ್ನಾಂ ಯುದ್ಧದ ಭೂತಕಾಲವನ್ನು ಅಗೆದು ತೋರಿಸುವ ಅಮೆರಿಕಾದ ಶಿಕ್ಷಣ ತಜ್ಞರು ಅಘೋಷಿತ 'ಶಸ್ತ್ರಾಸ್ತ್ರ ಇನ್ಸ್‌ಪೆಕ್ಟರ್'ಗಳಾಗಿ ರೂಪುಗೊಳ್ಳುವಂತೆ ಮಾಡುವ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲು ಬುಷ್-ಚೇನಿ-ರಮ್ಸ್‌ಫೆಲ್ಡ್-ರೈಸ್‌ಗಳು ಅನುದಾನ ನೀಡುತ್ತಾರೆಯೇ ಇಲ್ಲವೇ ಎಂಬುದು ಇನ್ನೂ ಸ್ಪಷ್ಟವಾಗಿಲ್ಲ.

ಫ್ಲೋರಿಡಾದ ಎಲ್ಗಿನ್ ವಾಯುಸೇನಾನೆಲೆಯ ಪ್ರಯೋಗ ಸ್ಥಳಗಳಲ್ಲಿ ಸಂಗ್ರಹಿಸಿದ ಮಾದರಿ (ಸ್ಯಾಂಪಲ್)ಗಳಿಂದ ಕಂಡುಬಂದಂತೆ, ಏಜೆಂಟ್ ಆರೆಂಜ್ ಕಡೆಗೆ ಹೆಚ್ಚಿನ ಗಮನ ಹರಿಸಿದ್ದರೂ, ಏಜೆಂಟ್ ಆರೆಂಜ್ ಹಂತಕ್ಕಿಂತ ಮುಂಚೆಯೇ ಸಿಂಪಡಿಸಿದ್ದ ೪,೬೪,೧೬೪ ಲೀಟರ್ ಏಜೆಂಟ್ ಪಿಂಕ್ ಮತ್ತು ೩೧,೦೨೬ ಲೀಟರ್ ಏಜೆಂಟ್ ಗ್ರೀನ್‌ಗಳ ಸಿಂಪಡಿಕೆಯು ಅತಿ ಹೆಚ್ಚಿನ ಪ್ರಮಾಣದ ಡೈ ಆಕ್ಸಿನ್ ಹೊಂದಿದ್ದರಿಂದ ಇವು ಅತಿ ಹೆಚ್ಚು ಅಪಾಯಕಾರಿಯಾದವುಗಳಾಗಿವೆ. 'ಪ್ರಮುಖವಾಗಿ ಆರ್ಥಿಕ ದೃಷ್ಟಿಯಿಂದ ಕೊಲ್ಲುವ' ಉದ್ದೇಶವಿರುವ, ಬೆನ್ನಿಗೆ ಚೂರಿ ಹಾಕುವ ಕಲೆಯನ್ನು ಈ ಯೋಜನೆಯ ರೂಪುರೇಷೆ ಮತ್ತು ಕಾರ್ಯಾಚರಣೆಗಳು ಪ್ರತಿಬಿಂಬಿಸುತ್ತವೆ. ಏಜೆಂಟ್ ಆರೆಂಜ್‌ನ ಆಯ್ಕೆಯು ಈ ಅಂಶವನ್ನು ಮತ್ತಷ್ಟು ವಿವರಿಸುತ್ತದೆ. ಈ ಮುಂಚೆ ಆಯ್ದುಕೊಂಡ ರಾಸಾಯನಿಕಗಳು ಪರ್ಪಲ್, ಪಿಂಕ್ ಮತ್ತು ಗ್ರೀನ್ ಏಜೆಂಟ್‌ಗಳಾಗಿದ್ದರೂ ನಂತರ ಸುಲಭವಾಗಿ ದೊರೆಯಬಹುದಾದ್ದರಿಂದ ಏಜೆಂಟ್ ಆರೆಂಜ್‌ನ್ನು ಆಯ್ಕೆ ಮಾಡಲಾಯಿತು. ಹಾಗೂ ಸಸ್ಯ ನಾಶಗೊಳಿಸಲು ಏಜೆಂಟ್ ವೈಟ್ ಹೆಚ್ಚು ಸಮಯ ತೆಗೆದುಕೊಂಡರೂ ಏಜೆಂಟ್ ಆರೆಂಜ್‌ನ ಲಭ್ಯತೆಯಿಂದಾಗಿ ಆ ಸ್ಥಳದಲ್ಲಿ ಏಜೆಂಟ್ ವೈಟ್‌ಅನ್ನು ಬಳಸಲಾಯಿತು. ಹೀಗೆ ಸಾವಿನ ದೂತರನ್ನು ಮಾರುಕಟ್ಟೆ ಶಕ್ತಿಗಳು ನಿರ್ಧರಿಸಿದವು.

ವಿಯೆಟ್ನಾಂ, ಕಾಂಬೋಡಿಯಾ ಮತ್ತು ಲಾವೋಸ್ ದಡಗಳ ಮೇಲಿನ ಸಸ್ಯ ವರ್ಗಗಳ ಮೇಲೆ ಸಿಂಪಡಿಸಿರುವ ಡೈ ಆಕ್ಸಿನ್‌ನ ಒಟ್ಟು ಪ್ರಮಾಣಗಳ ಮಾಹಿತಿಯು ಆಘಾತವನ್ನುಂಟುಮಾಡುತ್ತದೆ. ಕಳೆದ ಫೆಬ್ರುವರಿ ೫ರಂದು ಭದ್ರತಾ ಸಮಿತಿಯಲ್ಲಿ ಕಾಲಿನ್ ಪೊವೆಲ್ ಮಾಡಿದ ಭಾಷಣವನ್ನು ಒಂದು ಕ್ಷಣ ನಾವು ನೆನಪಿಸಿಕೊಳ್ಳೋಣ. ಅಂಥ್ರಾಕ್ಸ್ ಉಂಟುಮಾಡುವ ಸಣ್ಣ ಸೀಸೆಯನ್ನು ಕೈಯಲ್ಲಿ ಹಿಡಿದುಕೊಂಡು ಅವನು ಅದರಲ್ಲಿ ಸಣ್ಣ ಪ್ರಮಾಣದಷ್ಟನ್ನು ಸದ್ದಾಂ ಹುಸೇನ್ ಹೊಂದಿದ್ದಾನೆಂದು ಆಗ್ಗೆ ತಿಳಿಸಿದ್ದ. ತಮ್ಮ ರಾಷ್ಟ್ರದ ಮೇಲೆ ಮಾಡಿದ ವಿನಾಶಕಾರ್ಯವನ್ನು ಪ್ರಪಂಚದ ಮುಂದಿಡುವುದಕ್ಕೆ ವಿಯೆಟ್ನಾಮಿಯರು ಬಹುಕಾಲದಿಂದ ಪ್ರಯತ್ನಿಸುತ್ತಿದ್ದಾರೆ. ಅವರ ಅಭಿಪ್ರಾಯದಂತೆ : ೮೦ ಗ್ರಾಮ್ಸ್ ಡೈ ಆಕ್ಸಿನ್ ಹೊಂದಿರುವ ಒಂದು ಸಣ್ಣ ಬೇಬಿ ಟಾಲ್ಕಮ್ ಪೌಡರ್ ಡಬ್ಬ, ನಗರದ ನೀರು ಸರಬರಾಜಿನೊಳಗೆ ಸುರಿದಾಗ ನ್ಯೂಯಾರ್ಕ್ (೭೦ ಲಕ್ಷ ಜನ)ನ ಎಲ್ಲ ನಾಗರಿಕರನ್ನು ನಾಶ ಮಾಡುತ್ತದೆ. ರಾಷ್ಟ್ರೀಯ ವಿಜ್ಞಾನ ಅಕಾಡೆಮಿಯ ೧೯೭೪ರ ಅಂದಾಜಿನ ಪ್ರಕಾರ ೧೦೧-೧೬೩ ಕೆ.ಜಿ. ಡೈ ಆಕ್ಸಿನ್‌ನ್ನು ವಿಯೆಟ್ನಾಂ ಮೇಲೆ ಸಿಂಪಡಿಸಲಾಗಿದೆ. ಇತ್ತೀಚಿನ ಅಧ್ಯಯನಗಳು ಈ ಸಂಖ್ಯೆಯನ್ನು ೨,೫೩,೬೬೩ ಲಕ್ಷ ಜನರನ್ನು ಸಾವಿಗೀಡುಮಾಡುವ ಸಾಮರ್ಥ್ಯವಿರುವ ಒಟ್ಟು ೩೬೬ ಕೆ.ಜಿ. ಎಂದು ಪುನರ್ವಿಮರ್ಶಿಸಿವೆ. ಹೀಗಾಗಿ ಅವರ ಅಂದಾಜಿನಂತೆ ಹಿಂದಿನ ಅಂಕಿ ಅಂಶಗಳನ್ನು ೨.೨-೩.೬ ಪಟ್ಟು ಹೆಚ್ಚಿಸುತ್ತದೆ! ವಿಯಟ್ನಾಂ ರಾಷ್ಟ್ರೀಯ ವಿಶ್ವವಿದ್ಯಾನಿಲಯದ ಪ್ರಕಾರ ಒಟ್ಟಾರೆ ಡೈ ಆಕ್ಸಿನ್ ವಾಸ್ತವವಾಗಿ ೬೦೦ ಕೆ.ಜಿ.

ಹೀಗೆ, ಕೊಲ್ಲಲು ಸಾಮರ್ಥ್ಯವಿರುವ ಡೈ ಆಕ್ಸಿನ್ ಅನ್ನು ಆಯ್ಕೆ ಮಾಡಲಾಯಿತು. ಇದರ ಪರಿಣಾಮಗಳು ಎಲ್ಲರಿಗೂ ಕಾಣುತ್ತಿದ್ದು ವಿಶೇಷವಾಗಿ ಮೂರನೇ ಪೀಳಿಗೆಯ ಮಾಜಿ ಯೋಧರ ಅಧ್ಯಯನಗಳ ವಿವಿಧ ಮಾದರಿಗಳಲ್ಲಿ ಲ್ಯುಕೇಮಿಯಾ ಪ್ರಕರಣಗಳು ಶೇ. ೭೦-ಶೇ. ೩೦೦ರಷ್ಟು ಹೆಚ್ಚಿವೆ. ಈ ದುರಂತವನ್ನು ಸರಿಪಡಿಸುವುದಾದರೂ ಹೇಗೆ? ಇದೊಂದು ಬೃಹತ್ ಜವಾಬ್ದಾರಿ. ವಿಯೆಟ್ನಾಮ್‌ನಲ್ಲಿ ಮಣ್ಣಿನ ಮೇಲ್ಪದರವನ್ನು ತೆಗೆಯಬೇಕಾಗಿದ್ದು, ಅದರ ಮೊತ್ತ ರಾಷ್ಟ್ರದ ಶೇ. ೧೦ರಷ್ಟಾಗುತ್ತದೆ! ಹಲವಾರು ಸ್ಥಳಗಳಲ್ಲಿ ಡೈ ಆಕ್ಸಿನ್ ಭೂಮಿಯಿಂದ ೭ ಅಡಿಗಳಷ್ಟು ಕೆಳತೂರಿದ್ದು ೨೦-೩೦ ವರ್ಷಗಳ ಕಾಲ ಕ್ರಿಯಾಶೀಲವಾಗಿರುತ್ತದೆ. ಇದನ್ನು ಯಥಾಸ್ಥಿತಿಗೆ ತರುವ ಕೆಲಸ ಯಾರದು ? ಉತ್ತರ ಸ್ಪಷ್ಟವಾಗಿದೆ : ದುರಂತಕ್ಕೆ ಯಾರು ಕಾರಣರೋ ಅವರೇ ಅದನ್ನು ಸರಿಪಡಿಸಬೇಕು. ಆದರೆ ಅದಕ್ಕೆ ಅಮೆರಿಕಾದ ಅಧಿಕೃತ ನೀತಿಗಳ ಮನೋಭಾವನೆಯಲ್ಲಿ ಬದಲಾವಣೆಯ ಅವಶ್ಯಕತೆಯಿದ್ದು ಭೋಪಾಲ್ ಅನಿಲ ದುರಂತದ ಸಂತ್ರಸ್ತರನ್ನು ನಡೆಸಿಕೊಂಡ ರೀತಿಗಿಂತ ಭಿನ್ನವಾದ ಯೋಜನೆಯನ್ನು ರೂಪಿಸಬೇಕಿದೆ.

ಪ್ರತಿಯೊಬ್ಬ ವಿಯೆಟ್ನಾಂನ ಪ್ರಜೆಯ ಮೇಲೆ ೫೦೦ ಪೌಂಡ್ ಬಾಂಬುಗಳನ್ನು ಸಿಡಿಸಿದರೂ ಅಮೆರಿಕಾ ಯುದ್ಧದಲ್ಲಿ ಸೋತಿತು. ಯುದ್ಧವು ಆರಂಭವಾಗುವ ಮೊದಲೇ ಅಮೆರಿಕಾ ಸೋತಿತ್ತು ಹಾಗೂ ಪ್ರತಿಯೊಂದು ಭತ್ತದ ಭೂಮಿ, ಫ್ಯಾಕ್ಟರಿ, ಶಾಲೆ, ಕಾಲೇಜು ಹಾಗೂ ಸಹಕಾರ ಮಂಡಳಿಗಳಲ್ಲಿ ಸಮಾಜವಾದದ ಪ್ರಯೋಗಗಳನ್ನು ಜರುಗಿಸಲಾಗಿತ್ತು, ರಾಷ್ಟ್ರೀಯ ಸ್ವಾತಂತ್ರ್ಯದಲ್ಲಿ ನಂಬಿಕೆಯಿಟ್ಟಿದ್ದ ವಿಯೆಟ್ನಾಮಿನ ಪ್ರತಿಯೊಬ್ಬ ಪ್ರಜೆಯೊಂದಿಗೆ ಅಮೆರಿಕಾ ಹೋರಾಡಬೇಕಾಗಿತ್ತು. ಅವರು ತಮ್ಮ ನಾಯಕ ಫಾಮ್ ವ್ಯಾನ್ ಡಾಂಗ್ ''ಬಿ-೫೨ ಮತ್ತು ಕಂಪ್ಯೂಟರ್‌ಗಳು, ಮಹಾನ್‌ಧ್ಯೇಯ ಮತ್ತು ಮಾನವ ಬೌದ್ಧಿಕತೆಗಳೊಂದಿಗೆ ಸ್ಪರ್ಧಿಸಲಾರವು'' ಎಂಬ ಮಾತನ್ನು ಸಾಧಿಸಿ ತೋರಿಸಿದರು. ಗೆರಿಲ್ಲಾಗಳು ಸಾವನ್ನು ಧಿಕ್ಕರಿಸಿದರು. ಒಬ್ಬ ಗೆರಿಲ್ಲಾನನ್ನು ಕೊಲ್ಲಲು ರೂ. ೨.೫೦ ಕೋಟಿ ಖರ್ಚಾಗುತ್ತಿತ್ತು. ಒಂದು ಪ್ರಕರಣದಲ್ಲಿ, ಅಮೆರಿಕನ್ನರ ೯೯ ಯುದ್ಧವಿಮಾನಗಳು ನಾಶವಾದವು. ಅಮೆರಿಕಾದ ಜನತೆ ವಿಯೆಟ್ನಾಂನೊಂದಿಗೆ ತಮಗೆ ಯಾವುದೇ ವಿರೋಧವಿಲ್ಲ ಎಂದು ಘೋಷಿಸಿದರು. ಹೀಗೆ ಹೆಚ್ಚು ಸೈನಿಕರನ್ನು ಕಳುಹಿಸಬೇಕೆಂಬ ಜನರಲ್ ವೆಸ್ಟ್‌ಮೋರ್‌ಲ್ಯಾಂಡ್‌ನ ಬೇಡಿಕೆಗಳನ್ನು ಆರ್ಥಿಕವಾಗಿ ಅಥವಾ ರಾಜಕೀಯವಾಗಿ ಸರಕಾರ ಭರಿಸಲಾಗಲಿಲ್ಲ. ವಿಯೆಟ್ನಾಂ ಎಂಬ ಪುಟ್ಟ ದೇಶವು ''ಕಣ್ಣೀರಿಡುವುದಕ್ಕೆ ಬೇಕಾದಷ್ಟು ಸಂಕಷ್ಟಗಳಿದ್ದರೂ ಹಾಡಲು ಬಯಸುತ್ತದೆ'' ಎಂಬ ಮಹಾನ್ ನಾಯಕ ಹೊ ಚಿ ಮಿನ್‌ರ ಮಾತುಗಳು ಮತ್ತು ಈ ಕವನದ ಸಾಲುಗಳು ಅಲ್ಲಿನ ಜನರ ಕೆಚ್ಚು ಮತ್ತು ದೇಶಾಭಿಮಾನವನ್ನು ಸಾರಿ ಹೇಳುತ್ತವೆ :

ನಮ್ಮ ಪರ್ವತಗಳು ಸದಾ, ನಮ್ಮ ನದಿಗಳು
ಸದಾ, ನಮ್ಮ
ಜನತೆಯು ಸದಾ ಶಾಶ್ವತ.
ಅಮೆರಿಕಾದ ದಾಳಿಕೋರರನ್ನು ಹಿಮ್ಮೆಟ್ಟಿಸಿ, ನಾವು
ನಮ್ಮ ಭೂಮಿಯನ್ನು ಹತ್ತು ಪಟ್ಟು ಹೆಚ್ಚು ಸುಂದರವಾಗಿ ಕಟ್ಟುತ್ತೇವೆ.''

---

ಇಂಗ್ಲಿಷ್‌ನಿಂದ ಕನ್ನಡಕ್ಕೆ : ಎಚ್. ಎಸ್. ರಘು

ಭೂತನ ಹೊಸೂರ, ಸೂನಗನಹಳ್ಳಿ ಅಂಚೆ, ಮಂಡ್ಯ ತಾಲೂಕು – ೫೭೧ ೪೦೩

---



## ನಮನ

### ಕಾ॥ ಸಿಂಪ್ಸನ್ ಸೋನ್ಸ್

ಕರ್ನಾಟಕದ ಹಿರಿಯ ಕಮ್ಯುನಿಸ್ಟ್ ನಾಯಕರಾಗಿದ್ದ ಸಿಂಪ್ಸನ್ ಸೋನ್ಸ್‌ರು ೧-೧೧-೨೦೦೫ರಂದು ಮಂಗಳೂರಿನಲ್ಲಿ ಕಣ್ಮರೆಯಾದರು. ಆರೇಳು ದಶಕಗಳ ಕಾಲ ತನ್ನ ಸರ್ವಸ್ವವನ್ನೂ ತ್ಯಾಗ ಮಾಡಿ ಶ್ರಮಿಕ ವರ್ಗದ ಏಳಿಗೆಗಾಗಿ ಸತತವಾಗಿ ದುಡಿದ ಅಪರೂಪದ ಬದುಕು ಸೋನ್ಸ್‌ರದು. ದಕ್ಷಿಣ ಕನ್ನಡ ಜಿಲ್ಲೆಯ ಆರಂಭದ ಹಂತದಿಂದಲೂ ಬೀಡಿ ಕೆಲಸಗಾರರ, ಹಂಚಿನ ಕೆಲಸಗಾರರ ಚಳುವಳಿಗಳಿಗೆ ಇವರು ನೀಡಿರುವ ಕೊಡುಗೆ ಅನನ್ಯವಾದುದು. ಸಜ್ಜನಿಕೆ, ಪ್ರಾಮಾಣಿಕತೆ, ದಕ್ಷತೆಗಳಿಂದ ನೂರಾರು ಯುವಗೆಳೆಯರಿಗೆ ಸ್ಫೂರ್ತಿಯ ಚಿಲುಮೆಯಾಗಿದ್ದ ಸಿಂಪ್ಸನ್ ಸೋನ್ಸ್‌ರದು ಸದ್ದುಗದ್ದಲವಿಲ್ಲದ ಆಡಂಬರವಿಲ್ಲದ ಬದುಕು. ರಾಜ್ಯದ ಕಮ್ಯುನಿಸ್ಟ್ ಚಳವಳಿಯ ಇತಿಹಾಸದಲ್ಲಿ ಇವರಿಗೆ ಶಾಶ್ವತ ಸ್ಥಾನವಿದೆ.

ಮೃತರಿಗೆ 'ಹೊಸತು' ಗೌರವ ಸಲ್ಲಿಸುತ್ತದೆ.

# ಸಾಂಖ್ಯ ಸಿದ್ಧಾಂತದಲ್ಲಿ ಭೌತವಾದ ಪರಿಕಲ್ಪನೆ

ಕೆ. ಎಲ್. ಗೋಪಾಲಕೃಷ್ಣ ರಾವ್

**ಸಾಂ**ಖ್ಯ ಎಂಬ ಪದದ ಮೂಲದ ಬಗೆಗೆ ಭಾರತ ಶಾಸ್ತ್ರಜ್ಞರ ಮಧ್ಯೆ ಭಿನ್ನಾಭಿಪ್ರಾಯಗಳಿವೆ. ಸಾಂಖ್ಯ ಎಂಬ ಪದಕ್ಕೆ ಎರಡು ಅರ್ಥಗಳಿವೆ : (೧) ಎಣಿಕೆ ಅಥವಾ ಗಣನೆ, (೨) ಪ್ರಗಾಢ ಚಿಂತನೆ, ವಿವೇಚನೆ, ಪರ ವಿರೋಧಗಳ ಗಣನೆ, ಬೌದ್ಧಿಕ ಹಾಗೂ ಭೌತಿಕ ಹೋರಾಟ. ಮೊದಲನೆಯ ಅರ್ಥವನ್ನು ಒಪ್ಪಿಕೊಂಡವರು ಈ ತತ್ತ್ವಜ್ಞಾನ ಪದ್ಧತಿಯಲ್ಲಿ ಉಪನಿಷತ್ ಸೂತ್ರಗಳ ಪಟ್ಟಿ(ಸಂಖ್ಯೆ) ಮಾಡಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ ಎಂದು ಹೇಳುತ್ತಾರೆ. ಎರಡನೆಯ ಅರ್ಥವನ್ನು ಒಪ್ಪಿಕೊಂಡ ಡಾ॥ ಸರ್ವಪಲ್ಲಿ ರಾಧಾಕೃಷ್ಣನ್, ರಾಮಮೋಹನರಾಯ್ ಮುಂತಾದವರು ಈ ಪದ್ಧತಿಯ ಸ್ವರೂಪವನ್ನು ಹೆಚ್ಚು ಸೂಕ್ತವಾಗಿ ವ್ಯಾಖ್ಯಾನಿಸಿದ್ದಾರೆಂದು ಹೇಳಬಹುದು.

ಸಾಂಖ್ಯ ಸಿದ್ಧಾಂತವನ್ನು ಸಂಸ್ಥಾಪಿಸಿದವನು, ಸಾಂಖ್ಯ-ಸೂತ್ರಗಳ ಕರ್ತೃ ಕಪಿಲ ಎಂದು ಸಾಮಾನ್ಯವಾಗಿ ಭಾವಿಸಲಾಗಿದೆ. ಇವನು ಕ್ರಿ.ಪೂ. ಸುಮಾರು ೬-೫ನೇ ಶತಮಾನಗಳಲ್ಲಿ ಜೀವಿಸಿದ್ದನೆಂದು ನಂಬಲಾಗಿದೆ. ಸಾಂಖ್ಯಸೂತ್ರಗಳ ಮೂಲ ಪಠ್ಯ ಲಭ್ಯವಿಲ್ಲ. ಹಾಗಾಗಿ ಇದರ ತಿಳಿವಳಿಕೆ ಪಡೆಯಲು ನಾವು ಆ ನಂತರದ ಆಕರಗಳ ಮೊರೆಹೋಗಬೇಕಾಗಿದೆ. ಆ ಆಕರಗಳೆಂದರೆ – ಈಶ್ವರಕೃಷ್ಣನ ಸಾಂಖ್ಯಕಾರಿಕಾ (ಕ್ರಿ.ಶ. ೩-೪ನೇ ಶತಮಾನಗಳು), ವಾಚಸ್ಪತಿ ಮಿಶ್ರನ ಸಾಂಖ್ಯ ತತ್ತ್ವ ಕೌಮುದಿ (೯ನೆಯ ಶತಮಾನ) ಮತ್ತಿತರವು.

ಕಪಿಲನ ಪ್ರಪ್ರಥಮ ಸೂತ್ರವೆಂದರೆ ಈ ಜಗತ್ತು ಭೌತಿಕ ಅನ್ನುವುದು. ಭೌತವೇ (ಪ್ರಕೃತಿಯೇ) ಎಲ್ಲದರ ಮೂಲಾಧಾರ... ಅದು ಸರ್ವವ್ಯಾಪಿ, ಚಿರಂತನವಾದುದು ಮತ್ತು ಏಕೈಕ. ಪ್ರಕೃತಿಯ ಚಲನೆಯೂ ಮೂಲ ಪ್ರಕೃತಿಯಷ್ಟೇ ಚಿರಂತನವಾದುದು. ಆದಿಸ್ವರೂಪದಲ್ಲಿ ಪ್ರಕೃತಿಯು ಹೊರಗಿನ ಯಾವುದೇ ಕಾರಣದಿಂದ ಉಂಟಾದುದಲ್ಲ. ಏಕೆಂದರೆ, ಅದಕ್ಕೆ (ಪ್ರಕೃತಿಗೆ) ಆದಿಯೂ ಇಲ್ಲ, ಅಂತ್ಯವೂ ಇಲ್ಲ. ಈ ಜಗತ್ತು ಯಾರಿಂದಲೇ ಸೃಷ್ಟಿಯಾದುದಲ್ಲ, ಆದ್ದರಿಂದ ಸೃಷ್ಟಿಕರ್ತನೆಂಬ ಯಾವ ಶಕ್ತಿಯೂ ಇಲ್ಲ. ಈ ಜಗತ್ತಿಗೆ ಅದೇ ಮೂಲಕಾರಣ. ಅದು ಕ್ರಮೇಣ ವಿಕಾಸಗೊಂಡಿತು ಎಂದು ಸಾಂಖ್ಯ ಹೇಳುತ್ತದೆ.

ಪ್ರಕೃತಿಯಲ್ಲಿ ಯಾವುದೇ ವಸ್ತುವನ್ನು ಗಮನಿಸಿ ಅಥವಾ ಘಟನೆಯನ್ನು ಪರಿಶೀಲಿಸಿ, ಅದರಲ್ಲಿ ಕಾರಣ ಸಂಬಂಧ ಇರುತ್ತದೆ. ಇದೊಂದು ವಸ್ತುನಿಷ್ಠ ಲಕ್ಷಣ. ಇದನ್ನು ಕಪಿಲ ಮನ್ನಿಸಿದ್ದ. ಪ್ರಕೃತಿಯು ಕೆಳಗಿನ ರೂಪಗಳಿಂದ ಹೆಚ್ಚು ಉನ್ನತ ರೂಪಗಳಿಗೆ ತನ್ನಷ್ಟಕ್ಕೆ ತಾನೇ ವಿಕಾಸಗೊಳ್ಳುತ್ತದೆ ಎಂದು ಅವನು ಪ್ರತಿಪಾದಿಸಿದ. ಆದ್ದರಿಂದಲೇ ಜಗತ್ತು ಕೆಳಮಟ್ಟಗಳಿಂದ ಮೇಲಿನ ಮಟ್ಟಗಳಿಗೆ ವಿಕಾಸಗೊಳ್ಳುವುದರಲ್ಲಿ ನಿರಂತರತೆಯನ್ನು ಕಾಣುತ್ತೇವೆಂದು ಸಾಂಖ್ಯ-ಕಾರಿಕದ ಮೊದಲನೆಯ ಶ್ಲೋಕವೆ ತಿಳಿಸುತ್ತದೆ. ಅಸ್ತಿತ್ವದಲ್ಲಿ ಇಲ್ಲದಿರುವ ಯಾವುದೇ ವಸ್ತು ಅಥವಾ ಶಕ್ತಿಯಿಂದ ಮತ್ತಾವುದೇ ವಸ್ತು ಅಥವಾ ಶಕ್ತಿ ಹುಟ್ಟಿಕೊಳ್ಳಲಾರದು. ಕಾರ್ಯ-ಕಾರಣಗಳ ನಡುವೆ ಯಾವತ್ತೂ ನಿಕಟ ಸಂಬಂಧ ಇದ್ದೇ ಇರುತ್ತದೆ. ಹೀಗಿಲ್ಲದಿದ್ದರೆ ಎಲ್ಲೆಲ್ಲೂ ಯಾವುದೇ ಘಳಿಗೆಯಲ್ಲಿ ಏನಾದರೊಂದು ಹುಟ್ಟಿಕೊಳ್ಳುವ ಸಾಧ್ಯತೆ ಇರುತ್ತಿದ್ದಿತು. ಪ್ರತಿಯೊಂದು ಕಾರಣಕ್ಕೂ ಒಂದು ನಿರ್ದಿಷ್ಟ ಪರಿಣಾಮ ಇದ್ದೇ ಇರುತ್ತದೆ. ಪರಿಣಾಮವಿಲ್ಲದಂಥ ಕಾರಣ ಇರಲು ಸಾಧ್ಯವಿಲ್ಲ. ಪರಿಣಾಮವನ್ನು ಕಾರಣದಿಂದ ಎಂದೂ ಪ್ರತ್ಯೇಕಗೊಳಿಸಲಾಗದು. ಆದ್ದರಿಂದ ಯಾವುದೇ ಅಸ್ತಿತ್ವಕ್ಕೂ ಒಂದು ಉಪಾಧಿ ಇದ್ದೇ ಇರುತ್ತದೆ.

ಕಪಿಲನು ತನ್ನ ನಿರೀಶ್ವರವಾದವನ್ನು ಸಮರ್ಥಿಸಲು ಮತ್ತು ಬ್ರಾಹ್ಮಣ ಮತಧರ್ಮವನ್ನು ಟೀಕಿಸಲು ಭೌತವಾದದ ಕಾರ್ಯ-ಕಾರಣ ಸಿದ್ಧಾಂತವನ್ನು ಬಳಸಿಕೊಂಡ. ಮೊದಲನೆಯ ಕಾರಣವು ದೇವರು (ಬ್ರಹ್ಮ) ಆಗಿದ್ದು, ಈ ಜಗತ್ತು ಅದರ ಪರಿಣಾಮ ಎನ್ನುವುದಾದರೆ ಇಲ್ಲಿ ಕಾರ್ಯ–ಕಾರಣಗಳ ನಡುವೆ ಅಸಾಂಗತ್ಯ ಉಂಟಾಗುತ್ತದೆ. ಆದರೆ ಕಾರ್ಯ-ಕಾರಣಗಳ ನಡುವೆ ಅಸಾಂಗತ್ಯ ಇರಲು ಸಾಧ್ಯವೇ ಇಲ್ಲ. ಆದ್ದರಿಂದ ಈ ಜಗತ್ತು ಉಂಟಾಗುವುದಕ್ಕೆ ಕಾರಣ ದೇವರಲ್ಲ ಆದರೆ ವಸ್ತು (ಪ್ರಕೃತಿ). ವಸ್ತುವು ವಿವಿಧ ರೂಪಗಳಲ್ಲಿ ಮಾರ್ಪಾಟುಗೊಳ್ಳುವುದರ ಪರಿಣಾಮವೇ ಈ ಜಗತ್ತು ಎಂದು ಕಪಿಲ ಬರೆದಿದ್ದಾನೆ.

ನಾವು ಕಾಣುವಂತೆ ಕಪಿಲನು ತನ್ನ ತತ್ತ್ವಶಾಸ್ತ್ರ ಸೂತ್ರಗಳನ್ನು ವಿವರಿಸಲು ಆರಂಭದಿಂದಲೂ ಕಾರಣತ್ವ (ಸಕಾರಣತೆ, ನಿಮಿತ್ತವಾದ, ಹೇತುವಾದ)ದ ವಿಚಾರವನ್ನು ಬಳಸಿಕೊಳ್ಳುತ್ತಾನೆ. ಇದು ಆಕಸ್ಮಿಕವೇನಲ್ಲ. ಕಾರಣತ್ವಕ್ಕೆ ಸಂಬಂಧಿಸಿ ಸಾಂಖ್ಯ ತತ್ತ್ವಜ್ಞಾನದ ನಿಲುವುಗಳೇ ಅದರ ತಾತ್ತ್ವಿಕ ದಿಶೆಯನ್ನು ನಿರ್ಧರಿಸಿದಂಥ ನಿರ್ಧಾರಕ ಆಧಾರಾಂಶಗಳಾಗಿದ್ದವು.

ಸಾಂಖ್ಯ ಸಿದ್ಧಾಂತದ ಪ್ರಕಾರ ಪ್ರತಿಯೊಂದು ಘಟನೆ ಅಥವಾ ವಿದ್ಯಮಾನಕ್ಕೂ ಅದರದೇ ಭೌತಿಕ ಕಾರಣ ಇದ್ದೇ ಇರುತ್ತದೆ. ಈ ಸಿದ್ಧಾಂತದಲ್ಲಿ ಕಾರ್ಯ-ಕಾರಣಗಳ ನಡುವಿನ ಎಲ್ಲ ಸಂಬಂಧಗಳನ್ನೂ, ಕಾರ್ಯ (ಪರಿಣಾಮ) ಯಾವತ್ತೂ ಕಾರಣದಲ್ಲಿ ಇದ್ದೇ ಇರುತ್ತದೆ, ಎಂಬ ಭಾವನೆಗೆ ಅನುಗುಣವಾಗಿ ಗ್ರಹಿಸಲಾಗಿದೆ. ಈ ವಿಚಾರಕ್ಕೆ ಸಂಬಂಧಿಸಿ ಬೌದ್ಧರೂ ನೈಯ್ಯಾಯಿಕರೂ ಮತ್ತು ವೈಶೇಷಿಕರೂ ಮತ್ತೊಂದು ಭಾವನೆ ಹೊಂದಿದ್ದಾರೆ. ಅವರು ಪರಿಣಾಮವು ಭೌತಿಕ ಕಾರಣದಲ್ಲಿ ವಾಸ್ತವವಾಗಿ ಅಸ್ತಿತ್ವದಲ್ಲಿ ಇರುವುದೇ ಇಲ್ಲ ಎಂದು ನಂಬುತ್ತಾರೆ. ಪರಿಣಾಮವು ಭೌತಿಕ ಕಾರಣದಲ್ಲಿ ಅಸ್ತಿತ್ವದಲ್ಲಿದ್ದುದೇ ಆದಲ್ಲಿ ಕಾರ್ಯಕಾರಿ ಕಾರಣ ಇರುವ ಆವಶ್ಯಕತೆಯೇ ಇರುವುದಿಲ್ಲ ಎಂದವರು ವಾದಿಸುತ್ತಾರೆ. ಉದಾಹರಣೆಗೆ, ಮಡಕೆಯು ವಾಸ್ತವವಾಗಿ ಮಣ್ಣಿನಲ್ಲಿ ಇರುವುದೇ ಆದಲ್ಲಿ ಕುಂಬಾರನಾದರೂ ಏಕೆ ಬೇಕು, ಎಂದವರು ಕೇಳುತ್ತಾರೆ. ಈ ರೀತಿ ಪರಿಣಾಮವು ಉಂಟಾಗುವುದಕ್ಕೆ ಮುನ್ನ ಭೌತಿಕ ಕಾರಣದಲ್ಲಿ ಅದು ಅಸ್ತಿತ್ವದಲ್ಲಿ ಇರುವುದಿಲ್ಲ ಎಂಬ ಈ ವಾದವನ್ನು ಕೆಲವು ವೇಳೆ 'ಆರಂಭವಾದ' ಎಂದು ಕರೆಯಲಾಗುತ್ತದೆ. ಅಂದರೆ ಯಾವುದೇ ಹೊಸ ವಸ್ತುವಿನ ಮೂಲವು ಪರಿಣಾಮದಲ್ಲೇ ಇರುತ್ತದೆ ಎಂಬುದು ಇದರ ಅರ್ಥ. ಕಾರ್ಯ-ಕಾರಣ ಚಿಂತನೆಗೆ ಸಮರ್ಥನೆಯಾಗಿ ಸಾಂಖ್ಯಸಿದ್ಧಾಂತದಲ್ಲಿ ವ್ಯಕ್ತಪಡಿಸಲಾಗಿರುವ ವಾದಗಳನ್ನು ಈ ಕೆಳಗಿನಂತೆ ವಿವರಿಸಬಹುದು :

ಕಾರಣ (ಪರಿಣಾಮ)ಗಳಲ್ಲಿ ಎರಡು ರೀತಿಯವುಂಟು. ಒಂದು ಭೌತಿಕ. ಇದರಲ್ಲಿ ಪರಿಣಾಮವು ಸುಪ್ತವಾಗಿರುತ್ತದೆ. ಇನ್ನೊಂದು ಸಮರ್ಥ ಅಥವಾ ಉತ್ಪಾದಕ. ಇದರಲ್ಲಿ ಪರಿಣಾಮ ವ್ಯಕ್ತಗೊಂಡಿರುತ್ತದೆ. ಆದರೆ ಭೌತಿಕ ಕಾರಣದಲ್ಲಿ ಪರಿಣಾಮ ವ್ಯಕ್ತಗೊಂಡಿರದ ಕಾರಣ ಅದು ಇಲ್ಲವೇ ಇಲ್ಲ ಎಂದು ನಾವು ವಾದಿಸಹೋದರೆ ಆಗ 'ಉತ್ಪಾದಕ ಕಾರಣ' ಎಂಬ ಪ್ರಕಲ್ಪನೆಯು ಅರ್ಥರಹಿತವಾಗುತ್ತದೆ ; ಏಕೆಂದರೆ, ಅದಕ್ಕೆ ಕ್ರಿಯೆ ಜರುಗಿಸಲು ವಸ್ತುವೇ ಇರುವುದಿಲ್ಲ.

ಪರಿಣಾಮವು ಅಥವಾ ಕಾರ್ಯವು ತಾನು ಅಸ್ತಿತ್ವದಲ್ಲೇ ಇಲ್ಲದ ಕಾರಣದಿಂದ ಹುಟ್ಟುತ್ತದೆ ಎಂದು ಭಾವಿಸಿಕೊಳ್ಳೋಣ. ಆಗ ಅದು, ಅಸ್ತಿತ್ವವು ಅನಸ್ತಿತ್ವದಿಂದ ಹುಟ್ಟುತ್ತದೆ ಅಥವಾ ಏನೂ ಇಲ್ಲದಿರುವುದರಿಂದ ಏನೋ ಒಂದು ಹುಟ್ಟುತ್ತದೆ ಎಂದು ವಾದಿಸುವುದಕ್ಕೆ ಸಮನಾಗುತ್ತದೆ.

ಅಷ್ಟೇ ಅಲ್ಲ, ಪರಿಣಾಮವು/ಕಾರ್ಯವು ಕಾರಣದಲ್ಲಿ ಅಂತರ್ಗತವಾಗಿರಬೇಕಷ್ಟೆ ಅಲ್ಲ, ಅದು ಕಾರಣದ ಸ್ವರೂಪದ್ದೇ ಆಗಿರಬೇಕು. ಅವೆರಡಕ್ಕೂ ಆಧಾರ ಒಂದೇ. ಉದಾಹರಣೆಗೆ, ಬಟ್ಟೆಯನ್ನು ನೂಲಿನಿಂದ ಮಾಡಲು ಸಾಧ್ಯವೇ ಹೊರತು ಅದೇ ಸ್ವರೂಪದ್ದಾಗಿರದ ಹಾಲಿನಿಂದ ಮಾಡಲು

ಸಾಂಖ್ಯ ಸಿದ್ಧಾಂತವನ್ನು ಸಂಸ್ಥಾಪಿಸಿದವನು, ಸಾಂಖ್ಯ ಸೂತ್ರಗಳ ಕರ್ತೃ ಕಪಿಲ ಎಂದು ಸಾಮಾನ್ಯವಾಗಿ ಭಾವಿಸಲಾಗಿದೆ. ಇವನು ಕ್ರಿ.ಪೂ. ಸುಮಾರು ೬-೫ನೇ ಶತಮಾನಗಳಲ್ಲಿ ಜೀವಿಸಿದ್ದನೆಂದು ನಂಬಲಾಗಿದೆ. ಸಾಂಖ್ಯಸೂತ್ರಗಳ ಮೂಲ ಪಠ್ಯ ಲಭ್ಯವಿಲ್ಲ, ಹಾಗಾಗಿ ಇದರ ತಿಳಿವಳಿಕೆ ಪಡೆಯಲು ನಾವು ಆ ನಂತರದ ಆಕರಗಳ ಮೊರೆಹೋಗಬೇಕಾಗಿದೆ. ಆ ಆಕರಗಳೆಂದರೆ — ಈಶ್ವರಕೃಷ್ಣನ ಸಾಂಖ್ಯಕಾರಿಕಾ (ಕ್ರಿ.ಶ. ೩-೪ನೇ ಶತಮಾನಗಳು), ವಾಚಸ್ಪತಿ ಮಿಶ್ರನ ಸಾಂಖ್ಯತತ್ತ್ವ ಕೌಮುದಿ (೯ನೆಯ ಶತಮಾನ) ಮತ್ತಿತರವು.

ಸಾಧ್ಯವೇ ? ಅದೇ ರೀತಿ ಮೊಸರನ್ನು ಹಾಲಿನಿಂದ ಮಾಡಲು ಸಾಧ್ಯವೇ ಹೊರತು ನೂಲಿನಿಂದ ಮಾಡಲು ಆಗುತ್ತದೆಯೇ... ?

ಪರಿಣಾಮ ಅಥವಾ ಕಾರ್ಯವು ವ್ಯಕ್ತಗೊಳ್ಳುವುದಕ್ಕೂ ಮುನ್ನವೇ ಕಾರಣದಲ್ಲಿ ಅಸ್ತಿತ್ವದಲ್ಲಿರುತ್ತದೆ ಎನ್ನುವುದನ್ನು 'ಸತ್ಕಾರ್ಯವಾದ' ಎಂದು ಕರೆಯಲಾಗುತ್ತದೆ. ಅದ್ವೈತ ವೇದಾಂತಿಗಳೂ ಈ ಸತ್ಕಾರ್ಯವಾದವನ್ನು ಅನುಮೋದಿಸುತ್ತಾರೆ. ಆದರೆ ಅವರ ಕಲ್ಪನೆಯಲ್ಲಿ ಒಂದು ಸಾರಭೂತವಾದ ವ್ಯತ್ಯಾಸವಿದೆ. ಅವರ ಪ್ರಕಾರ ಕಾರಣವು ಪರಿಣಾಮವಾಗಿ ಸ್ಥಿತ್ಯಂತರಗೊಳ್ಳುತ್ತದೆ, ನಿಜ. ಆದರೆ ಹೀಗೆ ಉಂಟಾದ ಪರಿಣಾಮವು ಕೇವಲ ತೋರ್ಕೆಯಾಗಿ ಇಲ್ಲವೇ ಭ್ರಾಂತಿಯಾಗಿ (ವಿವರ್ತವಾಗಿ) ಇರುತ್ತದೆ. ಇದಕ್ಕೆ ಅವರು ಹಾವು, ಹಗ್ಗದ ಉದಾಹರಣೆ ನೀಡುತ್ತಾರೆ. ನಾವು ಒಂದು ಹಗ್ಗವನ್ನು ನೋಡಿ ಅದನ್ನು ಹಾವು ಎಂದು ಭಾವಿಸಿಕೊಂಡರೆ, ಹಗ್ಗವು ನಿಜಕ್ಕೂ ಹಾವಾಗಿ ಪರಿವರ್ತನೆಯಾಗಿರುವುದಿಲ್ಲ, ಅದೊಂದು ಭ್ರಾಂತಿಯಾಗಷ್ಟೇ ಇರುತ್ತದೆ. ಅದೇ ರೀತಿ ಈ ಜಗತ್ತು ಬ್ರಹ್ಮನ ಸೃಷ್ಟಿಯಷ್ಟೆ ಇಲ್ಲಿ ಬ್ರಹ್ಮ ಕಾರಣ, ಜಗತ್ತು ಪರಿಣಾಮ. ಬ್ರಹ್ಮ (ಕಾರಣ) ಅನನ್ಯವಾಗಿಯೋ, ಅಪರಿವರ್ತನೀಯವಾಗಿಯೋ ಇರುತ್ತದೆ. ಆದರೆ ಅದರ ಪರಿಣಾಮವಾದ ಈ ಜಗತ್ತು ಕೇವಲ ಒಂದು ತೋರ್ಕೆ, ಒಂದು ಭ್ರಮೆ. ಇದು ಹಾಗಿರಲಿ. ಈಗ ಮೂಲ ಸಾಂಖ್ಯಕ್ಕೆ ಬರೋಣ.

ಕಾರಣಗಳಿಲ್ಲದ ಯಾವುದೇ ಪರಿಣಾಮಗಳು ಇರಲು ಸಾಧ್ಯವೇ ಇಲ್ಲ ಎಂದು ಸಾಂಖ್ಯವಾದ ಒತ್ತಿಹೇಳುತ್ತದೆ. ಪ್ರಕೃತಿಯಲ್ಲಿರುವ ಪ್ರತಿಯೊಂದಕ್ಕೂ ಅದರದೇ ಕಾರಣವಿರುತ್ತದೆ. ಈ ದೇಹ, ಆತ್ಮ, ಭಾವನೆಗಳು, ಬುದ್ಧಿಶಕ್ತಿ – ಇವಕ್ಕೂ ಅವುಗಳದೇ ಮೂಲಕಾರಣ ಇರುತ್ತದೆ. ಹಾಗಾಗಿ ಇವು ಸೀಮಿತವಾದುವು, ಅವಲಂಬಿತವಾದುವು.

''ಎಲ್ಲ ಕಾರಣಗಳ ಹಾಗೂ ಪರಿಣಾಮಗಳ ಕಾರಣ'' ವಾದ ಪ್ರಕೃತಿಗೆ (ಭೌತವಸ್ತುವಿಗೆ) ಕಾರಣವೆಂಬುದಿಲ್ಲ. ಪ್ರಕೃತಿಯಲ್ಲಿ ನಾವು ಕಾಣುವ ಎಲ್ಲಾ ಉತ್ಪನ್ನಗಳಿಗೂ ಕಾರಣಗಳಿವೆ, ಆದರೆ ಪ್ರಕೃತಿಗೇ ಕಾರಣವಿಲ್ಲ. ಪ್ರಕೃತಿಯ ಉತ್ಪನ್ನಗಳು ಅವಲಂಬಿಗಳಾದರೆ ಪ್ರಕೃತಿಯೇ ನಿರಾವಲಂಬಿ. ಉತ್ಪನ್ನಗಳು ಬಹು ಸಂಖ್ಯಾತ, ಆಕಾಶ ಕಾಲಗಳಲ್ಲಿ ಸೀಮಿತ. ಪ್ರಕೃತಿಯಾದರೋ ಅಸೀಮಿತ, ಏಕೈಕ, ಸರ್ವವ್ಯಾಪಿ ಹಾಗೂ ಚಿರಂತನ.

ಸಾಂಖ್ಯ ಸಿದ್ಧಾಂತದ ಪ್ರಕಾರ, ಪ್ರಕೃತಿಯಲ್ಲಿ ಮೂರು ಶಕ್ತಿಗಳು ಅಥವಾ ಗುಣಗಳಿವೆ. ಅವೇ – ಸತ್ತ್ವ, ರಜಸ್ ಹಾಗೂ ತಮಸ್. ಸತ್ತ್ವವು ಲಘುವಾದುದು, ಅರಿವು ಉಂಟು ಮಾಡುವಂತಹುದು. ರಜಸ್ಸು ಪ್ರೇರಣಾತ್ಮಕ, ಚಲನಶೀಲ. ತಮಸ್ಸು ಭಾರವಾದುದು, ನಿಗ್ರಹಕಾರಕ. ಸಾಂಖ್ಯಕಾರಿಕವನ್ನು ವಿಶ್ಲೇಷಿಸಿ ನೋಡಿದಾಗ ಪರಿಣಾಮದಲ್ಲೂ ನಮಗೆ ತಿಳಿದುಬರುವುದೆಂದರೆ – ಸತ್ತ್ವವು ಪ್ರಚ್ಛನ್ನ ಪ್ರಜ್ಞೆ; ರಜಸ್ಸು ಚಲನೆಯ, ಕ್ರಿಯೆಯ, ಬೆಳವಣಿಗೆಯ ಆಕರ; ತಮಸ್ಸು ಕ್ರಿಯೆಯನ್ನು ನಿಗ್ರಹಿಸುವಂತಹುದು, ಬೆಳವಣಿಗೆಯನ್ನು ನಿಧಾನಗೊಳಿಸುವಂತಹುದು. ಯಾವುದೇ ವಸ್ತುವಿನ ಅಥವಾ ವಿದ್ಯಮಾನದ ಮೂಲಾಧಾರವಾದ ಈ ಮೂರು ಗುಣಗಳೂ ಪರಸ್ಪರ ಅವಿಭಾಜ್ಯವಾಗಿ ಸಂಬಂಧಿತವಾದವು, ಒಂದು ಇನ್ನೊಂದರ ಮೇಲೆ ಪರಿಣಾಮ ಬೀರುವಂತಹವು. ಹಣತೆಯ ಉರಿ, ಎಣ್ಣೆ ಹಾಗೂ ಬತ್ತಿಯಂತೆ ನಿಕಟವಾಗಿ ಸಂಬಂಧಿತವಾದವು.

ಈ ಗುಣಗಳು – ದ್ರವ್ಯ (ತಮಸ್), ಶಕ್ತಿ (ರಜಸ್) ಹಾಗೂ ಪ್ರಜ್ಞಾವಂತ ಸೂತ್ರ (ಸತ್ತ್ವ) – ಒಂದು ರೀತಿಯ ಪ್ರಾಥಮಿಕ ಸೂತ್ರಗಳು. ಪ್ರಕೃತಿಯಲ್ಲಿರುವ ಪ್ರತಿಯೊಂದೂ ಈ ಮೂರು ಸೂತ್ರಗಳಿಂದ ಶಕ್ತಿಪೂರಿತವಾಗಿರುತ್ತದೆ. ಅವುಗಳ ನಡುವೆ ಸತತವಾಗಿ ಅಂತರಕ್ರಿಯೆ ನಡೆಯುತ್ತಿರುತ್ತದೆ. ದ್ರವ್ಯವಿಲ್ಲದೆ ಶಕ್ತಿ ಇರಲಾರದು, ಶಕ್ತಿ ಇಲ್ಲದೆ ಪ್ರಜ್ಞೆ ಇರಲಾರದು. ಹಾಗಾದರೆ ವಸ್ತು ಅಥವಾ ವಿದ್ಯಮಾನವೊಂದು ಹೇಗೆ ಉಂಟಾಗುತ್ತದೆ ಅಥವಾ ರೂಪುಗೊಳ್ಳುತ್ತದೆ ? ಈ ಪ್ರಕ್ರಿಯೆ ಮೂರು ಶಕ್ತಿಗಳ ಬಿಡಿ ಕಣಗಳಿಂದ ಪ್ರಾರಂಭವಾಗುತ್ತದೆ. ಆ ಮೂರು ಶಕ್ತಿಗಳೂ – ಸತ್ತ್ವ, ರಜಸ್, ತಮಸ್ – ಮೂಲ ದ್ರವ್ಯದಾದ್ಯಂತ ಹೇಗೆಂದರೆ ಹಾಗೆ ಹಂಚಿಹೋಗಿರುತ್ತವೆ. ಅವು ಸಹಜ ಆಕರ್ಷಣೆಯ ಪ್ರಭಾವದಡಿ ಒಟ್ಟಾಗಿ ಒಂದುಗೂಡಿರುತ್ತವೆ. ಇದರ ಪರಿಣಾಮವಾಗಿ ವಸ್ತುವಿನ ವಿವಿಧ ಭಾಗಗಳಲ್ಲಿ ಒತ್ತಡ ಒಂದೇ ರೀತಿ ಇರುವುದಿಲ್ಲ. ಹಾಗಾಗಿ ಏಕರೂಪದ ಆಸಕ್ತಿರಹಿತವಾದ ವಸ್ತುವಿನ ಬದಲು ಒಂದು ಇನ್ನೊಂದರಿಂದ ಸ್ಪಷ್ಟವಾಗಿ ಭಿನ್ನವಾದಂಥ ಕಾಯಗಳು ಕ್ರಮೇಣ ರೂಪುಗೊಳ್ಳುತ್ತವೆ.

ಬಿಡಿ ವಸ್ತು ಅಥವಾ ವಿದ್ಯಮಾನವೊಂದು ಕಣ್ಮರೆಯಾದಲ್ಲಿ ಅದು ದ್ರವ್ಯವೇ ನಾಶವಾದ ಅರ್ಥ ನೀಡುವುದಿಲ್ಲ. ಅದೇ ರೀತಿ ಯಾವುದೇ ವಸ್ತು ಅಥವಾ ವಿದ್ಯಮಾನ ಉಂಟಾದಲ್ಲಿ ಅಥವಾ ರೂಪುಗೊಂಡಲ್ಲಿ ಅದು ದ್ರವ್ಯ ಸೃಷ್ಟಿಯಾದ ಅರ್ಥ ನೀಡುವುದಿಲ್ಲ. ವಿಕಸನದ ಪ್ರಕ್ರಿಯೆಯಲ್ಲಿ ಪ್ರಕೃತಿಯು ಪ್ರಮಾಣಾತ್ಮಕವಾಗಿ ಹೆಚ್ಚುವುದೂ ಇಲ್ಲ, ಕಮ್ಮಿಯಾಗುವುದೂ ಇಲ್ಲ. ದ್ರವ್ಯವನ್ನು ಸೃಷ್ಟಿಸುವುದೂ ಸಾಧ್ಯವಿಲ್ಲ, ನಾಶಗೊಳಿಸುವುದೂ ಸಾಧ್ಯವಿಲ್ಲ. ಎಲ್ಲ ದ್ರವ್ಯದ ಪೂರ್ಣ ಪ್ರಮಾಣ – ಅದರ ಎಲ್ಲ ವಾಸ್ತವಿಕ ಹಾಗೂ ಸಂಭಾವ್ಯಕ ಸ್ಥಿತಿಗಳು – ಯಾವತ್ತೂ ಸ್ಥಿರವಾಗಿ ಇರುತ್ತದೆ. ದ್ರವ್ಯದ ಮೂಲಘಟಕಗಳು ನಿರಂತರವಾಗಿ ಚಲನೆಯಲ್ಲಿರುತ್ತವೆ. ಈ ಚಲನೆಯು ಒಂದು ಘಳಿಗೆಯೂ ನಿಲ್ಲಲಾರದು. ದ್ರವ್ಯದಲ್ಲಾಗುವ



## ಒಂದು ಸ್ವಗತ

ನಮ್ಮಲ್ಲಿ ಏನೂ ಇಲ್ಲ
ಇರುವುದೊಂದನ್ನೇ ಮಾರಾಟಕ್ಕಿಟ್ಟಿದ್ದೇವೆ
ತಪ್ಪು-ಒಪ್ಪುಗಳ ಗೊಡವೆಯೇಕೆ ?
ಬದುಕಲೇ ಬೇಕು ನಾವು
ಬೇಡದ ಈ ಬದುಕಿನರಮನೆಯಲ್ಲಿ.

ನಾವು ರಾತ್ರಿರಾಣಿಯರು
ನಿತ್ಯಮುತ್ತೈದೆಯರು
ನಡುರಾತ್ರಿಯೂ ಸೊಡರಿನಡಿ
ಪೌಡರ್ ಮೆತ್ತಿ ಮೇಕಪ್‌ಗಿಳಿವವರು
ಹಣದ ಹಿಂದೋಡುವವರು.

ಮೀಸೆ ಮೂಡದವರಿಗೂ
ಜೊಲ್ಲು ಸುರಿಸುವವರಿಗೂ ಸಹಕರಿಸಿ
ಸರಕಾಗಿ, ಸೊರಗಿ ಬದುಕಲೇ ಬೇಕು ನಾವು
ಇದೇ ನಮ್ಮ ಜೀವನಾಧಾರ !

ಚೌಕಾಸಿಗಿಳಿವವರು, ಚಮಚಾಗಳು
ಪುಢಾರಿ, ಪುರೋಹಿತ, ಪಂಚತಾರಾ
ಪಟಾಲಂಗಳಿಗೆಲ್ಲಾ ಒಂದೇ ಪಲ್ಲಂಗ
ಮಾತನಾಡುತ್ತಲೇ ಇರುತ್ತದೆ ಅಂಗಾಂಗ.

ನೋಡಿ ಇಲ್ಲಿಗೆ ಬರುವವರು
ಜಾತಿ-ಧರ್ಮ, ಬಡವ-ಬಲ್ಲಿದ, ಮೇಲು-ಕೀಳು
ಭೇದ ತೊರೆದು ಬೆತ್ತಲಾಗುವವರು
ಸುತ್ತಮುತ್ತಲ ಬದುಕಿನಲಿ ಮೆರೆವವರು.

ಈಗೀಗ ಹಗಲೂ ವ್ಯಾಪಾರ ಜೋರು
ಇನ್ನೆಷ್ಟು ದಿನ ಅವರಿವರ ದರ್ಬಾರು.
ಇರುವುದೊಂದೇ ಯವ್ವನವೆ ಸಹಕರಿಸು
ಈ ಕ್ಷಣದ ಹಸಿವು ಅನುಭವಿಸು !
ಕಳೆದುಕೊಂಡ ಬದುಕಿಗೆ ಉತ್ತರಿಸು.

ಅರ್ಪಿತಾ ಮೇಗರವಳ್ಳಿ
೮೮ / ೪೨, ೩ ನೇ ಮುಖ್ಯರಸ್ತೆ, ೩ ನೇ ಅಡ್ಡರಸ್ತೆ
ಬನಶಂಕರಿ ೩ ನೇ ಹಂತ, ಭುವನೇಶ್ವರಿ ನಗರ

ಯಾವುದೇ ಪ್ರಕ್ರಿಯೆಯು, ಯಾವುದೇ ಬೆಳವಣಿಗೆ ಅಥವಾ ಅವನತಿಯು, ದ್ರವ್ಯದ ಪುನರ್‌ಹಂಚಿಕೆಯಲ್ಲದೆ ಬೇರೇನೂ ಅಲ್ಲ, ಅದು ಗತಕಾಲದಿಂದ ವರ್ತಮಾನಕ್ಕೆ, ವರ್ತಮಾನದಿಂದ ಭವಿಷ್ಯತ್ತಿಗೆ, ಸಂಭಾವ್ಯತೆಯಿಂದ ವಾಸ್ತವಿಕತೆಗೆ ಸ್ಥಿತ್ಯಂತರಗೊಳ್ಳುವುದಲ್ಲದೆ ಬೇರೇನೂ ಅಲ್ಲ, ವಸ್ತುವಿನಲ್ಲಿ ದ್ರವ್ಯರಾಶಿ ಹಾಗೂ ಶಕ್ತಿಯ ಪುನರ್‌ಹಂಚಿಕೆಯೇ ಭೌತ ಜಗತ್ತಿನಲ್ಲಿ – ಸಸ್ಯ ಹಾಗೂ ಪ್ರಾಣಿಜಗತ್ತಿನಲ್ಲಿ ಕಂಡುಬರುವ ಇಡೀ ವೈವಿಧ್ಯತೆಯನ್ನು ಉಂಟುಮಾಡುವಂತಹುದು.

ಪ್ರಕೃತಿಯಲ್ಲಿ ಬಿಡಿ ವಸ್ತುಗಳು ಹಾಗೂ ವಿದ್ಯಮಾನಗಳು ಜನ್ಮತಾಳುವ ಹಾಗೂ ವಿನಾಶಗೊಳ್ಳುವ ಪ್ರಕ್ರಿಯೆಯಲ್ಲಿ ಭೌತವಸ್ತುವಿನ (ದ್ರವ್ಯರಾಶಿಯ ಹಾಗೂ ಶಕ್ತಿಯ) ಪ್ರಮಾಣಗಳು ಹೆಚ್ಚಾಗುವುದೂ ಇಲ್ಲ, ಕಮ್ಮಿಯಾಗುವುದೂ ಇಲ್ಲ, ಆದರೆ ಅವು ಕೇವಲ ಪುನರ್‌ಹಂಚಿಕೆಗೊಳ್ಳಲ್ಪಡುತ್ತವೆ, ಎಂಬ ಈ ವಿಚಾರವನ್ನು ಪುರಾತನ ಭಾರತೀಯ ಚಿಂತಕರ ಕುಶಾಗ್ರಬುದ್ಧಿಯ ಒಂದು ಹೊಳಹು ಎಂದೇ ಭಾವಿಸಬಹುದು. ಏಕೆಂದರೆ, ಮುಂದಿನ ಆವಿಷ್ಕಾರಗಳೆಲ್ಲ ಇಂತಹ ಚಿಂತನೆಯ ಫಲಗಳೇ ಆಗಿವೆ. ಆಧುನಿಕ ಪ್ರಕೃತಿ ವಿಜ್ಞಾನದಲ್ಲಿನ 'ಶಕ್ತಿ ಹಾಗೂ ದ್ರವ್ಯರಾಶಿ ಸಂರಕ್ಷಣ ನಿಯಮ' (ದ್ರವ್ಯರಾಶಿ ಅಥವಾ ಶಕ್ತಿ ಒಂದು ರೂಪದಿಂದ ಇನ್ನೊಂದಕ್ಕೆ ಪರಿವರ್ತನೆಯಾಗಬಲ್ಲುದೇ ಹೊರತು ಅದರ ಸೃಷ್ಟಿ ಅಥವಾ ಲಯ ಸಾಧ್ಯವಿಲ್ಲ ಎಂಬ ನಿಯಮ) ಈ ಚಿಂತನೆಯ ಫಲಶ್ರುತಿಯೇ ಆಗಿದೆ. ಜಗತ್ತಿನ ಪುರಾತನ ಕಾಲದ ಚಿಂತನಕಾರರೆಲ್ಲರ ಚಿಂತನೆಯಲ್ಲೂ ಇಂತಹ ಭವಿಷ್ಯತ್ ಮುನ್ಸೂಚನೆಯ ಅನೇಕಾನೇಕ ಸತ್ಯಾಂಶಗಳು ಅಡಕವಾಗಿದ್ದು ಅವು ತದನಂತರ ವೈಜ್ಞಾನಿಕವಾಗಿ ಸಾಧಿತವಾಗಿ ಇರುವುದನ್ನು ನಾವು ಕಾಣಬಹುದೆಂದು ಏಂಗೆಲ್ಸ್‌ರವರು ಹೇಳಿರುವುದು ಪುರಾತಾನ ಭಾರತೀಯ ಚಿಂತಕರ ವಿಷಯದಲ್ಲೂ ಅನ್ವಯವಾಗುತ್ತದೆ.

ದ್ರವ್ಯರಾಶಿಯೂ ಅದರ ವಿಕಸನಶೀಲ ಬೆಳವಣಿಗೆಯ ನಿಯಮಗಳೂ ಅರ್ಥಗ್ರಾಹ್ಯ. ಮನುಷ್ಯನು ತನ್ನ ಸುತ್ತಮುತ್ತ ಇರುವ ವಸ್ತುಗಳ ಬಗೆಗೆ ತಿಳಿವಳಿಕೆಯನ್ನು ತನ್ನ ಪಂಚೇಂದ್ರಿಯಗಳ ಮೂಲಕ ಪಡೆಯುತ್ತಾನೆ.

ವಸ್ತುವಿನ ಇಡೀ ಅನಂತ ವೈವಿಧ್ಯತೆಯನ್ನು ಐದು ಮೂಲಭೂತ ರೂಪ ಅಥವಾ ಸಾರಗಳಾಗಿ ಪಂಚಭೂತಗಳಾಗಿ ವರ್ಗೀಕರಿಸಲಾಗಿದೆ.

ಅವೆಂದರೆ – ಆಕಾಶ, ಪೃಥ್ವಿ, ಅಪ್ಪು, ತೇಜಸ್ಸು ಹಾಗೂ ವಾಯು. ಸಾಂಖ್ಯಸಿದ್ಧಾಂತದ ಪ್ರಕಾರ ಈ ಜಗತ್ತು ಆವಿರ್ಭವಿಸಿದ ಪ್ರಕ್ರಿಯೆಯು, ವಸ್ತುವು ಹೆಚ್ಚು ನಾಜೂಕಾದ ಸ್ಥಿತಿಯಿಂದ ಅತ್ಯಂತ ಹೆಚ್ಚು ಸಾಂದ್ರಸ್ಥಿತಿ ತಲಪಿದ ವಸ್ತುವಿನ ಒಂದು ಸುವ್ಯವಸ್ಥಿತ ಬೆಳವಣಿಗೆ. ಈ ಸಾಂದ್ರಸ್ಥಿತಿಯ ವಸ್ತುಗಳನ್ನು 'ಮಹಾಭೂತಗಳು' ಎಂದು ಕರೆಯಲಾಗಿದೆ. ಈ 'ಭೂತ'ಗಳು ಗ್ರೀಕ್‌ನ 'ಧಾತು'ಗಳಿಗೆ ಸರಿಸಮ. ಆದರೆ ಒಂದು ಅಪವಾದವೆಂದರೆ ಗ್ರೀಕೋ – ರೋಮನ್ ತತ್ತ್ವಜ್ಞಾನದಲ್ಲಿ ಯಾವುದನ್ನು 'ಪಂಚಮ ಭೂತ' ಎಂದು ಕರೆಯಲಾಗುತ್ತದೋ ಅದು ಸಾಂಖ್ಯದಲ್ಲಿ 'ಪ್ರಥಮಭೂತ' (ಆಕಾಶ)ವಾಗಿದೆ.

ಸಾಂಖ್ಯ ಸಿದ್ಧಾಂತವು ಭೌತವಸ್ತುವಿನ ದಾರ್ಶನಿಕ ಪ್ರಕಲ್ಪನೆಯನ್ನು ನಿರೂಪಿಸಲು ಶ್ರದ್ಧಾಪೂರ್ವಕವಾಗಿ ಯತ್ನಿಸಿದ ಭಾರತದ ಪ್ರಪ್ರಥಮ ಹಾಗೂ ಬಹುಶಃ ಏಕೈಕ ದಾರ್ಶನಿಕ ಪಂಥವಾಗಿದೆ. ಈ ಪಂಥದ ತತ್ತ್ವಜ್ಞಾನಿಗಳು ಒಂದು ತಪ್ಪು ಮಾಡಿದರು – ಅವರು 'ಏಕ'ವನ್ನು 'ಸಾರ್ವತ್ರಿಕ'ದಿಂದ ಪ್ರತ್ಯೇಕಗೊಳಿಸಿದರು. ಆದರೆ ಅವರು ಎರಡೂ ವಾಸ್ತವಿಕ ಎಂದಂತೂ ಮನ್ನಿಸಿದುದು ಮುಖ್ಯವಾಗಿದೆ. ಅವರ ಅಭಿಪ್ರಾಯದಲ್ಲಿ ವಸ್ತು (ಪ್ರಕೃತಿ) ಎರಡು ಸ್ವತಂತ್ರರೂಪಗಳಲ್ಲಿ ಅಸ್ತಿತ್ವದಲ್ಲಿರುತ್ತದೆ: ಒಂದು ಸಾರ್ವತ್ರಿಕ, ಮತ್ತೊಂದು ಏಕ. ಇಲ್ಲೇ ಇವರ ಚಿಂತನೆಯಲ್ಲಿ ಆಧ್ಯಾತ್ಮಿಕಕ್ಕೆ ಅವಕಾಶ ಉಂಟಾದುದು.

ಮೊದಲ ರೂಪದ – 'ಸಾರ್ವತ್ರಿಕ' – ವಸ್ತುವು ಸಾರಯುತವಾದುದು. ಅದೇ ಈ ಜಗತ್ತಿನ ಎಲ್ಲ ವಸ್ತುಗಳಿಗೂ ಪ್ರಥಮ ಕಾರಣ. ಅದರಲ್ಲಿ ಗುಣಗಳು ಸಮತೋಲ ಸ್ಥಿತಿಯಲ್ಲಿರುತ್ತವೆ. ಆದ್ದರಿಂದ ಅದು ಗುಣರಹಿತ. ಹಾಗಾಗಿಯೇ ಮಾನವ ಅದನ್ನು ತನ್ನ ಇಂದ್ರಿಯಗಳ ಮೂಲಕ ತಿಳಿಯಲಾರ. ಆದ್ದರಿಂದ ಅದು ಅಜ್ಞಾತ. ಅದರ ಈ ಅಜ್ಞಾತ ಸ್ಥಿತಿಯು ಅದಕ್ಕೆ ಅದರ ಸೂಕ್ಷ್ಮತೆಯಿಂದ ಲಭಿಸುತ್ತದೆಯೇ ಹೊರತು ಅನಸ್ತಿತ್ವದಿಂದಲ್ಲ.

ಎರಡನೆಯ ರೂಪದ – ಏಕದ – ವಸ್ತುವು ದೇಶ ಕಾಲಗಳಲ್ಲಿ ವಿಕಾಸಗೊಳ್ಳುವ ಅಸಂಖ್ಯಾತ ಚಲಿಸುವ ವಸ್ತುಗಳು, ವಿದ್ಯಮಾನಗಳು ಹಾಗೂ ಘಟನೆಗಳು. ಈ ಏಕವು ಇಂದ್ರಿಯಗಳಿಂದ ತಿಳಿಯಲು ಲಭ್ಯ. ಅದು ಜ್ಞಾತ.

ಪ್ರಜ್ಞೆ ಎಂಬುದು ಹೇಗೆ ಹುಟ್ಟಿಕೊಂಡಿತು ಎಂಬುದೇ ಸಾಂಖ್ಯ ಕರ್ತೃಗಳಿಗೆ ಎಡವುವಂತೆ ಮಾಡಿದ ಅಡ್ಡಗಲ್ಲಾಗಿದ್ದಿತು. ರಾಮಮೋಹನರಾಯ್‌ರವರ ಪ್ರಕಾರ, ಕಪಿಲನು ಪ್ರಜ್ಞೆಯ ಮೂಲಕ್ಕೆ ವಿವರಣೆ ನೀಡಲೆಂದೇ 'ಪುರುಷ' ಎಂಬ ಪ್ರಕಲ್ಪನೆಯನ್ನು ಸೃಷ್ಟಿಸಿದ.

ಕಪಿಲನ ಪ್ರಕಾರ 'ಪುರುಷ' ಸರ್ವಜ್ಞ ಹಾಗೂ ಸೂಕ್ಷ್ಮಾತಿಸೂಕ್ಷ್ಮ ಅಲ್ಲದೆ ಪುರುಷ ಪ್ರಜ್ಞಾವಂತ. ಹಾಗಾಗಿಯೇ 'ಪ್ರಕೃತಿ'ಯಿಂದ ಭಿನ್ನ. ಪ್ರಕೃತಿಯಾದರೋ ಕಣ್ಣಿಗೆ ಕಾಣುವ ಭೌತಿಕ ವಸ್ತು. ಇದು ಕರ್ಮ, ಜ್ಞೇಯ. ಪುರುಷ ಕರ್ತೃ, ಜ್ಞಾತೃ. ತನ್ನ ಈ ಪರಿಕಲ್ಪನೆಗೆ ಎಲ್ಲಿ ಭಾವನಾತ್ಮಕ (ಆಧ್ಯಾತ್ಮಿಕ) ವ್ಯಾಖ್ಯಾನ ನೀಡಲಾಗುತ್ತದೋ ಎಂಬ ಅಂಜಿಕೆ ಕಪಿಲನಿಗಿತ್ತು. ಆದ್ದರಿಂದಲೇ ಅವನು ಆತ್ಮನಿಗೂ ಪುರುಷನಿಗೂ ನಡುವಿನ ಭಿನ್ನತೆಯನ್ನು ವಿವರಿಸಿದ. ಆತ್ಮನಂತಲ್ಲದೆ ಪುರುಷ ಏನನ್ನೂ ಸೃಷ್ಟಿಸುವುದಿಲ್ಲ, ಅದು ನಿಷ್ಕ್ರಿಯವಾದುದು, ಅದು ಒಂದು ನಿಷ್ಕ್ರಿಯಾತ್ಮಕ ಸಾಕ್ಷಿ ಅಷ್ಟೆ, ಇದಕ್ಕೆ ಪ್ರತಿಯಾಗಿ ಪ್ರಕೃತಿ ಕ್ರಿಯಾಶೀಲ, ಎಂದು ಮುಂತಾಗಿ ಅವನು ವಿವರಣೆ ನೀಡಿದ. ಪ್ರಕೃತಿಯು ಕ್ರಿಯೆಯ ಕರ್ತೃ. ತನ್ನಷ್ಟಕ್ಕೆ ತಾನೆ ವಿಕಾಸಗೊಳ್ಳುವ ಪ್ರಕ್ರಿಯೆಯಲ್ಲಿ ಪ್ರಕೃತಿ ಪುರುಷನೊಂದಿಗೆ ಸಂಪರ್ಕ ಪಡೆಯುತ್ತದೆ ಮತ್ತು ಕೊನೆಯಲ್ಲಿ ತನ್ನನ್ನು ತಾನೇ ಅರಿತುಕೊಳ್ಳುತ್ತದೆ. ಪುರುಷನಿಗೆ ಹೀಗೆ ತನ್ನನ್ನು ತಾನೇ ಅರಿತುಕೊಳ್ಳುವ ಸಾಮರ್ಥ್ಯವಿಲ್ಲ.

ಪ್ರಜ್ಞೆ ಹೇಗೆ ಹುಟ್ಟುತ್ತದೆ ಮತ್ತು ಅದರ ಸಾರವೇನು ಎಂಬುದಕ್ಕೆ ಸಂಬಂಧಿಸಿ ಸಾಂಖ್ಯ ಸಿದ್ಧಾಂತದಲ್ಲಿ ಅನೇಕ ಅಸಮಂಜಸತೆಗಳೂ ತಪ್ಪುಗಳೂ ಇದ್ದವು. ಇದನ್ನು ಧಾರ್ಮಿಕ ಸಂಪ್ರದಾಯವಾದಿಗಳು ಆ ಹಿಂದಿನ ಕಾಲದಲ್ಲೇ ದುರುಪಯೋಗಪಡಿಸಿಕೊಂಡರು. ತದನಂತರ ಮಧ್ಯಯುಗದಲ್ಲಿ ಗೌಡಪಾದ, ವಾಚಸ್ಪತಿ ಮಿಶ್ರ ಮತ್ತಿತರ ಕಪಿಲ ಸಿದ್ಧಾಂತ ವ್ಯಾಖ್ಯಾನಕಾರರೂ ಅನುಯಾಯಿಗಳೂ ಭಾವನಾವಾದಕ್ಕೆ ಮತ್ತಷ್ಟು ರಿಯಾಯಿತಿಗಳನ್ನು ತೋರಿದರು. ಆತ್ಮ ಎಂಬುದು ವಸ್ತುವಿನಿಂದ ಸ್ವತಂತ್ರವಾಗಿ ಅಸ್ತಿತ್ವದಲ್ಲಿರುತ್ತದೆ ಎಂಬ ಭಾವನೆಗೆ ಮನ್ನಣೆ ನೀಡಿದರು.

ಒಟ್ಟಿನಲ್ಲಿ ಈ ವಿಷಯಕ್ಕೆ ಸಂಬಂಧಿಸಿ ಸಾಂಖ್ಯಸಿದ್ಧಾಂತದಲ್ಲಿ ಅಸಂಗತತೆಗಳಿದ್ದುದು ಭಾವನಾವಾದಿಗಳಿಗೆ ಸಾಂಖ್ಯಸಿದ್ಧಾಂತವನ್ನು ಖಂಡಿಸಲು ಅವಕಾಶ ಮಾಡಿಕೊಟ್ಟಿತು. ಅದೇ ರೀತಿ ಈ ಅಸಂಗತತೆಗಳ ಕಾರಣದಿಂದಾಗಿ ಭೌತವಾದಿಗಳೂ ಸಾಂಖ್ಯಸಿದ್ಧಾಂತವನ್ನು ಖಂಡಿಸಿದರು.

ಡಾ|| ಸರ್ವಪಲ್ಲಿ ರಾಧಾಕೃಷ್ಣನ್‌ರವರು ಕಪಿಲನನ್ನು ಭಾವನಾವಾದದಿಂದ ಅಡ್ಡ ಸರಿದುದಕ್ಕಾಗಿ ಟೀಕಿಸುತ್ತಾರೆ: ''ಪ್ರಕೃತಿಗೆ ಸಂಬಂಧಿಸಿಯೂ ಅದು ಪುರುಷನಿಂದ ಸಂಪೂರ್ಣವಾಗಿ ಸ್ವತಂತ್ರವಾಗಿರುವುದಕ್ಕೆ ಸಂಬಂಧಿಸಿಯೂ ನಾವು ಸಾಂಖ್ಯ ಸಿದ್ಧಾಂತವನ್ನು ಒಪ್ಪಿಕೊಂಡಲ್ಲಿ, ಆಗ ಪ್ರಕೃತಿಯ ವಿಕಾಸಕ್ಕೆ ಸಂಬಂಧಿಸಿ ವಿವರಣೆ ನೀಡುವುದು ಅಸಾಧ್ಯವಾಗುತ್ತದೆ. ಸುಪ್ತ ಅಂತಸ್ಸಾಧ್ಯತೆಗಳಿಗೆ ಪ್ರಜ್ಞೆಯು ಯಾವುದೇ ರೀತಿಯ ನಿರ್ದೇಶನ ನೀಡದೆಯೇ ಅವು ಹೇಗೆ ಫಲಪ್ರದವಾಗುತ್ತವೆ ಎಂಬುದು ನಮಗೆ ತಿಳಿಯದಾಗುತ್ತದೆ.''

ಡಾ|| ಸರ್ವಪಲ್ಲಿ ರಾಧಾಕೃಷ್ಣನ್‌ರವರು ಹೀಗೆ ಹೇಳಿದರೆ ರಾಮಮೋಹನರಾಯ್‌ರವರು ಸಾಂಖ್ಯ ಸಿದ್ಧಾಂತವನ್ನು ಇದಕ್ಕೆ ವಿರುದ್ಧ ದಿಕ್ಕಿನಿಂದ ಟೀಕಿಸುತ್ತಾರೆ. ಬೆಳವಣಿಗೆಯ ಚಾರಿತ್ರಿಕತೆಯನ್ನು ನಿರಾಕರಿಸಿದುದೇ ಸಾಂಖ್ಯಸಿದ್ಧಾಂತದ ದೌರ್ಬಲ್ಯ ಎಂದವರು ಹೇಳುತ್ತಾರೆ. ಜಗತ್ತಿನ ಬೆಳವಣಿಗೆಯ ಒಂದು ನಿರ್ದಿಷ್ಟ ಘಟ್ಟದಲ್ಲಿ ಪ್ರಜ್ಞೆಯು (ಚೈತನ್ಯ) ವಸ್ತುಗಳಿಂದ ಉದ್ಭವವಾಗುತ್ತದೆ; ಪ್ರಮಾಣಾತ್ಮಕ ಬದಲಾವಣೆಗಳು ಒಂದಾನೊಂದು ಮಜಲು ತಲುಪಿದಾಗ ಗುಣಾತ್ಮಕ ಬದಲಾವಣೆಗಳಾಗಿ ಪರಿವರ್ತನೆಗೊಳ್ಳುತ್ತವೆ, ಹೊಸ ಗುಣಗಳನ್ನು ಉಂಟುಮಾಡುತ್ತವೆ – ಎಂದು ಸಾಂಖ್ಯ ಸಿದ್ಧಾಂತ ಪ್ರತಿಪಾದಿಸಿದ್ದಿದ್ದಲ್ಲಿ ಆಗ ಅದರಲ್ಲಿನ ಅಸಂಗತತೆಗಳೆಲ್ಲ ಮಾಯವಾಗುತ್ತಿದ್ದವು, ಎಂದು ರಾಮಮೋಹನರಾಯ್ ಹೇಳುತ್ತಾರೆ. ರಾಯ್‌ರವರು ಸಾಂಖ್ಯ ಸಿದ್ಧಾಂತದ ಚಾರಿತ್ರಿಕ-ವಿರೋಧಿ (ಆಧ್ಯಾತ್ಮಿಕ) ಗುಣವನ್ನು ಸರಿಯಾಗಿಯೇ ಟೀಕಿಸಿದರೂ ಅವರು ಸ್ವತಃ ಒಂದು ಶೋಚನೀಯ ತಪ್ಪು ಮಾಡುತ್ತಾರೆ – ಕಪಿಲನ ಭೌತವಾದವನ್ನು ೧೮ನೆಯ ಶತಮಾನದ ಫ್ರೆಂಚ್ ತತ್ತ್ವಜ್ಞಾನಿಗಳ ಭೌತವಾದದೊಂದಿಗೆ ತುಲನೆ ಮಾಡುತ್ತಾರೆ. ಇಲ್ಲಿನ ಮುಖ್ಯ ಸಂಗತಿ ಎಂದರೆ – ೧೮ನೆಯ ಶತಮಾನದ ಫ್ರೆಂಚ್ ಭೌತವಾದವು ಗುಣಾತ್ಮಕವಾಗಿ ಭಿನ್ನವಾದ ಯುಗದ, ಭಿನ್ನವಾದ ವರ್ಗದ ಚಾರಿತ್ರಿಕ ಉತ್ಪನ್ನವಾಗಿದ್ದಿತು. ಅದು ಒಳತಿರುಳಿನಲ್ಲಿ ಕಪಿಲನ ಭೌತವಾದದಿಂದ ಭಿನ್ನವಾಗಿದ್ದಿತು.

ಇದು ಸಾಂಖ್ಯಸಿದ್ಧಾಂತದ ಭೌತವಾದಕ್ಕೆ ಸಂಬಂಧಿಸಿ ಒಂದು ಸ್ಥೂಲ ವಿವರಣೆಯಾಗಿದೆ.

**ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಕ್ರಾಸ್, ಸಿ. ಟಿ. ಬೆಡ್, ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್
ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

# ಹಂಝು ಮಲಾರ್ ಅವರ ಕತೆಗಳು

ಕನ್ನಡದ ಹೊಸ ತಲೆಮಾರಿನ ಕತೆಗಾರರಲ್ಲಿ ಹಂಝು ಮಲಾರ್ ಅವರೂ ಒಬ್ಬರು. ತಮ್ಮ ಹದಿನೆಂಟರ ಹರೆಯದಲ್ಲಿ ಸಾಹಿತ್ಯಕ್ಷೇತ್ರಕ್ಕೆ ಪ್ರವೇಶಿಸಿದ ಮಲಾರ್ ಅವರು ಇದುತನಕ ಹತ್ತು ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ.

ಮಲಾರ್ ಅವರದು ಭಾಷಾಡಂಬರವಿಲ್ಲದ ಸರಳ ಶೈಲಿ. ಗೂಢಾರ್ಥ, ಸಂಕೇತಾರ್ಥಗಳಿಗಿಂತ ಕಂಡದ್ದನ್ನು ಕತೆಯಾಗಿ ಅರಳಿಸಿ ನೇರವಾಗಿ ಹೇಳುವುದು ಮಲಾರ್ ಅವರ ಕ್ರಮ. ಅಂತಲೆ ಅವು ಹೆಚ್ಚು ಜನರನ್ನು ಸುಲಭವಾಗಿ ತಲುಪಬಲ್ಲವು. ಮಲಾರ್ ಅವರ ಕತೆಗಳು ಕೆಲವೊಮ್ಮೆ ಒಂದು ರೀತಿಯ ಜೀವನ ಚರಿತ್ರೆಯ ಸ್ವರೂಪದಲ್ಲಿ, ಕತೆಯ ಹೊಳಪುಳ್ಳ ಪ್ರಬಂಧದ ಶೈಲಿಯಲ್ಲಿ ಇರುತ್ತವೆ. ಅವರ ಮೊದಲ ಕಥಾಸಂಕಲನ 'ಸೂಫಿ ಬ್ಯಾರಿಯ ಝಕಾತ್ ಯಾತ್ರೆ'ಯಲ್ಲಿನ ಅದೇ ಹೆಸರಿನ ಮೊದಲ ಕತೆಯೇ ಈ ಮಾತಿಗೆ ಸಾಕ್ಷಿಯಾಗುತ್ತದೆ. ಅಲ್ಲಿ ಕತೆಗಾರನೂ ಒಂದು ಪಾತ್ರದಂತೆ ಕಾಣಿಸಿಕೊಂಡು ಓದುಗನ ತನ್ಮಯತೆ ದಟ್ಟವಾಗಿಬಿಡುತ್ತದೆ. ಮಲಾರ್ ಅವರು ಈ ಶೈಲಿಯಲ್ಲಿ ಬರೆದಾಗ ಅದು ಕತೆಯಷ್ಟೆ ಆಗದೆ ಕಣ್ಣಿಗೆ ಕಟ್ಟುವಂತಹ ಒಂದು ಚಿತ್ರಣವನ್ನೂ ಕಟ್ಟಿಕೊಡಲು ಶಕ್ತವಾಗುತ್ತದೆ. ಉದಾಹರಣೆಗೆ ಈ ಮಾತುಗಳನ್ನು ಗಮನಿಸಿ :

ನಾನು ಸಂದರ್ಶಿಸಿ ಬರೆದವುಗಳನ್ನು ಓದಿ ತಿಳಿಸುವಂತೆ ಸೂಚಿಸಿದರು. ನಾನು ಓದಿದೆ. ತನ್ನ ಫೋಟೋವನ್ನು ಬದುಕಿನುದ್ದಕ್ಕೂ ಕಂಡಿರದ ಅವರು 'ಇದನ್ನೊಮ್ಮೆ ಚಂದ ಮಾಡಿಕೊಡು. ನೋಡಿಬಿಡುವೆ' ಎಂದು ಕೂಡ ಆಸೆಯಿಂದ ನುಡಿದರು.

ನಾನು ಹೊರಡಲನುವಾದೆ. 'ಈಗ ನೀನು ಇಷ್ಟು ಬರೆದೆಯಲ್ಲ, ಅದನ್ನು ಏನು ಮಾಡುವೆ ?' ಅಂತ ಬಲು ಉತ್ಸಾಹದಿಂದ ಕಣ್ಣಗಲಿಸಿ ಯಾಚಿಸಿದರು. 'ಪತ್ರಿಕೆಯಲ್ಲಿ ಪ್ರಕಟಿಸುವೆ' ಎಂದೆ. 'ಹಾಗಾದರೆ, ನನಗೊಂದು ಕಳುಹಿಸಿಕೊಡು' ಎಂದರು – (ಸೂಫಿ ಬ್ಯಾರಿಯ ಝಕಾತ್ ಯಾತ್ರೆ – ಪು. ೫)

ಸೂಫಿ ಬ್ಯಾರಿ ಒಬ್ಬ ಅವಧೂತನಂತೆ ಬಾಳುತ್ತಿರುವ ವ್ಯಕ್ತಿ. ಬದುಕಿಡೀ ನೋವು ಅನುಭವಿಸಿದ ಜೀವ. ಅಂಥವನನ್ನು ಪತ್ರಿಕೆಯವನೊಬ್ಬ ಸಂದರ್ಶಿಸಲು ಬಂದು ಅವನ ಫೊಟೋ ಪ್ರಕಟವಾಗುತ್ತದೆಂದು ತಿಳಿದಾಗ ಅವನಿಗಾಗುವ ಆನಂದ, ಆಶೆ, ನಿರೀಕ್ಷೆಗಳು ಒಂದು ಭಾವವಾಗಿ ಓದುಗನನ್ನು ಕಾಡುವುದಲ್ಲದೆ ವ್ಯಕ್ತಿತ್ವವೊಂದರ ದೃಶ್ಯವನ್ನು ಕಣ್ಣೆದುರಿಗೆ ಕಟ್ಟಿಕೊಡುತ್ತದೆ. ಇಂತಹ ಸೂಫಿ ಬ್ಯಾರಿ ಪೊನ್ನಾನಿಗೆ ಹೋಗಿ ಅಲ್ಲೇ ಮಡಿದು ಕಟ್ಟಕಡೆಗೂ ಪತ್ರಿಕೆಯಲ್ಲಿ ಪ್ರಕಟವಾದ ತನ್ನ ಫೊಟೋ ನೋಡಲು ಸಾಧ್ಯವಾಗಲಿಲ್ಲ ಎನ್ನುವುದರ ಮೂಲಕ ಮಲಾರ್ ತಾವು ಕ್ರಿಯೇಟ್ ಮಾಡಿದ ಸನ್ನಿವೇಶವನ್ನು ಬಹು ಗಾಢವಾಗಿ ಓದುಗನಲ್ಲಿ ನೆಲೆನಿಲ್ಲುವಂತೆ ಮಾಡುತ್ತಾರೆ.

ಇದೇ ತೆರನಾದ ಆದರೆ ಇದಕ್ಕಿಂತ ಕೊಂಚ ವಸ್ತು ವಿನ್ಯಾಸದಲ್ಲಿ ಭಿನ್ನತೆಯುಳ್ಳ 'ಕೆಂಪುಕಣ್ಣಿನ ಹುಡುಗಿ' ಕಥಾಸಂಕಲನದ 'ನಮ್ಮನೆಯೊಳಗೊಬ್ಬ ರಾಮಣ್ಣ' ಬಹುವಾಗಿ ಆಕರ್ಷಿಸುತ್ತದೆ. 'ಸೂಫಿ ಬ್ಯಾರಿಯ ಝಕಾತ್ ಯಾತ್ರೆ'ಯಲ್ಲಿ ವ್ಯಕ್ತಿಯೊಬ್ಬನ ಅಂತರಂಗದ ತಲ್ಲಣಗಳು ಪ್ರಧಾನವಾಗಿದ್ದರೆ 'ನಮ್ಮನೆಯೊಳಗೊಬ್ಬ ರಾಮಣ್ಣ'ದಲ್ಲಿ ವ್ಯಕ್ತಿಯ ತಲ್ಲಣಗಳಿಗೆ ಸಮುದಾಯ ಯಾವ ರೀತಿ ಪ್ರತಿಕ್ರಿಯಿಸುತ್ತದೆ ಎಂಬುದರ ಚಿತ್ರಣವಿದೆ. ಜೊತೆಗೆ ಇಲ್ಲಿ ಬರುವ ಹಿಂದೂ-ಮುಸ್ಲಿಂ ಎನ್ನುವ ಎರಡು ಸಮುದಾಯಗಳ ಕೊಡುಕೊಳ್ಳುಗಳು, ಹೊಂದಾಣಿಕೆ-ಸಾಮರಸ್ಯ ಕತೆಯನ್ನು ಉನ್ನತ ಮಟ್ಟಕ್ಕೆ ಒಯ್ಯುತ್ತವೆ. ಈ ರೀತಿಯ ಕತೆಗಳಿಗಿಂತ ಭಿನ್ನವಾಗಿ ಮಲಾರ್ ಅವರು ನೆರೇಟಿವ್ ಮೆಥಡ್ ಅನ್ನೇ ಬಹುವಾಗಿ ಆಧರಿಸಿ ಬರೆಯುವುದಿದೆ. 'ಬಿಳಿಗಡ್ಡದ ಮನುಷ್ಯ' ಅದೇ ಹೆಸರಿನ ಕತೆ. 'ಅಮಿನಮ್ಮರ ಹಸು', 'ಅಪನಂಬಿಕೆ', 'ಬೂದಿಮುಚ್ಚಿದ ಕೆಂಡ'ದ 'ಸಂತ ಬರೆದ ಪತ್ರ', 'ನೀಲಿಕಣ್ಣಿನ ಬಿಳಿಹುಡುಗ'ದ, 'ಇಫ್ತಾರ್', 'ಸಿಂಧಿ ಅಜ್ಜನ ಡೋಲು'ದ ಅದೇ ಹೆಸರಿನ ಕತೆ, 'ಹೊಳಪು ಕೆನ್ನೆಯವಳು', 'ಒಬ್ಬ ದೇಶಪ್ರೇಮಿಯ ಒಲವು'ನ ಹೆಚ್ಚಿನ ಎಲ್ಲ ಕತೆಗಳು, 'ಹೂ ಮನಸ್ಸಿನ ಕಥೆಗಾರ'ದ 'ಪಡೆದವನೇ...', 'ಭಿಕ್ಷುಕ', 'ಬಿಸಿಲಿಗೆ ಕೊಡೆಹಿಡಿದವರು', 'ಮಾಂಸ ತೂಗುವ ಹುಡುಗ'ದ ಅದೇ ಹೆಸರಿನ ಕತೆ 'ಅಪರಾಧಿ', 'ಬೆದರಿದ ಹರಿಣಿ', 'ಕುಸಿದುಬಿದ್ದ ಜಾತಿಗೋಡೆ', 'ಕೆಂಪುಕಣ್ಣಿನ ಹುಡುಗಿ'ದ ಅದೇ ಹೆಸರಿನ ಕತೆ, 'ಬಲ್ಕೀಸ್', 'ಯತೀಂ ಹುಡುಗ', 'ರಣಕಹಳೆ', 'ಸೈತಾನನ ದಿನಗಳು' ದ ಬಹುತೇಕ ಕತೆಗಳು ಈ ಶೈಲಿಯಲ್ಲಿವೆ. ಅಲ್ಲಿನ ಸಂಭಾಷಣೆ, ಸನ್ನಿವೇಶಗಳಲ್ಲಿ ಕತೆಗಾರ ಮುಂದೆ ನಿಂತು ಪಾತ್ರಗಳು ಹಿಂದೆ ಸರಿಯುತ್ತವೆಯಾದ್ದರಿಂದ ಒಂದರ್ಥದಲ್ಲಿ ಅದೂ ಸಹ ನೆರೇಟಿವ್ ಮೆಥಡ್ ಆಗಿಬಿಡುತ್ತದೆ.

ಈ ರೀತಿಯ ಕತೆಗಳಲ್ಲಿ ಎರಡು ಸ್ಥಿತಿಗಳನ್ನು ಕಾಣಬಹುದು. ಮೊದಲನೆಯದು, ಕತೆಗಾರನ ಮುಕ್ತ ಅವಲೋಕನದಲ್ಲಿ ದಕ್ಕುವಂತಹ ಕತೆಗಳು. 'ನೀಲಿಕಣ್ಣಿನ ಬಿಳಿಹುಡುಗ', 'ಹೂ ಮನಸ್ಸಿನ ಕಥೆಗಾರ', 'ಕೆಂಪುಕಣ್ಣಿನ ಹುಡುಗಿ', 'ಮಾಂಸ ತೂಗುವ ಹುಡುಗ' ಕಥಾಸಂಕಲನಗಳಲ್ಲಿ ಹೆಚ್ಚಿನ ಕತೆಗಳಲ್ಲಿ ಈ ಸ್ಥಿತಿಯನ್ನು ಕಾಣಬಹುದು. 'ಕೆಂಪುಕಣ್ಣಿನ ಹುಡುಗಿ'ದ ಮೂಲಕ ಈ ಅಂಶವನ್ನು ಸ್ಪಷ್ಟಪಡಿಸಬಹುದು.

'ಕೆಂಪುಕಣ್ಣಿನ ಹುಡುಗಿ' ಮಹಿಳಾವಾದಿ ನೆಲೆಯಲ್ಲಿ ಬಂದಿರುವ ವಿಚಾರಪ್ರಧಾನ ಕತೆಯಾಗಿದೆ. ಇಲ್ಲಿನ ದಟ್ಟ ವೈಚಾರಿಕತೆ ಮತ್ತು ಧರ್ಮದ ನಡುವಿನ ಹೊಂದಾಣಿಕೆ ಸಮರ್ಪಕವಾಗಿದ್ದು ಧರ್ಮದ ಆಧಾರದಲ್ಲೇ ವೈಚಾರಿಕತೆಯನ್ನು ಅನಾವರಣಗೊಳಿಸಲಾಗಿದೆ. ನಾಯಕಿ ಶಬಾನಳ ಸುತ್ತ ಇರುವ ಸೀದಿಯಾಕ, ಮೋಲುದಾದರಂತಹ ಪಾತ್ರಗಳಿಗೆ ಜೀವಂತಿಕೆ ಇದೆ. 'ರಣಕಹಳೆ'ಯ ವಹಾಬ್, 'ಯತೀಂ ಹುಡುಗ'ದ ಹಿದಾಯತ್, 'ಬಲ್ಕೀಸ್'ದ ಬಲ್ಕೀಸ್‌ನಂತಹ ಪಾತ್ರಗಳು ತೆರೆದಿಡುವ ಜೀವನ ಸತ್ಯಗಳು ಅದ್ಭುತವಾದವುಗಳು. ಕಿಡ್ನಿ ಮಾರಿ ಹಣತರುವ ಬಲ್ಕೀಸ್ ಮೂಲಕ ಒಂದು ಸಾಮಾಜಿಕ ಸ್ಥಿತಿಯಲ್ಲಿ ಹೆಣ್ಣು ಮಗಳೊಬ್ಬಳಿಗೆ ಬಡತನವು ತರುವ ಜವಾಬ್ದಾರಿ, ಆಕೆಯ ತಲ್ಲಣಗಳು, ಅದನ್ನಾಕೆ ನಿಭಾಯಿಸುವ ದುರಂತ ಪರಿಯನ್ನು ಕಂಡರಿಸುತ್ತದೆ. ಮಲಾರ್ ಈ ರೀತಿಯ ಕತೆಗಳಲ್ಲಿ ಹೆಚ್ಚಾಗಿ ಸಮಾಜದಿಂದ ಉಂಟಾಗುವ ವ್ಯಕ್ತಿಯ ತಲ್ಲಣಗಳನ್ನು ಹೇಳುತ್ತಾರೆ ಹೊರತು ತೀರಾ ಅಂತರ್ಮುಖಿಯಾಗಿ ನೋಡುವುದು ಕಡಿಮೆ. ಆದರೆ 'ಯತೀಂ ಹುಡುಗ' ಅವರ ಈ ಕ್ರಮಕ್ಕೆ ಭಿನ್ನವಾದ ಕತೆಯಾಗಿದೆ. ತಂದೆ ತಾಯಿ ಇಲ್ಲದ ಹಿದಾಯತ್ ಕಥಾನಾಯಕನ ಔದಾರ್ಯದಿಂದ ಸಾಕಲ್ಪಡುತ್ತಾನೆ. ಪುಂಡು ಪೋಕರಿಯಾದ ಹಿದಾಯತ್ ಒಬ್ಬ ವಿಲನ್ ಆಗಿ ರೂಪುಗೊಳ್ಳುತ್ತಾನೆಂದು ವಾಚಕ ಊಹಿಸಿದರೆ ಅದು ತಪ್ಪಾಗುತ್ತದೆ. ಬದುಕಿನ ಅನುಭವಗಳು ಅವನನ್ನು ಹೃದಯವಂತ ವ್ಯಕ್ತಿಯಾಗಿ ರೂಪಿಸುತ್ತವೆ. ಹೀಗೆ ರೂಪುಗೊಳ್ಳುವಲ್ಲಿ ವ್ಯಕ್ತವಾಗುವ ಕ್ರಿಯೆ-ಪ್ರತಿಕ್ರಿಯೆಗಳು ವ್ಯಕ್ತಿಯ ಅಂತರ್ಮುಖಿ ದರ್ಶನವನ್ನೂ ಮಾಡಿಸುತ್ತವೆ. ಇವೆಲ್ಲ ಮಲಾರ್ ಅವರು ಬದುಕನ್ನು ಮುಕ್ತವಾಗಿ ಕಂಡು ಬರೆದಿರುವ ಕ್ರಿಯಾತ್ಮಕ ಪ್ರತಿಕ್ರಿಯೆಯಾಗಿದೆ. ಹೆಚ್ಚು ಕ್ರಿಯಾತ್ಮಕ ಧೋರಣೆ ತಳೆದಾಗಲೆಲ್ಲ ಮಲಾರ್ ಯಶಸ್ವಿಯಾಗುತ್ತಾರೆ.

ಮಲಾರ್ ಅವರು ಪ್ರತಿಕ್ರಿಯಾತ್ಮಕ ಧೋರಣೆಯನ್ನೇ ಇರಿಸಿಕೊಂಡು ಬರೆದಿರುವ ಕತೆಗಳಿವೆ. ಇಂತಹ ಬಹುತೇಕ ಕತೆಗಳು ಸದ್ಯದ ಕೋಮುವಾದಿ ಸನ್ನಿವೇಶವನ್ನು ಆಧರಿಸಿವೆ. 'ಒಬ್ಬ ದೇಶಪ್ರೇಮಿಯ ಒಲವು' ಕಥಾಸಂಕಲನದ ಕೆಲ ಕತೆಗಳು ಇದಕ್ಕೆ ಉದಾಹರಣೆಯಾಗುತ್ತವೆ. ಮುಸಲ್ಮಾನ ಯುವಕನೊಬ್ಬನ ದೇಶಪ್ರೇಮದ ಬಗ್ಗೆ ಸಮಾಜ ಅನುಮಾನಿಸುವುದರಿಂದ ಪ್ರಾರಂಭವಾಗಿ ಆತ ಗಡಿ ಕಾಯುವ ಯೋಧನಾಗಿ ದೇಶಕ್ಕಾಗಿ ಬಲಿದಾನಮಾಡುವಲ್ಲಿಗೆ ಮುಕ್ತಾಯವಾಗುವುದು. ಅದೇ

ಮಲಾರ್ ಅವರ ಕತೆಗಳಲ್ಲಿ ದಟ್ಟ ವೈಚಾರಿಕ ಪ್ರಜ್ಞೆ ಇದೆ. ಆದರದು ಬಂಡಾಯಕಾಲದ ಬರಹಗಳಂತೆ, 'ಎಲ್ಲವನ್ನೂ ಆಸ್ಫೋಟಿಸಿಬಿಡುತ್ತೇನೆ' ಎನ್ನುವ ಧಾವಂತವಲ್ಲ, ತಾನು ನಂಬುವ ವೈಚಾರಿಕತೆಯಿಂದ ಎಲ್ಲವನ್ನೂ ಸಾಧಿಸಿಯೇನು ಎನ್ನುವ ಭಾವನೆ ಅವರಲ್ಲಿಲ್ಲ, ಆದ್ದರಿಂದಲೇ ಮಲಾರ್ ಅವರ ಕತೆಗಳಲ್ಲಿ ಬಹು ಆಪ್ತವಾಗುವ ಸಮನ್ವಯ ಮಾರ್ಗವನ್ನು ಕಾಣಬಹುದಾಗಿದೆ. ಇರುವ ಮತ್ತು ಇಲ್ಲದೆ ಇರುವುದರ ಮಧ್ಯೆ ತಮ್ಮದೇ ಆದ ದಾರಿಯನ್ನು ಅನ್ವೇಷಣೆ ಮಾಡುತ್ತಾ ಹೋಗುವ ಮಲಾರ್ ಅವರ ಕತೆಗಳು ಬಂಡಾಯೋತ್ತರ ನವಪಥದ ಹುಡುಕಾಟದಲ್ಲಿ ಬಹಳ ಮುಖ್ಯವಾಗುತ್ತವೆ.

ಅರವಿಂದ ಚೊಕ್ಕಾಡಿ

> **ಹಂಝು ಮಲಾರ್‌ರ ಮೋಲಾಂಜಿ, ಬ್ಯಾರಿ ಮುಸ್ಲಿಮರು ಎಂಬ ಅಧ್ಯಯನಗಳು ಒರು ಪೆನ್ಣ್‌ರೆ, ಕಿನಾವು, ಬದ್‌ಶ್‌ದ ಕನ (ತುಳು ಕಾದಂಬರಿ), ಅರಬಿ ಕಡಲಿಗೆ ಪರದೆ, ಫಾತಿಮಳ ಕನಸು, ಕೋಟಿ ಚೆನ್ನಯ, ಮುಗುಳ್ನಗೆ ಎಂಬ ಕಾದಂಬರಿಗಳು ಮತ್ತು ಹತ್ತಾರು ಕಥಾ ಸಂಕಲನಗಳು ಪ್ರಕಟವಾಗಿವೆ.**

ಹೊತ್ತಿನಲ್ಲಿ ಹಿಂದೂ ಮತೀಯವಾದಿಗಳು ಅವನ ಕುಟುಂಬವನ್ನು ಬಲಿಹಾಕುವುದು, ಇಂತಹ ಕತೆಗಳು ಚೆನ್ನಾಗಿವೆ. ಆದರೆ ಕತೆಗಾರನೊಬ್ಬನ ಸೂಕ್ಷ್ಮಜ್ಞತೆಗಿಂತ ಹೆಚ್ಚಾಗಿ ಮುಸ್ಲಿಂ ಸಮುದಾಯದ ವ್ಯಕ್ತಿಯೊಬ್ಬ ಸಮುದಾಯದ ಪ್ರತಿನಿಧಿಯಾಗಿ ನಿಂತು ದೇಶಪ್ರೇಮವನ್ನು ಸಾಬೀತು ಪಡಿಸಲು ಹಠತೊಟ್ಟಂತೆ ಭಾಸವಾಗುತ್ತದೆ. ಆದ್ದರಿಂದಲೇ ಇಂತಹ ಕತೆಗಳನ್ನು ಸರಿಕಾಲದ ವಿದ್ಯಮಾನವು ಅಲ್ಪಸಂಖ್ಯಾತ ಸಮುದಾಯದಲ್ಲಿ ಹುಟ್ಟಿಸುವ ಭಾವನೆಗಳಿಗೆ ನಿದರ್ಶನವೆಂದು ಸ್ವೀಕರಿಸಿದರೆ ಸೂಕ್ತವಾಗುತ್ತದೆ. ಈ ಕತೆಗಳಲ್ಲಿ ಪ್ರತಿಕ್ರಿಯಾತ್ಮಕ ಧೋರಣೆಗಳು ಹೆಚ್ಚು ಇವೆ. ಆಗೆಲ್ಲ ಮಲಾರ್ ಅವರು ಕೊಂಚ ಉದ್ವಿಗ್ನರಾಗುತ್ತಾರೆ. ಅದರಿಂದಾಗಿ ಕಥಾಹಂದರ ಕೊಂಚ ತೆಳುವಾಯಿತೇನೋ ಅಂತ ಅನಿಸಿದರೆ ತಪ್ಪೇನಿಲ್ಲ. ಕ್ರಿಯಾತ್ಮಕವೂ ಅಲ್ಲದ-ಪ್ರತಿಕ್ರಿಯಾತ್ಮಕವೂ ಅಲ್ಲದ ಕೆಲ ಕತೆಗಳನ್ನು ಮಲಾರ್ ಅವರು ಬರೆದಿದ್ದಾರೆ. ಅವೆಲ್ಲ ಹೆಚ್ಚಾಗಿ ಇಸ್ಲಾಮಿಕ್ ಫಿಲಾಸಫಿಯನ್ನು ಆಧರಿಸಿರುವಂಥವು. 'ಸೈತಾನನ ದಿನಗಳು' ಕಥಾ ಸಂಕಲನದಲ್ಲಿ ಇಂತಹ ಕತೆಗಳು ಜಾಸ್ತಿ ಇವೆ. ಇಸ್ಲಾಮಿಕ್ ಫಿಲಾಸಫಿ ಹೆಚ್ಚು ಪರಿಚಯವಿಲ್ಲದ ಸ್ಥಿತಿಯಲ್ಲಿ ಈ ಕತೆಗಳು ಬಹಳ ಉಪಯುಕ್ತವಾಗಿವೆ. ಆದರೆ ಫಿಲಾಸಫಿಯ ಬಗ್ಗೆ ಒಂದಷ್ಟು ತಿಳಿವಳಿಕೆ ಇಲ್ಲದವರಿಗೆ ಈ ಕತೆಗಳು ಕಠಿಣವೆನಿಸುವ ಸಾಧ್ಯವಿದೆ. ಯಾಕೆಂದರೆ, ಈ ಕತೆಗಳಲ್ಲಿ ಸಹಜವಾಗಿಯೇ ಮಲಾರ್ ಅವರ ತತ್ವಜ್ಞಾನದ ತಿಳಿವಳಿಕೆ ವಿಹಾರಮಾಡಿ ಕತೆ ಕೊಂಚ ಬದಿಗೆ ಸರಿದುಬಿಡುತ್ತದೆ. ಅರ್ಥಾತ್ ಮಾಂಸಕ್ಕೆ ಚರ್ಮದ ಹೊದಿಕೆಯಿರುವಂತೆ ಫಿಲಾಸಫಿಗೆ ಕತೆಯ ಹೊದಿಕೆಯನ್ನು ತೊಡಿಸಲು ಮಲಾರ್ ಅವರಿಗೆ ಸ್ವಲ್ಪ ತೊಂದರೆಯಾಗಿದ್ದು ಫಿಲಾಸಫಿಯೂ ಕತೆಯೂ ಬೇರೆಬೇರೆಯಾಗಿಯೇ ನಿಲ್ಲುತ್ತವೆ. ಬದುಕಿನಲ್ಲಿ ಕಂಡುಂಡು ಅನುಭವಿಸಿದ ಸನ್ನಿವೇಶಗಳ ಮೇಲೆ ಲೀಲಾಜಾಲವಾಗಿ ಕತೆಕಟ್ಟಬಲ್ಲ ಮಲಾರ್ ಅವರಿಗೆ ಫಿಲಾಸಫಿಯ ಮೇಲೆ ಕತೆಕಟ್ಟಲು ಕೊಂಚ ಕಷ್ಟವಾಗುತ್ತದೆ. ಆದರೂ ಫಿಲಾಸಫಿಯ ಬಗ್ಗೆ ಅವರಿಗಿರುವ ಆಳ ತಿಳಿವಳಿಕೆಗಾಗಿ ಅವರನ್ನು ಅಭಿನಂದಿಸಬೇಕು.

ಮಲಾರ್ ಅವರ ಕತೆಗಳಲ್ಲಿ ದಟ್ಟ ವೈಚಾರಿಕ ಪ್ರಜ್ಞೆ ಇದೆ. ಆದರದು ಬಂಡಾಯಕಾಲದ ಬರಹಗಳಂತೆ, 'ಎಲ್ಲವನ್ನೂ ಆಸ್ಫೋಟಿಸಿಬಿಡುತ್ತೇನೆ' ಎನ್ನುವ ಧಾವಂತವಲ್ಲ. ತಾನು ನಂಬುವ ವೈಚಾರಿಕತೆಯಿಂದ ಎಲ್ಲವನ್ನೂ ಸಾಧಿಸಿಯೇನು ಎನ್ನುವ ಭಾವನೆ ಅವರಲ್ಲಿಲ್ಲ. ಆದ್ದರಿಂದಲೇ ಮಲಾರ್ ಅವರ ಕತೆಗಳಲ್ಲಿ ಬಹು ಆಪ್ತವಾಗುವ ಸಮನ್ವಯ ಮಾರ್ಗವನ್ನು ಕಾಣಬಹುದಾಗಿದೆ. ಇರುವ ಮತ್ತು ಇಲ್ಲದೆ ಇರುವುದರ ಮಧ್ಯೆ ತಮ್ಮದೇ ಆದ ದಾರಿಯನ್ನು ಅನ್ವೇಷಣೆ ಮಾಡುತ್ತಾ ಹೋಗುವ ಮಲಾರ್ ಅವರ ಕತೆಗಳು ಬಂಡಾಯೋತ್ತರ ನವಪಥದ ಹುಡುಕಾಟದಲ್ಲಿ ಬಹಳ ಮುಖ್ಯವಾಗುತ್ತವೆ.

ಬ್ಯಾರಿ ಜನಪದದ ಬಗ್ಗೆ ವಿಪುಲವಾದ ತಿಳಿವಳಿಕೆ ಉಳ್ಳ, ಆ ಬಗ್ಗೆ ಪುಸ್ತಕವನ್ನೂ ಬರೆದಿರುವ ಮಲಾರ್ ಅವರ ಕತೆಗಳಲ್ಲಿ ಬ್ಯಾರಿ ಸಂಸ್ಕೃತಿಯ ಮುಕ್ತ ಪ್ರವಾಹವಿದೆ. 'ಸೂಫಿ ಬ್ಯಾರಿಯ ಜ಼ಕಾತ್ ಯಾತ್ರೆ'ಯಲ್ಲಿನ ಸೂಫಿ ಬ್ಯಾರಿಯ ಚಿತ್ರಣವೇ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿದೆ. ಹಾಗೆಯೇ ಮಲಾರ್ ಅವರು ಕಂಡರಿಸುವ ಪಾತ್ರಗಳೆಲ್ಲದರಲ್ಲಿ ಒಂದು ವೈಶಿಷ್ಟ್ಯವಿದೆ. ಅವರ ಕತೆಗಳಲ್ಲಿ ಬರುವುದೆಲ್ಲ ಬೀಡಿಕಟ್ಟುವ ಮಹಿಳೆಯರು, ವಿಧವೆಯರು, ಕೂಲಿಗಳು, ಅನಾಥರು, ಸಾಮಾಜಿಕ ನ್ಯಾಯದಿಂದ ವಂಚಿತರಾದವರು. ಆರ್ಥಿಕ ಶ್ರೀಮಂತಿಕೆಯ ಹಿನ್ನೆಲೆ ಅವರ ಯಾವ ಕತೆಗಳಿಗೂ ಪ್ರಧಾನವಸ್ತುವಾಗಿಲ್ಲ. ಎಲ್ಲೋ ಅಲ್ಲಲ್ಲಿ ಕಥಾವಸ್ತುವಿಗೆ ತಿರುವು ಕೊಡುವುದಕ್ಕಾಗಿ ಮಾತ್ರ ಅಂತಹ ಪಾತ್ರಗಳು ಬರುತ್ತವೆ. ಇಂಥಲ್ಲಿ ಮಲಾರ್ ಅವರು ಬಡವರ್ಗದ ಬದುಕಿನ ಬಗ್ಗೆ ಅತೀವ ಕಾಳಜಿ ವಹಿಸುತ್ತಾರೆ ಎಂಬುದನ್ನು ಗಮನಿಸಬೇಕು. ಬಡವರ್ಗವು ಮುಸ್ಲಿಂ ಸಮಾಜದ ಹಿನ್ನೆಲೆಯಲ್ಲಿ ಕಂಡಾಗ ಅಲ್ಲಿರುವ ಸಾಂಸ್ಕೃತಿಕ ಸ್ಥಿತಿಗತಿಗಳು ಇಲ್ಲಿವೆ. ಅಂತಹ ಹಿನ್ನೆಲೆಯಲ್ಲಿ ರೂಪು ತಳೆಯುವ ಮನುಷ್ಯ ಸಂಬಂಧಗಳು, ಹೃದಯವಂತಿಕೆ, ಕೋಪ-ರೋಷ-ಆವೇಶ ಇವೆಲ್ಲದರ ನಡುವೆ ಬಲು ಸೂಕ್ಷ್ಮವಾಗಿ ಸಾಂಸ್ಕೃತಿಕ ಅನನ್ಯತೆ ತೆರೆದುಕೊಳ್ಳುತ್ತದೆ. 'ಹೂ ಮನಸಿನ ಕತೆಗಾರ'ದ 'ಕಲ್ಪನಾಲೋಕ'ದಲ್ಲಿನ ಬರ್ಕತುನ್ನೀಸಾ, 'ಕಾಲೆಳೆಯುವವರು'ದ ಗುಲಾಮ್ ಬ್ಯಾರಿ, 'ಮಾಂಸ ತೂಗುವ ಹುಡುಗ'ದ 'ಕುಸಿದುಬಿದ್ದ ಜಾತಿಗೋಡೆ'ಯಲ್ಲಿನ ಅಬ್ಬಾಸ್ ಹಾಜಿಯಂತಹ ಬೇಕಷ್ಟು ಪಾತ್ರಗಳನ್ನು ಉದಾಹರಣೆಯಾಗಿ ಕೊಡಬಹುದು. ಮಲಾರ್ ಅವರು ಬಡತನದಿಂದ ಕಳೆದುಕೊಳ್ಳುವಂಥದ್ದನ್ನು ಹೇಳುವ ಹಾಗೆ ಪಡೆದುಕೊಳ್ಳುವಂಥಾದ್ದನ್ನೂ ಗಮನಿಸುತ್ತಾರೆ; ಈ ನಡುವೆ ಇರುವ ಬದುಕನ್ನು ಕಟ್ಟಿಕೊಡುತ್ತಾರೆ.

ನಮ್ಮ ಸಾಹಿತ್ಯ ಪ್ರಕಾರಗಳಲ್ಲಿ ಮುಸ್ಲಿಂ ಸಮಾಜದ ಅಂತರಂಗದ ಚಿತ್ರಣಗಳು ಬಂದಿರುವುದು ಬಹಳ ಕಡಿಮೆ. ಅಂಥಲ್ಲಿ ಒಟ್ಟು ಸಮಾಜದ ಒಂದು ಪ್ರಧಾನ ಅಂಗವಾಗಿ ಮುಸ್ಲಿಂ ಸಮಾಜದ ಒಳ ಹೊರಗುಗಳನ್ನು ತೆರೆದಿಡುವ ಅಗತ್ಯವಿದೆ. ಅದನ್ನು ತೆರೆದಿಡಬೇಕಾದರೆ ಕೇವಲ ಕಳಕಳಿ ಸಾಲುವುದಿಲ್ಲ; ಆ ಸಮಾಜದ ಒಳಗೆ ಇದ್ದು ಅದನ್ನು ಅರ್ಥಮಾಡಿಕೊಂಡು ನಿಷ್ಪಕ್ಷಪಾತ ದೃಷ್ಟಿಯಿಂದ ನೋಡುವವರು ಬೇಕಾಗುತ್ತದೆ. ಈ ನಿಟ್ಟಿನಲ್ಲಿ ಮಲಾರ್‌ರಂಥವರು ಮುಖ್ಯರಾಗುತ್ತಾರೆ.

ಮಲಾರ್ ಬಹುಮುಖ ಪ್ರತಿಭಾವಂತರು. ಎಳೆಯ ಪ್ರಾಯದಲ್ಲೇ 'ಮ್ಯೊಲಾಂಜಿ' ಎಂಬ ಮಾಸಪತ್ರಿಕೆಯನ್ನು ತಂದ ಅವರು 'ಒರು ಪೆನ್ಣ್‌ರೆ ಕಿನಾವು' ಎಂಬ ಬ್ಯಾರಿ ಕಾದಂಬರಿ, 'ಬದ್‌ಕ್‌ದ ಕನ' ಎಂಬ ತುಳು ಕಾದಂಬರಿಯನ್ನು 'ಬ್ಯಾರಿ ಮುಸ್ಲಿಮರು' ಎಂಬ ಅಧ್ಯಯನ ಕೃತಿಯನ್ನು 'ಕೋಟಿ ಚೆನ್ನಯ' ಎಂಬ ಜನಪದೀಯ ವಸ್ತುವನ್ನಾಧರಿಸಿದ ಕಾದಂಬರಿಯನ್ನು ಬರೆದಿದ್ದಾರೆ. ಪತ್ರಕರ್ತರೂ ಆಗಿರುವ ಮಲಾರ್ ನಮ್ಮ ನಡುವೆ ಇರುವ ಅತ್ಯಂತ ವೇಗದ ಬರಹಗಾರ. ಕ್ಷಣಮಾತ್ರದಲ್ಲಿ ಕತೆಕಟ್ಟಿ ಹೇಳಬಲ್ಲ ಮಲಾರ್ ಅವರ ಚಾಕಚಕ್ಯತೆ ದಿಗ್ಭ್ರಮೆ ಮೂಡಿಸುತ್ತದೆ. ಅಂತಲೇ ಮಲಾರ್ ಅವರಿಗೆ ಹೆಚ್ಚಿನ ಜವಾಬ್ದಾರಿ ಇದೆ; ನಮ್ಮ ಸಾಹಿತ್ಯ ಕ್ಷೇತ್ರ ಅವರಿಂದ ಬಹಳಷ್ಟು ಬಯಸುತ್ತದೆ; ಅದನ್ನು ಭರಿಸಿಕೊಡಬಲ್ಲ ಶಕ್ತಿಯೂ ಅವರಿಗಿದೆ ಎಂದು ಧಾರಾಳವಾಗಿ ಹೇಳಬಹುದು.

**ಅರವಿಂದ ಚೊಕ್ಕಾಡಿ**
ಕೊಡಂಗಲ್ಲು ಅಂಚೆ, ಮೂಡುಬಿದರೆ, ದ. ಕ. ಜಿಲ್ಲೆ - ೫೭೪೨೨೭

# ಕಾವ್ಯವೆಂದರೆ...

ಕಾವ್ಯವೆಂದರೆ,
ಅವಳ ಪ್ರಾಯ 'ಬೋದಿಲೇಯರ್'ನನ್ನು
ಮೂಲೆಗುಂಪು ಮಾಡಿ ;
ಋಜುತ್ವದ ಮೇಲೆ ಸವಾರಿ ಮಾಡುವುದು...

ಕಾವ್ಯವೆಂದರೆ,
ಅವಳು ಗುಲಾಬಿಯೊಂದನ್ನು ಪ್ರೀತಿಯಿಂದ
ಎದೆಗೊತ್ತಿಕೊಂಡಾಗ
ಅದು ಲಜ್ಜೆಯಿಂದ ಮುದುಡಿಕೊಳ್ಳುವುದು...

ಕಾವ್ಯವೆಂದರೆ,
ಅವಳ ಕಣ್ಣೀರಿನಲ್ಲಿ ನಭ ತೇವಗೊಂಡು
ನಕ್ಷತ್ರಗಳಿಗೆ ಗರ ಆವರಿಸಿಕೊಳ್ಳುವುದು...

ಕಾವ್ಯವೆಂದರೆ,
ಅವಳು ಹಗಲಿಗೆ ಇರುಳಿನ ಬಟ್ಟೆ ತೊಡಿಸಿ
ತಾನೇ ಬೆತ್ತಲಾಗುವುದು...



ಮಂಜು ಶೆಟ್ಟರ್, C/o. ಈರಪ್ಪ ಎಂ. ಕಂಬಳಿ, ಡಿ – ೧೫೪, ಜೀವನಬೀಮಾ ನಗರ, ಬೆಂಗಳೂರು – ೫೬೦ ೦೭೫



# ಆರಿಹೋದ ಬೆಂಕಿಯ ಲೇಖನಿ

"ನಾನು ಬದುಕಿನಲ್ಲಿ ಏನನ್ನಾದರೂ ಬಯಸಿದ್ದರೆ ನನ್ನ ಬೆಂಕಿಯ ಆಯುಷ್ಯ ನನ್ನ ಅಕ್ಷರಗಳಿಗೆ ದಕ್ಕಲಿ ಎಂದಷ್ಟೇ ಬಯಸಿದ್ದೆ. ಇಂದು ತಾವು, ದಿಲ್ಲಿ ವಿಶ್ವವಿದ್ಯಾಲಯದವರು, ನನ್ನ ಅಕ್ಷರಗಳನ್ನು ಗುರುತಿಸಿದ್ದೀರಿ, ಅವುಗಳ ಬೆಂಕಿಯನ್ನೂ ಗುರುತಿಸಿದ್ದೀರಿ. ಅದನ್ನು ಗುರುತಿಸಿದ್ದಕ್ಕಾಗಿ ನಾನು ಈ ಅಕ್ಷರಗಳ ಬೆಂಕಿಯ ಪರವಾಗಿ ತಮಗೆ ಕೃತಜ್ಞತೆ ಸೂಚಿಸುತ್ತೇನೆ."

೧೯೭೩ರ ಮೇ ೧೫ರಂದು ದಿಲ್ಲಿ ವಿಶ್ವವಿದ್ಯಾಲಯವು ಅಮೃತಾ ಪ್ರೀತಂ ಅವರಿಗೆ ಡಿ.ಲಿಟ್. ಗೌರವ ಪದವಿ ಪ್ರದಾನ ಮಾಡಿದ ಸಂದರ್ಭದಲ್ಲಿ ಅವರು ನುಡಿದ ಮಾತುಗಳಿವು. ಈ "ಬೆಂಕಿಯ ಲೇಖನಿ" ಚಂದ್ರನ ಬೆಳದಿಂಗಳ ತಂಪನೆರೆಯುವ ಕವಿತೆಗಳನ್ನೂ ಬರೆದಿದ್ದಾರೆ. ಪ್ರೀತಿಯ ವಿವಿಧ ಆಯಾಮಗಳ ವಿಶಾಲ ವಿಶ್ವವನ್ನೇ ಸೂರೆಗೊಳ್ಳುವ ಈ ಮಹಾನ್ ಲೇಖಕಿ ಜ್ಞಾನಪೀಠ ಪ್ರಶಸ್ತಿ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಮೊದಲ ಮಹಿಳೆಯೂ ಹೌದು. ಸುಮಾರು ಏಳು ದಶಕಗಳಿಂದ ತಮ್ಮನ್ನು ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡ ಈ ಲೇಖಕಿ ೨೮ ಕಾದಂಬರಿಗಳು, ೧೮ ಕವನ ಸಂಕಲನಗಳು ಹಾಗೂ ೫ ಕಥಾಸಂಕಲನಗಳನ್ನೊಳಗೊಂಡಂತೆ ಒಟ್ಟು ೭೫ ಕೃತಿಗಳನ್ನು ರಚಿಸಿದ್ದಾರೆ. ಅವರ ಸಂಪಾದಕತ್ವದ 'ನಾಗಮಣಿ' ಪತ್ರಿಕೆ ಪಂಜಾಬಿ ಸಾಹಿತ್ಯ ಲೋಕಕ್ಕೆ ಕಸುವನ್ನು ತುಂಬಿದೆ.

ಬೊದಿಲೇರ್, ಮೈಕೊವಸ್ಕಿ, ಪುಶ್ಕಿನ್, ಟಾಲ್‌ಸ್ಟಾಯ್, ಗಯಟೆ, ಷಿಲರ್, ಫ್ರಾಯ್ಡ್, ಟಾಗೋರ್ – ಮುಂತಾದ ವಿಶ್ವಸಾಹಿತಿಗಳ ಪ್ರಭಾವವನ್ನು ಅರಗಿಸಿಕೊಂಡಿದ್ದ ಅಮೃತಾ ಅವರ ಬದುಕಿನಲ್ಲಿ ಜರುಗಿದ ಘಟನೆಗಳು ವೈವಿಧ್ಯಮಯವಾದುವು. ಭಾರತದ ವಿಭಜನೆಯ ದುರಂತವನ್ನು ತುಂಬ ಹತ್ತಿರದಿಂದ ವೀಕ್ಷಿಸಿದ ಸೂಕ್ಷ್ಮ ಮನಸ್ಸಿನ ಈ ಲೇಖಕಿ ಈ ಹತ್ಯಾಕಾಂಡದ ಹಲವು ರೂಪಗಳನ್ನು ತಮ್ಮ ಸಾಹಿತ್ಯ ಕೃತಿಗಳ ದ್ರವ್ಯವಾಗಿಸಿದ್ದಾರೆ. ಅವರ 'ಅಜ್ಜ ಅಖಾಂ ವಾರಿಸ್ ಶಾನೂ' ಕವನ ಈ ಸಂದರ್ಭದಲ್ಲಿ ಹುಟ್ಟಿದ್ದು ಮತ್ತು ಕವಯಿತ್ರಿಯನ್ನು ಅಮರಗೊಳಿಸಿತು. ಪ್ರೀತಿ ಮತ್ತು ಕ್ರಾಂತಿ ಕುರಿತ ಕವನಗಳನ್ನು ಬರೆದ ಕವಿ ಸಾಹಿರ್ ಲುಧಿಯಾನವಿ ಅಮೃತಾರವರ ಆರಾಧ್ಯ ದೈವ. ಅವರ ಪ್ರಸಿದ್ಧ 'ಸುನಹೆಡೆ' ಕವನ ಸಂಕಲನಕ್ಕೆ ಅವರೇ ವಸ್ತು.

ಅಮೃತಾರ ಬದುಕು ರೋಮಾಂಚಕಾರಿ ಘಟನೆಗಳಿಂದ ಕೂಡಿದೆ. 'ಸಾಧು'ವಿನ ಜೀವನವನ್ನು ಆರಿಸಿಕೊಂಡಿದ್ದ ತಂದೆ, ಗೃಹಸ್ಥಾಶ್ರಮದ ನಂತರ ಅಪ್ರತಿಮ ಕವಿಯಾಗಿದ್ದವರು. ಕವಿ ತಂದೆ, ಶಿಕ್ಷಕಿ ತಾಯಿಯ ಪ್ರಭಾವ, ಪ್ರೇರಣೆಗಳಿಂದ ಬೆಳೆದ ಅಮೃತಾಗೆ, ನಾಲ್ಕು ವರ್ಷದ ಬಾಲಕಿಯಾಗಿದ್ದಾಗಲೇ ಮದುವೆ ನಿಶ್ಚಿತಾರ್ಥ; ಹದಿನೈದು ವರ್ಷಕ್ಕೆ ವಿವಾಹ. ಪಾಕಿಸ್ತಾನದ ಕವಿ ಸಾಹಿರ್ ಲುಧಿಯಾನವಿ ಅವರ ನೆಚ್ಚಿನ ಸ್ನೇಹಿತ. ಪ್ರಖ್ಯಾತ ಚಿತ್ರಕಾರ ಇಮ್ರೋಜ್‌ನನ್ನು ಬಾಳಸಂಗಾತಿಯಾಗಿ ಆರಿಸಿಕೊಂಡು ಪ್ರಾಮಾಣಿಕವಾಗಿ, ತಮ್ಮ ಬದುಕಿನ ನಂಬಿಕೆಗಳಿಗೆ ನಿಷ್ಠರಾಗಿ ಬಾಳಿದ ಅಮೃತಾ, ತಮ್ಮ ಕೃತಿಗಳ ಮೂಲಕ ಅಷ್ಟೇ ಪ್ರಾಮಾಣಿಕವಾಗಿ ಬದುಕಿನ ಅನುಭವಗಳನ್ನು ಪ್ರಕಟಿಸಿದ್ದಾರೆ. ಅವರ ಅಪರೂಪದ ಆತ್ಮಚರಿತ್ರೆ 'ರಸೀದಿ ತಿಕೀಟು' ಅವರೇ ಹೇಳಿಕೊಂಡಂತೆ 'ಬದುಕಿನ ಲೇವಾದೇವಿಗೆ ಸಂಬಂಧಿಸಿದ ಕಾಗದ ಪತ್ರಗಳ ಮೇಲೆ ಒಂದು ಚಿಕ್ಕದಾದ ರಸೀದಿ ತಿಕೀಟು'. ತಮ್ಮ ಬದುಕಿನುದ್ದಕ್ಕೂ ಮತ್ತು ಕೃತಿಗಳಲ್ಲಿ ಸಹ ಮನುಷ್ಯ ಸಂಬಂಧದ ಹುಡುಕಾಟಗಳಲ್ಲಿ ತೊಡಗಿದ್ದ ಅಮೃತಾ ಪ್ರೀತಂ ಸ್ವತಂತ್ರ ಜೀವಿಗಳಾಗಿ ಸ್ತ್ರೀ ಪುರುಷರಿಬ್ಬರೂ ಬದುಕಬೇಕಾದರೆ, ವ್ಯವಹರಿಸಬೇಕಾದರೆ ಅವರು ಆರ್ಥಿಕವಾಗಿಯೂ ಸ್ವತಂತ್ರರಿರಬೇಕು ಎಂದು ನಂಬುತ್ತಾರೆ. ಆರ್ಥಿಕ ದಾಸ್ಯವಿದ್ದಲ್ಲಿ ನಿಜವಾದ ಪ್ರೀತಿಯ ಅನುಭವವಾಗುವುದು ಕಷ್ಟ ಎನ್ನುವುದು ಅವರ ಅಭಿಪ್ರಾಯ. ೧೯೫೬ರಲ್ಲಿ ಅವರ 'ಸುನಹೆಡೆ' ಕವನ ಸಂಕಲನಕ್ಕಾಗಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದರೆ, ೧೯೮೧ರಲ್ಲಿ ಭಾರತೀಯ ಜ್ಞಾನಪೀಠ ಪ್ರಶಸ್ತಿಯಿಂದ ಪುರಸ್ಕೃತರಾದರು. ಅಮೃತಾರನ್ನು ಅಲಂಕರಿಸಿದ ಪ್ರಶಸ್ತಿ, ಸನ್ಮಾನಗಳು ಎಷ್ಟೋ. ದಿಲ್ಲಿ ಹಾಗೂ ಜಬ್ಬಲ್‌ಪುರ ವಿಶ್ವವಿದ್ಯಾಲಯಗಳು ೧೯೭೩ರಲ್ಲಿ ಅವರಿಗೆ ಗೌರವ ಡಿ.ಲಿಟ್. ಪ್ರದಾನ ಮಾಡಿದವು. ಭಾರತ ಸರ್ಕಾರವು 'ಪದ್ಮಶ್ರೀ' ನೀಡಿ ಗೌರವಿಸಿತು. ಫ್ರಾನ್ಸ್ ಮತ್ತು ಬಲ್ಗೇರಿಯಾ ಸರ್ಕಾರಗಳು ಅವರ ದೇಶದ ಅತ್ಯುನ್ನತ ಸಾಹಿತ್ಯ ಪ್ರಶಸ್ತಿಗಳನ್ನು ನೀಡಿ ಗೌರವಿಸಿವೆ. ಇದೀಗ ಕಳೆದ ವರ್ಷವಷ್ಟೆ ದಿಲ್ಲಿ ರಾಜ್ಯ ಸರ್ಕಾರವು ಅಮೃತಾರಿಗೆ 'ಸಹಸ್ರಮಾನದ ಕವಯಿತ್ರಿ' ಪ್ರಶಸ್ತಿ ನೀಡಿ ಸನ್ಮಾನಿಸಿತು. ಪಂಜಾಬಿ ಭಾಷೆಯ ಮೂಲಕ ದೇಶದ ಹೆಮ್ಮೆಯನ್ನು ಗೌರಿಶಿಖರಕ್ಕೇರಿಸಿದ ಈ ಅದ್ಭುತ ಲೇಖನಿಯ ಒಡತಿ ಇತ್ತೀಚೆಗೆ ನಿಧನರಾದರು. ಅವರಿಗೆ '**ಹೊಸತು**'ವಿನ ಅಕ್ಷರ ನಮನ.

**ಡಾ|| ಎನ್. ಗಾಯತ್ರಿ**

## ಮಿಣುಕು ದೀಪ



ರಾಷ್ಟ್ರದ ಕ್ರಾಂತಿಗಳು
ಕೇವಲ ಕ್ರಾಂತಿಗಳಲ್ಲ
ಅಳಿವು ಉಳಿವುಗಳಲ್ಲ,
ದಂಗೆ, ಯುದ್ಧಗಳಲ್ಲ
ಅವು ಜನತೆಯನ್ನು
ಮನುಷ್ಯರನ್ನಾಗಿಸುವ
ಮೂಲ ಮಂತ್ರಗಳು
ಬಂದರೆ ಬದುಕಿನ ಕಷ್ಟ
ನಮ್ಮೊಳಗಿನ ಮಾನವ
ಮಿಸುಕಾಡುತ್ತಾನೆ.
ಲೋಕ ಕತ್ತಲೆಯಲ್ಲಿರಲು
ಬದುಕಿನ ಕಷ್ಟ ಮುತ್ತಿರಲು
ಮಿಣುಕು ದೀಪವೊಂದು
ಮುಟ್ಟಿ ಮೈದಡವಿ ಹೇಳುತ್ತದೆ.
ಹೆದರಬೇಡ ನಾನಿದ್ದೇನೆ.
ಮಣ್ಣು, ಭೂಮಿ, ಜಲಗಳು
ರಾಷ್ಟ್ರವಾಗುವುದಿಲ್ಲ – ಇಲ್ಲಿ
ಕೋಟಿ ಕೋಟಿ ಕನಸುಗಳಿವೆ
ಬೆಳೆಯಬೇಕಾದ ಮನಸುಗಳಿವೆ
ಕಳಚಿಕೊಳ್ಳಬೇಕಾದ
ಗುಲಾಮಿ ಸರಪಳಿಗಳಿವೆ.

ಕ್ರಾಂತಿಯೆಂದರೆ ರಕ್ತಪಾತವಲ್ಲ
ಗಳಿಸಬೇಕಿದೆ ಸ್ವಾತಂತ್ರ್ಯ
ಅದಕೇ ಮಿಣುಕು ದೀಪವೊಂದು
ಆತ್ಮವಿಶ್ವಾಸದಿಂದ ನುಡಿಯುತ್ತದೆ.
ಹೆದರಬೇಡ ಹುಲುಮಾನವ
ಬೆಂಬಲಕ್ಕೆ ನಾನಿಲ್ಲವೇ ಜೊತೆಗೆ?

**ಕೆ. ಪರೀಕ್ಷಾ**
ಎ. ಪಿ. ಎಂ. ಸಿ., ಹರಿಹರ - ೫೭೭ ೬೦೧, ದಾವಣಗೆರೆ ಜಿಲ್ಲೆ

# ವರುಷದ ಮೊದಲ ಮಳೆ

——ಕೆ. ಸಿದ್ರಾಮ

**ಚು**ಮುಚುಮು ಬಿಸಿಲು ಹಾಸತೊಡಗಿದಾಗ ನಸುಕಿನ ಚಳಿಯ ತಾಳದಲ್ಲಿ ನಡುಗುತ ನಡೆವ ಸಂಕಪ್ಪಯ್ಯ ಕಾವೇರಿದಂತಾಗಿ ಹುರುಪಿನ ಹೊದಿಕೆ ಹೊತ್ತಂತೆ ಹಾಡೊಂದನ್ನು ಗುನುಗುನು ಗುನುಗುತ್ತ ಹೆಜ್ಜೆ ಹಾಕ ತೊಡಗಿದ. ಇದೇ ಸಂಕಪ್ಪಯ್ಯ ಹತ್ತು-ಹನ್ನೆರಡು ವರುಷದ ಹಿಂದೆ ಹೀಗೆ ಚಳಿ ನಸುಕಿನಲ್ಲಿ ಹೊರಗೆ ಕಾಲಿಟ್ಟವನೇ ಅಲ್ಲ. ಅಷ್ಟೇ ಯಾಕೆ, ರಾತ್ರಿಯಾದರೆ ಸಾಕು ಹೊರಗೆ ಸುಳಿಯುತ್ತಲೇ ಇರಲಿಲ್ಲ. ಹೀಗೆಂದಾಕ್ಷಣ ಆತ ತುಂಬ ಸರಳ ಸಜ್ಜನಿಕೆಯ ವ್ಯಕ್ತಿ ಎಂದರೆ ತಪ್ಪಾದೀತು. ಸುಳಿ ಸುಮಾರಿತ್ತು ಅಷ್ಟೆ. ಪಿತ್ರಾರ್ಜಿತ ಆಸ್ತಿಯಲ್ಲಿ ಎಂದೂ ದುಡಿದವನೇ ಅಲ್ಲ; ಕೈಗೊಂದು ಕಾಲಿಗೊಂದು ಆಳನ್ನಿಟ್ಟುಕೊಂಡು ಮೆರೆಯುತ್ತಿದ್ದಂತಹ ಗೌಡಕಿ ದರ್ಪದ ವ್ಯಕ್ತಿ. ಪಿಟಿಪಿಟಿ ಅವ್ವನ ಮುಂದೆ ಮಾತ್ರ ಎದುರುತ್ತರ ಕೊಡುತ್ತಿರಲಿಲ್ಲ. ಇಂದು ಇದ್ದಂತೆ ನಾಳೆ ಇರುವುದಿಲ್ಲ; ಈಗಿದ್ದಂತೆ ಇನ್ನೊಂದು ಹೊತ್ತಿನಲ್ಲಿರುವುದಿಲ್ಲ ಎಂಬ ಸತ್ಯ ದರ್ಶನವಾಗಲು ಆತನಿಗೆ ಬಹಳ ಕಾಲವೇನೂ ಹಿಡಿಯಲಿಲ್ಲ. ಅಮಾಸೆಯಿಂದ ಹುಣ್ಣಿಮಿ – ಹುಣ್ಣಿಮಿಯಿಂದ ಅಮಾಸೆ ಕಣ್ಣುಮುಚ್ಚಾಲೆಯಾಟ ಆಡುತ್ತ ಆಡುತ್ತ ಕಾಲ ಉರುಳಾಡುತ್ತ ಹೊರಳಾಡುತ್ತ ಮುಂದೆ ಮುಂದೆ ನಡೆಯುತ್ತಿದ್ದಾಗ ಬ್ರಿಟಿಷರು ಭಾರತ ಬಿಟ್ಟು ಹೋಗಿ ಹಲವು ವರ್ಷಗಳು ಕಳೆದು, ಸರ್ಕಾರದ ಮೇಲೆ ಸರ್ಕಾರ ಬದಲಾಗಿ ಸರಕಾರಗಳ ಜೊತೆ ಜೊತೆಯಲ್ಲಿ ಕಾಯ್ದೆ – ಕಾನೂನುಗಳೂ ಬದಲಾಗಿಹೋದವು. ಬದಲಾದ ಕಾಯ್ದೆ ಪ್ರಕಾರ ''ಉಳುವವನೇ ಹೊಲದೊಡೆಯ''ನಾದ. ಜಮೀನ್ದಾರರ ಬುಡ ಬೆದರಿದವು. ಬರೀ ಐಷಾರಾಮಿಯಲ್ಲಿ ಕಾಲ ಕಳೆದು, ಧಿಮಾಕಿನ ದರ್ಪದಲ್ಲಿ ಬೆಳೆದ ಸಂಕಪ್ಪಯ್ಯ ನಂಥವರು ನೂರಾರು ತಂತ್ರ-ಕುತಂತ್ರ ಮಾಡಿದರೂ ಕೊನೆಗೆ ಕಾಯ್ದೆಯೇ ಗೆದ್ದಿತು.

ಸಂಕಪ್ಪಯ್ಯನ ಮನದಲ್ಲಿ ಒಮ್ಮೊಮ್ಮೆ ಅನ್ನಿಸುತ್ತಿತ್ತು: ಅಂಗೈಯಗಲ ಜಮೀನು ನೀಡಿದ್ದರೆ ಜೀವನ ಪರ್ಯಂತ ಅಡಿಯಾಳಾಗಿ ಇರುವಂತಿದ್ದ ಚಾಮನಿಗೆ ತಾನು ಒಂದಿಷ್ಟು ಜಮೀನು ಕೊಡಬೇಕಾಗಿತ್ತು. ಇಂದು ಚಾಮನಿಂದ ಏನಾದರೂ ಸಹಾಯ ಒದಗಿಬರುತ್ತಿತ್ತು. ಮುದುಕಿ ಅವ್ವನ ಮಾತು ಕೇಳಿ ತಾನು ತಪ್ಪು ಮಾಡಿದೆ. ಛೇ! ಹಾಳಾದ್ದು. ಜಮೀನು ಹೋದ ನಾಲ್ಕೇ ದಿನದಲ್ಲಿ ಅವ್ವ ಗೊಟಕ್ ಎಂದಾಗ ಸಂಕಪ್ಪಯ್ಯನಿಗೆ ಅತೀ ಹೆಚ್ಚಿನ ದುಃಖವೇನೂ ಆಗಿರಲಿಲ್ಲ. ಆದರೆ ಮಳೆಯಿಲ್ಲದೆ ಅಳಿದುಳಿದ ಸ್ವಲ್ಪ ಜಮೀನೂ ಹಸಿರಾಗದೆ, ಹತ್ತಿರವಿದ್ದ ಅಲ್ಪಸ್ವಲ್ಪ ಹಣಕಾಸು ಮೆಲ್ಲಗೆ ತಳ ಕಾಣತೊಡಗಿದಾಗ ಬುಡಕ್ಕೆ ಬಿಸಿ ತಾಗತೊಡಗಿತು. ಆ ಬಿಸಿಗೆ ಆತ ಬಸವಳಿದು ಹೋದ.

ಕಾಯ್ದೆಯ ಹೊಸ ಹಾದಿಯಲ್ಲಿ ಭೂಮಿ ಇಲ್ಲದವರಿಗೆ ಭೂಮಿಯಲ್ಲಿ ನಾಲ್ಕೆಕರೆ ಜಮೀನು ಸಂಪಾದಿಸಿದ್ದ ಚಾಮನ ಹಿರೀಮಗ ಗುರಪ್ಪ, ತನ್ನ ತಮ್ಮ ಚೆನ್ನನನ್ನು ಜೊತೆ ಮಾಡಿಕೊಂಡು ಗೈಮೆ ಮಾಡಿದ್ದ. ದಲಿತ ಸಂಘಟನೆ ರಾಜ್ಯಮಟ್ಟದಲ್ಲಿ ಮಿಂಚಿ, ಆ ಹಳ್ಳಿಗೂ ಕಾಲಿಟ್ಟಾಗ ಹೊಸ ಹುರುಪಿನಿಂದ ಅದರೊಳಗೊಂದಾದ ಗುರಪ್ಪ ಮತ್ತು ಚೆನ್ನ 'ರಾತ್ರಿಸಾಲೆ'ಯನ್ನು ನಿಷ್ಠೆಯಿಂದ ಕಲಿತರು. ಅಕ್ಷರದ ಅರಿವಿನಿಂದ ಮರೆತ ಜೀವನವನ್ನು ನೆನಪಿಸಿಕೊಂಡು ಹೊಸ ಬದುಕಿಗಾಗಿ ಹಂಬಲಿಸಿದರು. ಸರ್ಕಾರದ ಯೋಜನೆಗಳನ್ನು ಕಾಡಿ-ಬೇಡಿ, ಬೋರ್ ಹಾಕಿಸಿ, ಹೊಲವನ್ನು ಹಸಿರಾಗಿಸಿದರು. ಕಳೆದ ವರ್ಷ ಹುಲುಸಾದ ಫಸಲು ಬಂದಾಗ ಊರಿಗೇ ಊರೇ ಬಾಯಿ ಮೇಲೆ ಕೈ ಒಯ್ದಿತ್ತು. ಸಂಕಪ್ಪಯ್ಯನಿಗೆ ಒಂಥರಾ ಹೊಟ್ಟೆಕಿಚ್ಚಿನ ಸಂಕಟವಾದರೂ ಏನೂ ಮಾಡುವಂತಿರದೆ ಕೈ ಕೈ ಹೊಸೆದು ಮೈಪರಚಿಕೊಂಡ. ಹೋಳಿಗೆ ತಿನ್ನಲೂ ಚಿಂತಿಸಬೇಕಾದ ಕಾಲ ಅವನದಾಗಿತ್ತು. ಏನಾದರೂ ಮಾಡಬೇಕು; ಹೇಗಾದರೂ ಮಾಡಬೇಕು; ತಾನೂ ಮತ್ತೆ ಮೊದಲಿನಂತೇ ಜೀವಂತವಾಗಬೇಕು. ಹೋದುದನ್ನು ಮರಳಿ ಪಡೆಯಬೇಕು ಅಥವಾ ಮತ್ತೆ ಸಿರಿವಂತಿಕೆ ಗಳಿಸದಿದ್ದರೂ ಹೊಟ್ಟೆ-ಬಟ್ಟೆಗೆ ಕಡಿಮೆಯಾಗದಂತೆ ಬದುಕಬೇಕೆಂದು ನೂರಾ ಎಂಟು ಖಟಪಟಿ ಹೂಡಿದರೂ ಒಂದೂ ದಡ ತಲುಪದೇ ಹುಟ್ಟಿದಲ್ಲೇ ಮುಳುಗುತ್ತಿದ್ದವು.

ಪಕ್ಕದೂರಿನ ದೂರಿನ ನೆಂಟ ಬಸನಗೌಡ ಅಲ್ಪಸ್ವಲ್ಪ ರಾಜಕೀಯ ತಿಳಿದಿದ್ದ ಮನುಷ್ಯ. ಕಮರಿಹೋದ ಹೊಲದಂತೆಯೇ ಕಮರಿಹೋಗಿದ್ದ ಸಂಕಪ್ಪಯ್ಯ ಮುಂಗಾರು ಬೀಜ ಬಿತ್ತಲು ಸಾಲ ಕೇಳಲು ಆತನಲ್ಲಿಗೆ ದೂರದ ಆಸೆಯೊಂದಿಗೆ ಹೋದಾಗ, ಆತ ಚೆನ್ನಾಗಿಯೇ ಮಾತನಾಡಿಸಿದ. ಸಂಕಪ್ಪಯ್ಯನಿಗೆ ಬಂದ ಸ್ಥಿತಿಗೆ ಮಮ್ಮಲ ಮರುಗಿ ಸಮಾಧಾನದ ನಾಲ್ಕು ಮಾತು ಹೇಳಿದ. ಪ್ರತಿ ಮಾತಿಗೊಮ್ಮೆ ತಮ್ಮ ಪಕ್ಷ ಕೇಂದ್ರದಲ್ಲಿ ಆಡಳಿತ ನಿರ್ವಹಿಸುತ್ತಿರುವುದನ್ನು ಬಣ್ಣಿಸುತ್ತಿದ್ದ. ರಾಜ್ಯ ಸರ್ಕಾರದ ಬಗ್ಗೆ ಕಿಡಿಕಾರುತ್ತಿದ್ದ. ತಾನೂ ಊಟ ಮಾಡಬೇಕಾದ್ದರಿಂದ ಸಂಕಪ್ಪಯ್ಯನನ್ನೂ ಊಟ ಮಾಡಿಸಿದ. ಏನಾದರೂ ಸಹಾಯ ಕೇಳಲು ಹೋದ ಸಂಕಪ್ಪಯ್ಯನ ಬಾಯಿ ಕಟ್ಟಿ ಹಾಕಿದಂತಾಗಿತ್ತು. ಊಟ ಮುಗಿಸಿ ತನಗೆ ಅರ್ಜೆಂಟ್ ಮೀಟಿಂಗ್ ಇದೆ ಎಂದ ಬಸನಗೌಡ ಹೊರಟು ನಿಂತಾಗ, ಅದು ತನಗೂ ಹೊರಡುವಂತೆ ಹೇಳಿದ ಸೂಚನೆ ಎಂದರಿತ ಸಂಕಪ್ಪಯ್ಯ ಕಷ್ಟಪಟ್ಟು ಮಾತನಾಡಲು ಹವಣಿಸಿದ. ಒಂದಾನೊಂದು ಕಾಲದಲ್ಲಿ ತನ್ನ ಒಂದೊಂದು ಮಾತಿಗೂ ಎಂಥ ಬೆಲೆ ಇತ್ತು. ಚಾವಡಿ ಕಟ್ಟೆ ಮೇಲೆ ಎದೆಸೆಟೆಸಿ ಕುಳಿತು ಮಾತನಾಡುತ್ತಿದ್ದದ್ದು; ನ್ಯಾಯ ತೀರ್ಮಾನಿಸಿ ನಿರ್ಣಯ ನೀಡುತ್ತಿದ್ದ ಪರಿ, ತನ್ನ ಮಾತಿಗೆ ಎದುರಾಡದೇ ಊರ ತಲೆಗಳೆಲ್ಲ (ಮುಕುಂದ ಶಾಸ್ತ್ರಿಯನ್ನು ಹೊರತುಪಡಿಸಿ) 'ಜೀಯ ದೇವ' ಎಂದು ಬಾಗಿರುತ್ತಿದ್ದದ್ದು... ಎಲ್ಲ ಒಂದು ಕ್ಷಣ ಕಣ್ಣಮುಂದೆ ಟಿ.ವಿ. ಜಾಹೀರಾತಿನಂತೆ ಹಾಯ್ದುಹೋದವು. ಆದರೆ ಇಂದು ಒಂದೇ ಒಂದು ಮಾತು ಕೇಳಲು ಮುಜುಗರಗೊಳ್ಳುವ ದೀನಸ್ಥಿತಿ! ಸಂಕಪ್ಪಯ್ಯ ಏನೋ ಹೇಳಲು ಹಂಬಲಿಸುತ್ತಿದ್ದಾನೆ ಎಂದುಕೊಂಡ ಬಸನಗೌಡ, ''ಏನು ಸಂಕಪ್ಪಯ್ಯಾ... ಮತ್ತೇನಾದರೂ ಹೇಳುವುದಿತ್ತೆ?'' ಎಂದು ಕೇಳಿಯೇ ಬಿಟ್ಟ. ಸಂಕಪ್ಪಯ್ಯನಿಗೆ ಮಾತು ಗಂಟಲಿಗೆ ಬಂದರೂ ಬಾಯಿ ಅದನ್ನು ಹೊರಗೆ ಬಿಡಲಿಲ್ಲ. ಬರೀ ''ಏನಿಲ್ಲ... ನಾ... ನಾನಿನ್ನು ಹೋಗ್ತೇನೆ'' ಎಂದಾಗ 'ಸರಿ' ಎಂದಷ್ಟೇ ಹೇಳಿದ ಬಸನಗೌಡ ಎರಡು



ಹೆಜ್ಜೆ ಮುಂದೆ ಹೋಗಿ, ''ಸಂಕಪ್ಪಯ್ಯಾ, ಒಂದ್ ವಿಷಯ ಹೇಳೋದನ್ನ ಮರ್ತಿದ್ದೆ. ನಾಳೆ ಡಿ.ಸಿ. ಆಫೀಸಿನೆದುರು ಒಂದು ಬೇಡಿಕೆಯನ್ನಿಟ್ಟು ನಮ್ಮ ಪಕ್ಷದ ಸಂಘಟನೆ ವತಿಯಿಂದ ಪ್ರತಿಭಟನೆ ಮಾಡ್ತಿದ್ದೀವಿ. ನೀನೂ ಬಾ...'' ಎಂದ. ಸಂಕಪ್ಪಯ್ಯ ಏಕೆ ಏನು ಎಂಬಂತೆ ದಿಟ್ಟಿಸಿದ.

''ಅದೇ, ಈಗಾಗ್ಲೆ ಪತ್ರಿಕೆಗಳಲ್ಲಿ ಬಂದಿರೋದನ್ನ ನೋಡಿರ್‍ಬೇಕು. ಆರ್ಥಿಕವಾಗಿ ಹಿಂದುಳಿದ ಮೇಲ್ಜಾತಿಯವರಿಗೂ ಮೀಸಲಾತಿ ನೀಡಬೇಕೆಂದು ಸರ್ಕಾರವನ್ನು ಒತ್ತಾಯ ಮಾಡೋದು. ಹೇಗೂ ಸೆಂಟ್ರಲ್ ಗೋರ್ಮೆಂಟ್ ನಮ್ಮದೇ ಇದೆ. ಇಲ್ಲಿ ನಾವ ಸೊಲ್ಪ ದನಿ ಎತ್ತಿದ್ರ ಪಾರ್ಲಿಮೆಂಟನ್ಯಾಗ ಪಾಸ್ ಆಗೋದು ಅಷ್ಟೇನ ಕಷ್ಟದ ಕೆಲಸ ಅಲ್ಲ'' ಮೇಲ್ಜಾತಿಯವರಿಗೂ ಮೀಸಲಾತಿ ಮಾತು ಕೇಳಿ ಒಂಥರಾ ಉತ್ಸಾಹದ ಚಿಲುಮೆ ಚಿಮ್ಮಿದಂತಾದರೂ ಕ್ಷಣಮಾತ್ರದಲ್ಲಿ ಅದು ಒಳಸರಿದುಕೊಂಡಂತಾಯಿತು. ''ನಾಳೆ ಹತ್ತು ಗಂಟೆಗಂದ್ರೆ ಡಿ.ಸಿ. ಕಂಪೌಂಡಿನೊಳಗ ಇರಬೇಕು'' ಎಂದ ಬಸನಗೌಡ ಕೈಯಿಂದ ಎದೆಮುಟ್ಟಿಕೊಂಡು ಮುಂದೊಂದೂ ಮಾತನಾಡದೆ, ಮಾತನಾಡಲು ಅವಕಾಶವೇ ಇಲ್ಲವೆನ್ನುವಂತೆ ಅಲ್ಲಿಂದ ಸರಿದುಹೋದ.

ಅಲ್ಲಿಗೆ ಹೋಗುವುದೋ ಬೇಡವೋ ಎಂಬ ಗೊಂದಲದ ಮನಸ್ಸಿನೊಂದಿಗೆ ಲಗಾಟಿ ಹೊಡೆಯುತ್ತಿದ್ದ ಸಂಕಪ್ಪಯ್ಯ ಸಹಾಯ ಕೇಳಲು ಹೋಗಿ ಏನೂ ಕೇಳದೆ ಮರಳುತ್ತಿರುವ ತನ್ನನ್ನು ತಾನೇ ಬೈದುಕೊಳ್ಳುತ್ತ ನಡೆದಿದ್ದ. ಈ ಸಲ ಮುಂಗಾರು ಮಳೆಯಾದರೆ ಬಿತ್ತಿದ ಬೀಜ ಮೋಸ ಮಾಡದು; ಆದರೆ ಬಿತ್ತಾನದ ತಯಾರಿಯೇ ಇನ್ನೂ ಇಲ್ಲ. ದಿವಸಕ್ಕೆ ಹಿಡಿ ಹುಲ್ಲು ತಿಂದು ಸೊಣಕಲಾಗಿರುವ ಎತ್ತುಗಳೊಂದಿಗೆ ಏಗುವುದು ಹರಸಾಹಸವೇ ಸರಿ. ಬಾಡಿಗೆಗಾದರೂ ತಂದು ಗಳೆ ಹೊಡೆಯುವುದನ್ನು ಪೂರ್ಣಾಗಿಸಬೇಕು. ಇಳುವರಿ ಹೆಚ್ಚಿರುವ ಬೀಜಗಳನ್ನೇ ಖರೀದಿಸಬೇಕು. ಗೊಬ್ಬರ... ಇನ್ನೇನು ಹಾಯ್ದೇ ಬಿಟ್ಟಿತು ಅನ್ನುವಷ್ಟು ಅಂತರದಲ್ಲಿ ಪಟಪಟಿಯೊಂದು ಗಕ್ಕನೇ ಬ್ರೇಕ್‌ನೊಂದಿಗೆ ನಿಂತುಕೊಂಡಿತು. ಸಂಕಪ್ಪಯ್ಯ ಗಾಬರಿಯಿಂದ ಹಿಂದಕ್ಕೆ ಜಿಗಿದ. ಪಟಪಟಿ ಸವಾರ ಮಂಜ ಮುಸಿಮುಸಿ ನಗುತ್ತ, ''ಏನ್ರಿ ಯಾವ ಲೋಕದಾಗ ಇದ್ದೀರಿ. ಹಾದಿಯೊಳಗ ಮೈಮರೇತಿರಲ್ಲ'' ಎನ್ನುತ್ತ ರೇಸ್ ಮಾಡಿ, ಯಾವೊಂದು ಉತ್ತರಕ್ಕೂ ಕಾಯದೇ ಮುನ್ನುಗ್ಗಿ ಕ್ಷಣಾರ್ಧದಲ್ಲಿ ಮಾಯವಾಗಿಹೋದ. ಮಂಜ, ಮಧಾಳೆ ಮಲಕಪ್ಪನ ಮಗ, ಜಾತಿಯಿಂದ ಹೊಲೆಯ. ಇದೇ ಮಲಕಪ್ಪ ಹತ್ತು ವರ್ಷದ ಕೆಳಗೆ ತನ್ನ ಮನೆಯಲ್ಲಿ ದನ ಕಾಯುತ್ತಿದ್ದ. ಕೊಟ್ಟಿದ್ದನ್ನು ದೂಸರಾ ಮಾತನಾಡದೆ ತೆಗೆದುಕೊಂಡು, ಹೇಳಿದ್ದನ್ನು ಮಾಡುವಂಥ ನಿಯತ್ತಿನ ಮನುಷ್ಯ. ಇಂದು ಅದೇ ಮಲಕಪ್ಪನ ಮಗ ಮಂಜ, ಊರ ಪಂಚಾಯತಿ ಮೆಂಬರು,ಆತ ಹಾಕಿಕೊಂಡ ಗರಿ ಗರಿ ಬಿಳಿ ಬಟ್ಟೆಯೇನು; ಓಡಿಸುವ ಪಟಪಟಿ; ಸಭೆ ಸಮಾರಂಭದಲ್ಲಿ ಮೆರೆಯೋದು... ಸಂಕಪ್ಪಯ್ಯನಿಗೆ ಒಂದು ಕ್ಷಣ ಸಿಟ್ಟು ಬಂತು. ಪ್ರೈಮರಿಯಲ್ಲಿದ್ದಾಗಲೇ ''ವಾಟೀಜ್ ಯುವರ್ ನೇಮ್'' ಎಂದು ತನ್ನ ಮುಂದೆ ನಿಂತು ಕೇಳಿದಾಗಲೇ ಮಲಕಪ್ಪನೊಡನೆ ಈತನನ್ನೂ ದನ ಕಾಯಲು ಅಟ್ಟಬೇಕಾಗಿತ್ತು ಎಂದುಕೊಂಡ. ಮನದಲ್ಲೇ ಬೈಯ್ದುಕೊಳ್ಳುತ್ತ ಮುಂದೆ ನಡೆಯುತ್ತಿದ್ದಾಗ ಅಡ್ಡ ಬಂದ ನಾಯಿ ಮೇಲೆ ಆ ಸಿಟ್ಟನ್ನು ತೀರಿಸಿಕೊಳ್ಳುವವನಂತೆ ಜೋರಾಗಿ ಒದ್ದ. ಒದೆತ ತಿಂದು ಕುಂಯಿಗುಟ್ಟಿ ದೂರಬಿದ್ದ ನಾಯಿ, ಮರುಕ್ಷಣವೇ ಮೈಜಾಡಿಸಿ ಎದ್ದು ನಿಂತು ಕಾಳಗಕ್ಕೆ ಸಿದ್ಧವಾದಂತೆ ಗುರ್‌ಗುಟ್ಟಿತು; ರಸ್ತೆ ಪಕ್ಕದಲ್ಲಿ ಯಾವುದೋ ಹೆಣ್ಣೊಂದು ಫಕ್ಕನೇ ನಕ್ಕಂತಾಯಿತು!

* * *

ಏನೇನೋ ಅಪವಾದಗಳನ್ನು ಹೊತ್ತಿದ್ದ ಬೆಳ್ಳಿ , ವಾಸ್ತವವಾಗಿ ಅಂಥ ಯಾವ 'ಪಾಪ' ಎನ್ನಿಸುವಂಥ ಕಾರ್ಯಗೈದಿರಲಿಲ್ಲ. ಗುರಪ್ಪ ಮತ್ತು ಚೆನ್ನಪ್ಪ ಎನ್ನುವ ತನ್ನ ಇಬ್ಬರು ಬದುಕಿ ಉಳಿದ ಅಣ್ಣಂದಿರು ಚೈನಿ ಬಾಜಿಗೆ ಬಿದ್ದು ಊರಿಂದೂರು ಹರಗ್ಯಾಡುವುದನ್ನು ಕಂಡು ಕಂಡು ಬೇಸತ್ತ ಆಕೆ, ಗಂಡಿನಂತೆ ಎದೆ ತಟ್ಟಿನಿಂತು ಕೂಲಿ ಮಾಡಿ ಬದುಕ ಬಂಡಿ ಎಳೆಯುತ್ತಿದ್ದಳು. ಮಕ್ಕಳ ಮರಳತನದಿಂದ ಮನನೊಂದು ಚಾಮ ತೀರ ಹುಚ್ಚರಂತೆ ವರ್ತಿಸುತ್ತಿದ್ದಾಗ, ಬೆಳ್ಳಿ, ಗಟ್ಟಿಯಾಗಲೇಬೇಕಿತ್ತು. ಆಕೆ ಮೇಸ್ತ್ರಿಯೊಂದಿಗೆ ಮಜಾ ಉಡಾಯಿಸಿ ಬರುತ್ತಾಳೆ; ಕೂಲಿ ನೆಪದಲ್ಲಿ ಆಕೆ ಮೇಸ್ತ್ರಿಯೊಂದಿಗೆ ದೇಹ ಹಂಚಿಕೊಳ್ಳುತ್ತಾಳೆ ಎನ್ನುವ ಗಾಳಿಮಾತುಗಳು ಕೇವಲ ಊಹಾಪೋಹವಾಗಿದ್ದವು. ಸಿಗಲಾರದ ಹಣ್ಣನ್ನು ಹುಳಿ ಎಂದು ಹೆಸರಿಸಿದವರಲ್ಲಿ ಸಂಕಪ್ಪಯ್ಯನೂ ಒಬ್ಬ! ಕಡ್ಡಿಯನ್ನು ಗುಡ್ಡ ಮಾಡಿ ಅಬರು ತೆಗೆಯಲೆಂದೇ ಕಾಯ್ದು ಕುಳಿತಿರುವ ಗಬರುಗಳಿಗೆ ಬರವೇನೂ ಇಲ್ಲ ಈ ಸಮಾಜದಲ್ಲಿ. ಬಡವನ ಮಗಳು ಗರತಿಯಲ್ಲ ಎಂದು ಹೇಳುವುದು ಸರಿಯೆ? ಊಹಾಪೋಹ ಎಬ್ಬಿಸಿ, ರಾಡಿ-ರಂಬಾಡಿ ಮಾಡಲೆಂದೇ ಕೆಲವರು ಹುಟ್ಟಿರುತ್ತಾರೆ. ಜನ ಅಂದುಕೊಂಡಂತೆ ಬೆಳ್ಳಿಯ ಬಾಳ್ವೆ ಹಾಳಾಗಲಿಲ್ಲ ಗುರಪ್ಪ ಚೆನ್ನಪ್ಪ ಜವಾಬ್ದಾರಿ ಅರಿತು ನಡೆಯತೊಡಗಿದಾಗ ಎಲ್ಲ ಬದಲಾಯಿತು. ಬೆಳ್ಳಿಗೆ ನೆಂಟಸ್ತಿಕೆಯಲ್ಲೇ ವರ ಹುಡುಕಿ ಮದುವೆ ಮಾಡಿಕೊಟ್ಟಿದ್ದು ಚಾಮನಿಗೆ ಎಲ್ಲಿಲ್ಲದ ಖುಷಿಯನ್ನು ತಂದಿತು. ಬೊಚ್ಚುಬಾಯಿ ತೆಗೆದು ಸದಾ ಮಂದಸ್ಮಿತನಾಗಿ ಪದ ಗುನುಗುತ್ತಿರುತ್ತಿದ್ದ. ಬಂದ ಸೊಸೆಯಂದಿರಲ್ಲಿ ಒಬ್ಬಾಕೆ ಬೆಳ್ಳಿಯ ನಾದಿನಿಯಾದರೆ ಇನ್ನೊಬ್ಬಾಕೆ ಕಿರಿಸ್ತಾನಿಯವಳು. ಈ ಬಗ್ಗೆ ಚಾಮನಿಗೆ ತಕರಾರೇನೂ ಇರಲಿಲ್ಲ. ಎತ್ತಿನಂತಿರುವ ಇಬ್ಬರೂ ಗಂಡು ಮಕ್ಕಳು ದುಡಿಯುತ್ತಿರುವಾಗ ಇನ್ನಾತನಿಗೆ ಯಾವ ಚಿಂತೆ?

ಊರಿಗೆ ಈಗ ರಾಜಕೀಯ ಹಾದಿ ತೆರೆದುಕೊಂಡಿದೆ. ಗ್ರಾಮ ಪಂಚಾಯತಿ ಅಧ್ಯಕ್ಷೆಯಾಗಿ ಎಲ್ಲಮ್ಮನ ಜೋಗತಿ ದೊಡ್ಮನಿ ಪೀರವ್ವ ಅಧಿಕಾರ ನಡೆಸುತ್ತಿದ್ದಾಳೆಂದು ಸರ್ಕಾರದ ಕಡತಗಳಲ್ಲಿ ನಮೂದಾಗಿದ್ದರೂ ನಿಜವಾಗಿಯೂ ಅದರಲ್ಲಿ ಆಕೆಗೇನೂ ತಿಳಿಯದು. ಆಕೆಯ ಮಗ ಶಂಭನೇ ಎಲ್ಲವನ್ನೂ ಮಾಡಿ ಮುಗಿಸುತ್ತಿದ್ದ. ಗ್ರಾಮ ಪಂಚಾಯತಿ ಕಾರ್ಯದರ್ಶಿ ಸಂಬಾಳಪ್ಪನಿಗೂ-ಶಂಭನಿಗೂ ಎಲ್ಲಿಲ್ಲದ ನಂಟು ಬೆಸೆದುಕೊಂಡಿತು. ಇವರಿಬ್ಬರ ಜೊತೆ ಪಂಚಾಯತಿ ಮೆಂಬರ ಮಂಜ, ಗುರಪ್ಪ, ಚೆನ್ನಪ್ಪರೂ ಕೈ ಮಿಲಾಯಿಸಿದ್ದರೂ ಹಳೆಯ ಚಟ ಬಿಡಲು ಸಾಧ್ಯವೇ? ವಾರಕ್ಕೊಮ್ಮೆಯಾದರೂ ನಗರದ ವೈಶಾಲಿ ಬಾರ್‌ನಲ್ಲಿ ಐದಾರು ಬಾಟ್ಲಿ ಖಾಲಿಯಾಗುತ್ತಿದ್ದವು. ಆದರೆ ಇದು ಯಾರಿಗೂ ತಿಳಿಯದಂತೆ ನಡೆಯುತ್ತಿದ್ದದ್ದು ಮಾತ್ರ ಮೆಚ್ಚಬೇಕಾದುದೇ. ಸಂಕಪ್ಪಯ್ಯನಿಗೆ ಗೊತ್ತಿಲ್ಲವೆಂದಂತಲ್ಲ. ಆತನಿಗೂ ಸಂಬಾಳಪ್ಪ ಒಂದೆರಡು ಸಲ ನೈಂಟೀ ಕುಡಿಸಿ ಕೈ ತೊಳೆದುಕೊಂಡಿದ್ದ.

ದಾರಿಗುಂಟ ಹಾಯ್ದು ನಡೆದಿದ್ದ ಸಂಕಪ್ಪಯ್ಯನ ಕಂಡು ಅತ್ತ ತಿರುಗುತ್ತಿದ್ದ ಚಾಮ ತಟ್ಟನೇ ನಿಂತು ''ನಮಸ್ಕಾರೀ ಧಣಿ... ಚೆನ್ನಾಗಿದೀರಿ?'' ಎಂದು ಕೈಜೋಡಿಸಿದ. ಕಿಸೆಯಲ್ಲಿ ನಯಾಪೈಸೆಯೂ ಇಲ್ಲದೇ ನಾಳೆ ನಗರಕ್ಕೆ ಹೋಗುವುದು ಹೇಗೆ ಎಂದು ಚಿಂತಿಸುತ್ತಿದ್ದ ಸಂಕಪ್ಪಯ್ಯ ತಟ್ಟನೆ ತಲೆಯೆತ್ತಿ ನೋಡಿದ. ಚಾಮನ ಕಂಡರೆ ಆತನಿಗೆ ತಳಮಳ ಸುರುವಾಗುತ್ತಿತ್ತು. ಅಂದು ತುತ್ತು ಕೂಳಿಗಾಗಿ, ಪಿರಿ ಪಿರಿಯಾದ ಇದೇ ಚಾಮ, ಇಂದು ರಾಜ್ಯಮಟ್ಟದಲ್ಲಿ ಪ್ರಶಸ್ತಿ ಪಡೆದ ಜಾನಪದ ಕಲಾವಿದ. ಮಾಸಾಶನವೂ ಬರುತ್ತಿದೆಯಂತೆ! ಚಾಮ ಎದುರಿಗೆ ಬಂದಾಗಲೆಲ್ಲ ಆತನಿಂದ ತಪ್ಪಿಸಿಕೊಳ್ಳಲು ಸಂಕಪ್ಪಯ್ಯ ಪ್ರಯತ್ನಿಸುತ್ತಿದ್ದ. ಅದು ಹೊಟ್ಟೆಕಿಚ್ಚಿನಿಂದಲೋ, ತಾನಂದು ಆತನ ಮನವಿ ತಿರಸ್ಕರಿಸಿದ ಪಶ್ಚಾತ್ತಾಪದ ದೆಸೆಯಿಂದಲೋ ಎಂಬುದು ಮಾತ್ರ ಒಗಟಾಗಿ ಒಡೆಯಲು ಬಾರದಂತಿತ್ತು.

''ಏನ ಧಣಿ ದಣದಂಗ ಕಾಣ್ತೇತಿ. ಮನಿಯೊಳಗ ಎಲ್ರೂ ಆರಾಮಿದ್ದಾರಾ?'' ಎಂದ ಚಾಮನನ್ನು ದಿಟ್ಟಿಸಲಾಗಲಿಲ್ಲ. ತನ್ನೆಲ್ಲ ಕಷ್ಟಗಳನ್ನು ಚಾಮನ ಮುಂದೆ ತೋಡಿಕೊಂಡು ಅತ್ತುಬಿಡಬೇಕು ಅನ್ನಿಸುತ್ತಿತ್ತು. ಆದರೆ ಗೌಡಿಕೆಯ ಗತ್ತು ಅಡ್ಡ ಬರುತ್ತಿತ್ತು. ''ಏನಿಲ್ಲ ಚಾಮ. ಪಕ್ಕದೂರಿನ ಬಸನಗೌಡ್ನ ಮನೀಗಿ ಹೋಗಿದ್ದೆ. ಬಿಸಿಲಲ್ಲಿ ಸ್ವಲ್ಪ ದಣಿವಾತ ಅಷ್ಟೆ'' ಎಂದು ಹೇಳಿ ಮುನ್ನಡಿದಿದ್ದ.

* * *

ಬಸನಗೌಡನ ಮಾತು ಮೀರಲಾಗಿರಲಿಲ್ಲ. ಅಲ್ಲಿಗೆ ಹೋಗದಿದ್ದರೆ ನಾಳೆ ಯಾವ ಮುಖಹೊತ್ತು ಆತನನ್ನು ಸಾಲಕೇಳುವುದು. ಆದರೆ ಒಂದು ನಯಾಪೈಸೆ ಕೂಡ ತನ್ನ ಹತ್ತಿರ ಇಲ್ಲ. ಹತ್ತು ರೂಪಾಯಿಯಾದರೂ ಇದ್ದಿದ್ದರೆ ಬಸ್ಸಿನಲ್ಲಿ ಹೋಗಿ ಬರಬಹುದಾಗಿತ್ತು. ಆದದ್ದಾಗಲಿ ಎಂದುಕೊಂಡ ಸಂಕಪ್ಪಯ್ಯ ನೀಲಗಾರ ಭೀಮವ್ವನ ಕೋಳಿ ಕೂಗುವುದಕ್ಕಿಂತ ಮುಂಚೆಯೇ ಎದ್ದು ತಯಾರಾಗಿ ಜಿಲ್ಲಾ ಸ್ಥಳಕ್ಕೆ ಪೈಲ ನಡೆದಿದ್ದ. ಸ್ಪಷ್ಟತೆ ಇರದ ವಿಚಾರಗಳು ತಲೆತಿನ್ನುತ್ತಿದ್ದವು. ಐದಾರು ತಾಸಿನ ಹಾದಿ. ಚಳಿ ಸರಿದು ಎಳೆಬಿಸಿಲು ಮೈ ಮುತ್ತಿದಾಗ ಹುರುಪಿನ ಹೆಜ್ಜೆ ಹಾಕತೊಡಗಿದ. ಆದರೆ ಹೊತ್ತೇರಿದಂತೆ ಹೊಟ್ಟೆ ಚುರುಗುಟ್ಟತೊಡಗಿತ್ತು. ಮನೆಯಲ್ಲಿ ಏನಾದರೂ ತಿಂದು ಬಂದಿದ್ದರೆ ಒಳ್ಳೆಯದಿತ್ತು ಎನಿಸಿತು. ನಸುಕಿನ ಅಥವಾ ಇಳಿರಾತ್ರಿಯ ಮೂರ್‍ನಾಲ್ಕು ಗಂಟೆಗೆ ಹೊಟ್ಟೆಗನ್ನ ಇಳಿದಿತ್ತೆ? ಅದು ಅಲ್ಲದೆ ತಿಂಗಳಿನಿಂದ ಹುಷಾರಿಲ್ಲದೆ ಹಾಸಿಗೆ ಹಿಡಿದ ಹೆಂಡತಿಯನ್ನೇಕೆ ಅಷ್ಟೊತ್ತಿನಲ್ಲಿ ಎಬ್ಬಿಸಬೇಕು? ಮನೆಗೆ ಬಂದಾಗ ಲಕ ಲಕ ಹೊಳೆಯುತ್ತಿದ್ದ ಆಕೆ, ತಮಗೆ ಕೆಟ್ಟ ದಿನಗಳು ಬಂದಾಗ ದುಡಿತಕ್ಕೆ ಒಗ್ಗಿಕೊಂಡು ಹಣ್ಣಾಗಿ ಹೋಗಿದ್ದಾಳೆ; ಸೊರಗಿ ಕಡ್ಡಿಯಾಗಿದ್ದಾಳೆ.

ಜಿಲ್ಲಾಧಿಕಾರಿ ಕಛೇರಿ ಮುಟ್ಟಿದಾಗ, ಅಲ್ಲಿ ಗೋಡೆಗೆ ಮೆತ್ತಿದ್ದ ದೊಡ್ಡ ಗಡಿಯಾರದ ದಪ್ಪ ಗಿಡ್ಡ ಮುಳ್ಳು ಹತ್ತರ ಸಮೀಪದಲ್ಲೂ, ಸಬಳ ಉದ್ದ ಮುಳ್ಳು ಒಂಬತ್ತರ ಮೇಲೂ ಗೆರೆ ಕೊರೆಯುತ್ತಿದ್ದವು. ಆಗಷ್ಟೇ ಬಂದಿದ್ದ ಆಫೀಸಿನ ಜವಾನರು ಕಸಗುಡಿಸುತ್ತಿದ್ದರು. ಪ್ರತಿಭಟನೆಕಾರರ ಸುಳಿವೇ ಇರಲಿಲ್ಲ. ಹೊಟ್ಟೆ ಹಸಿವಿನಿಂದ ಕಪ್ಪೆಯಂತೆ ಆಗಾಗ ವಟರ್ ಗುಟ್ಟುತ್ತಿತ್ತು. ಕಿಸೆ ಮುಟ್ಟಿಕೊಂಡ. ಒಂದೇ ಒಂದು ಮುರುಕಲ ಬೀಡಿ ನಾನಿದ್ದೇನೆ ಎಂದು ಸಾರಿತು. ಅದನ್ನೇ ತೆಗೆದು ಬಾಯಿಗಿಟ್ಟ. ಬೆಂಕಿಪೊಟ್ಟಣಕ್ಕಾಗಿ ಮತ್ತೇ ಕಿಸೆ ತಡಕಾಡಿದ. ಕಿಸೆಯೊಳಗಿನ ದಾರದ ಚುಂಗಗಳನ್ನು ಬಿಟ್ಟರೆ ಕೈಗೇನೂ ಸಿಗಲಿಲ್ಲ. ಜವಾನರು ಗುಡಿಸಿದ ಕಸವನ್ನು ದೂರದಲ್ಲಿ ಒಂದು ಕಡೆ ಗುಡ್ಡೆಹಾಕಿ ಬೆಂಕಿ ಹಚ್ಚಿದ್ದರು. ಅದೇ ಬೆಂಕಿಯಲ್ಲಿ ಬೀಡಿ ಹೊತ್ತಿಸಿಕೊಂಡು ಬಾಯಿಗಿಟ್ಟು ಒಂದು ದಮ್ ಎಳೆದ. ಸ್ವಲ್ಪ ಸಮಾಧಾನವಾದಂತಾಯಿತು

ಸರಿಯಾಗಿ ಹತ್ತೂವರೆಗೆ ಇಬ್ಬರು ಹುಡುಗರು ಬಂದು ಬ್ಯಾನರ್ ಬಿಚ್ಚಿ ಲಾಠಿಗೆ ಸಿಕ್ಕಿಸತೊಡಗಿದರು. ಆಮೇಲೆ ಪೊಲೀಸ್ ಜಾಳಗಿ ಗಾಡಿ ಬುರ್ರನೇ ಬಂದು ನಿಂತಿತು. ಎಂಟತ್ತು

ಬೂಟು-ಲಾಠಿಗಳು ಕೆಳಗೆ ಧಿಮಾಕಿನಿಂದ ಇಳಿದು ನಿಂತವು. ಅಷ್ಟರಲ್ಲಿ ಗುಡುಗುಡು ಸಪ್ಪಳದೊಂದಿಗೆ ಬುಲೆಟ್ ಮೇಲೆ ಬಂದ ಅತಿಕಾಯ ಪೊಲೀಸು ಮೊದಲಿದ್ದ ಗುಂಪಿನ ಹತ್ತಿರ ಇಳಿದು ವಿಚಾರಿಸಿದಂತೆ ಮಾಡಿ, ನಡುಪಟ್ಟಿಗೆ ಸಿಕ್ಕಿಸಿದ್ದ ರೇಡಿಯೋದಂಥ ವೈರ್‌ಲೆಸ್ ಮೂಲಕ ಕರ್ಣ ಕಠೋರ ಧ್ವನಿಯಲ್ಲಿ ಏನೋ ಗುಸುಗುಸು ಮಾಡಿ ಅಲ್ಲಿಂದ ಮತ್ತೇ ಗುಡುಗುಡಿಸಿದ. ಪೊಲೀಸನೊಬ್ಬ ಸಂಕಪ್ಪಯ್ಯನ ಕಡೆ ವಕ್ರವಾಗಿ ನೋಡಿ, ಹುಡುಗರಿದ್ದಲ್ಲಿಗೆ ಹೋಗಿ, ''ಎಲ್ರಪ್ಪಾ ನಿಮ್ಮ ಲೀಡರ್ರು...'' ಎಂದಾಗ, ''ಬರತಿರಬಹುದು'' ಎಂಬ ಏಕಶಬ್ದೀ ಉತ್ತರ ನೀಡಿದ ಹುಡುಗ. ಮತ್ತೊಂದು ಬ್ಯಾನರ್‌ನ ಅಂಚಿನ ತೂತಿಗೆ ಕೋಲು ತುರುಕತೊಡಗಿದ. ಪೊಲೀಸು ವಿಚಿತ್ರವಾಗಿ ನಕ್ಕು ಮತ್ತೇ ತನ್ನ ಗುಂಪಿನತ್ತ ಮರಳಿದ. ಹನ್ನೊಂದು ಗಂಟೆಗೆ ಎಣಿಸಿದರೆ ಹತ್ತಿಪ್ಪತ್ತು ತಲೆಗಳು ಅಲ್ಲಿ ಕಲೆತಿದ್ದವು. ಅವೆಲ್ಲವೂ ತನ್ನಂತೆಯೇ ಮುಖ ಒಣಗಿಸಿಕೊಂಡು ನಿಂತಿರುವ ಪರಿಗೆ ಸಂಕಪ್ಪಯ್ಯನಿಗೆ ಮನದಲ್ಲೇ ನಗು ಬಂತು; ತಡೆದುಕೊಂಡ. ಒಂದೇ ಕಡೆ ನಿಂತರೆಲ್ಲಿ ಜೋಲಿತಪ್ಪಿ ಬೀಳಬಹುದೆಂದು ಹೆದರಿದ ಆತ ಹಾಗೇ ಒಂದು ರೌಂಡ್ ಹಾಕಿಬರಲು ಹೆಜ್ಜೆ ಕಿತ್ತಿಡತೊಡಗಿದ.

ಜನ ಸಂಚಾರ ಜಾಸ್ತಿಯಾಗತೊಡಗಿತ್ತು. ಪೈದಲಿಗಳಿಗಿಂತ ರಂವ್ ರಂವ್ ಪಟಪಟಿ – ಮೋಟಾರುಗಳ ಓಡಾಟದಲ್ಲಿ ಅಂಜುಂಜುತ್ತಲೇ ಹೆಜ್ಜೆ ಇಡುತ್ತ ನಡೆದಿದ್ದ ಸಂಕಪ್ಪಯ್ಯನ ಎದುರಿಗೆ 'ಶ್ರೀ ರಾಘವೇಂದ್ರ ಉಡುಪಿ ಹೋಟೆಲ್' ಎಂಬ ಕಲರಫುಲ್ ಬೋರ್ಡು ಕಣ್ಣಿಗೆ ರಾಚಿತು. ಹೋಟೆಲಿನಿಂದ ಘಮ ಘಮ ವಾಸನೆ ಸಂಕಪ್ಪಯ್ಯನ ನಾಸಿಕದೊಳಗೂ ಸೇರಿ ಮುದ್ದುಮಾಡತೊಡಗಿದಾಗ, ಸಹಜವೆನ್ನುವಂತೆ ಕೈ ಕಿಸೆಗಳನ್ನು ತಡಕಾಡಿತು. ದಾರಿನ ಚುಂಗು ಬಿಟ್ಟರೆ ಉಳಿದುದೇನಿದೆ ಅಲ್ಲಿ? 'ಎಲ್ಲಿರುವೆ ಮನವ ಕಾಡುವ ರೂಪಸಿಯೆ...' ಹಾಡು ಸುರುಳಿ ಸುತ್ತುತ್ತ ಹೋಟೆಲಿನಿಂದ ತೇಲಿ ಬರುತ್ತಿತ್ತು. ಸಣ್ಣದಾಗಿದ್ದ ಮುಖವನ್ನು ಮತ್ತಷ್ಟು ಸಣ್ಣದಾಗಿಸಿಕೊಂಡ ಸಂಕಪ್ಪಯ್ಯ ಅಲ್ಲಿಂದ ಕಾಲ್ತೆಗೆಯಬೇಕು ಎನ್ನುತ್ತಿರುವಾಗಲೇ ಹೋಟೆಲಿನಲ್ಲಿ ಪರಿಚಿತ ಮುಖವೊಂದು ಕಂಡಿತು. 'ಅರೇ ಬಸನಗೌಡ' ಎಂದು ಉದ್ಗರಿಸಿದ ಸಂಕಪ್ಪಯ್ಯ, ಬಸನಗೌಡ ಒಬ್ಬನೇ ಇರುವುದನ್ನು ಸದುಪಯೋಗಪಡಿಸಿಕೊಳ್ಳಲು ಹೋಟೆಲಿನೊಳಕ್ಕೆ ನುಗ್ಗಿದ. ತಾನು ಹೇಳಿದ ಮಾತಿಗೆ ಸಂಕಪ್ಪಯ್ಯ ಬಂದುದು ಬಸನಗೌಡನಿಗೆ ಸಂತೋಷವೇ ಆಗಿತ್ತು. ''ಅಲ್ಲೇ ಇರ್ಬೇಕಾಗಿತ್ತು. ವೇಳೆ ಆಗಿದೆ. ಎಲ್ಲರೂ ಬಂದಿರ್ಬೇಕು'' ಎಂದು ಅವಸರಿಸುವ ಹೊತ್ತಿಗೆ ಸಪ್ಲಾಯರ್ ಬಂದು ''ಮತ್ತೇನ ತರ್ಲಿ ಸರ'' ಎಂದ. ಬೈಟು ಚಹಾಗೆ ಆರ್ಡರ್ ಮಾಡಿದ ಬಸನಗೌಡ. ದೋಸೆ-ಇಡ್ಲಿ ತಿಂದ ಪ್ಲೇಟುಗಳು ಸಂಕಪ್ಪಯ್ಯನನ್ನು ಅಣಕಿಸುತ್ತಿದ್ದವು. ಹಾಗೂ ಹೀಗೂ ಮಾಡಿ, ತನ್ನ ಕಷ್ಟವನ್ನೆಲ್ಲ ಚುಟುಕಿನಲ್ಲಿ ತೋಡಿಕೊಂಡ ಸಂಕಪ್ಪಯ್ಯ ''ಸ್ವಲ್ಪ ಸಾಲ ಬೇಕಾಗಿತ್ತು...'' ಎನ್ನುವುದೇ ತಡ, ಅಲ್ಲಿವರೆಗೆ ಆಸ್ಥೆಯಿಂದ ಕೇಳಿಸಿಕೊಳ್ಳುತ್ತಿದ್ದ ಬಸನಗೌಡ, ''ತಪ್ಪ ತಿಳಿಬೇಡ ಸಂಕಪ್ಪಯ್ಯ. ಈ ಸಲಾ ಮಳಿ ಇಲ್ಲದ ನನ್ನ ಸ್ಥಿತೀನೂ ಸದ್ಯ ನಿನ್ನಂಗ ಆಗಿದೆ. ಸುಮ್ನ ಮೇಲಿನ ಮಾತಿಗೆ ನಾವ ಸೊಲ್ಪ ಟಬರ್ ಮಾಡ್ಬೇಕಾಗ್ತದೆ... ಬೇರೆ ಎಲ್ಲಾದರೂ ಕೇಳಿ ನೋಡು...'' ಎಂದು ಹೇಳಿ ಸಪ್ಲಾಯರ್ ತಂದಿಟ್ಟ ಚಹಾ ಒಂದೇಟಿಗೆ ಕುಡಿದು, ''ತಡಾ ಆತು, ಚಹಾ ಕುಡಿದು ಅಲ್ಲೇ ಬಾ'' ಎಂದು ಹೇಳಿ ಬಿಲ್ ಕೊಟ್ಟು ಅಲ್ಲಿಂದ ದೌಡಾಯಿಸಿದ.

ಬಸನಗೌಡನ ಮಾತು ಕೇಳಿ ಸಂಕಪ್ಪಯ್ಯ ಸರ್ರನೇ ಇಳಿದುಹೋದ. ಗಂಟಲಲ್ಲಿ ಚಹಾ ಇಳಿಯಲಿಲ್ಲ. ಹೋದ ಸಲವೇ ಬೋರವೆಲ್ ಹಾಕಿಸಿ ಬೆಳೆ ತೆಗೆದು ಮೆರೆದಿದ್ದ. ಈ ಸಲವು ಫಸಲು ಚೆನ್ನಾಗಿಯೇ ಬಂದಿದೆ. ಬಿಡುವಿಲ್ಲದಂತೆ ಮಹೀಂದ್ರಾ ಟ್ರ್ಯಾಕ್ಟರೊಂದು ಬಾಡಿಗೆಗೆ ದುಡಿಯುತ್ತಿದೆ. ಅಷ್ಟಕ್ಕೂ ತಾನೇನು ಇಡೀ ಆಸ್ತಿಯನ್ನೇನೂ ಬೇಡಿರಲಿಲ್ಲ. ಮುಂಗಾರು ಬಿತ್ತನೆಗೆ ಅನುಕೂಲವಾದೀತೆಂದು ಬರೀ ಒಂದೆರಡು ಸಾವಿರ ರೂಪಾಯಿ ! ಮೈಯೆಲ್ಲ ಕುದಿಯಿತು. ಚಾಮ ಕಣ್ಣೆದುರು ಬಂದ. ಹೀಗೆ ಅಲ್ಲವೆ, ಚಾಮ ಕೂಡ ತನಗೊಂದಿಷ್ಟು ಗೇಯ್ದು ತಿನ್ನಲು ಭೂಮಿ ಕೊಡು ಎಂದು ಬೇಡಿಕೊಂಡಿದ್ದು, ಅವ್ವನ ಮಾತು ಕೇಳಿ ಇದ್ದರೂ ಇಲ್ಲವೆಂದು ತಿರಸ್ಕರಿಸಿದ್ದು ! ಸಂಕಪ್ಪಯ್ಯನಿಗೆ ನಿಜವಾಗಿಯೂ ಅಳು ಬಂದಂತಾಯಿತು.

* * *

ಸುಮಾರು ನೂರು-ನೂರಾ ಇಪ್ಪತ್ತು ಮಂದಿ ಸೇರಿದ್ದರು. ಮಡಿಕೆಯಾಗಿದ್ದ ಬ್ಯಾನರ್‌ಗಳು ಸೆಟೆದು ನಿಂತಿದ್ದವು. ಬಸನಗೌಡ ಆ ಮಂದಿಯ ಎದುರಿನ ಕಟ್ಟೆಯ ಮೇಲೆ ಕೈಕಟ್ಟಿ ನಿಂತಿದ್ದ. ಆತನ ಪಕ್ಕದಲ್ಲಿದ್ದ ದಢೂತಿ ಆಸಾಮಿ ಕಣ್ಣಿಗೊಂದು ಕರಿಚೇಸ್ಮಾ ಹಾಕಿ ಕೊಂಡಿದ್ದು, ಥೇಟ್ ಹಳೇ ಸಿನೇಮಾದ ವಿಲನ್ ಥರಾ ಕಾಣುತ್ತಿದ್ದ. ತಮಗಾದ ಅನ್ಯಾಯವನ್ನು ಜಗಿಜಗಿದು ಹೇಳುತ್ತ, ಚೀರುತ್ತಿದ್ದ. ಬರುವವರು ಬರುತ್ತಿದ್ದರು, ಹೋಗುವವರು ಹೋಗುತ್ತಿದ್ದರು. ಕೇಂದ್ರ ಸರ್ಕಾರದ ಹೊಗಳಿಕೆಯಿಂದ ಪ್ರಾರಂಭಿಸಿ ರಾಜ್ಯ ಸರ್ಕಾರದ ಕಾರ್ಯವೈಖರಿಯನ್ನು ಟೀಕಿಸಿ ಆಕ್ರೋಶಪೂರಿತನಾಗಿ ಕೈ ಕುಣಿಸುತ್ತಿದ್ದ. ಚೀರಿ ಚೀರಿ ಉಸಿರು ಗಟ್ಟಿ ನಿಂತಾಗೊಮ್ಮೆ ಮಂದಿ ಯಾರದೋ ಸೂಚನೆ ಮೇರೆಗೆ ಎರಡೂ ಕೈ ಜೋಡಿಸಿ ಚಪ್ಪಾಳೆ ತಟ್ಟುತ್ತಿದ್ದರು. ಇದೇ ಸಮಯವನ್ನು ಸದುಪಯೋಗಪಡಿಸಿಕೊಳ್ಳುತ್ತಿರುವವನಂತೆ ಆ ಮುಖಂಡ ಬಿಸ್ಲೇರಿ ವಾಟರ್‌ನ್ನು ಹೊಟ್ಟೆಗಿಳಿಸುತ್ತಿದ್ದ. ಅನಂತರ ಬಸನಗೌಡನೂ ಲೋಕೋಪಚಾರದ ಮಾತುಗಳನ್ನಾಡಿದ. ಅಲ್ಲೇ ಒಂದು ಕಂಬಕ್ಕೊರಗಿ ನಿಂತಿದ್ದ ಸಂಕಪ್ಪಯ್ಯ ಒಮ್ಮೆ 'ಥೂ' ಎಂದು ಉಗುಳಿದ. ಒಬ್ಬರಾದ ಮೇಲೆ ಒಬ್ಬರಂತೆ ಐದಾರು ಜನ ಮಾತನಾಡಿದರು. ಅನಂತರ ಎಂದಿನಂತೆ ಡಿ. ಸಿ. ಸಾಹೇಬರು ಇಲ್ಲದ ಕಾರಣ ಅವರ ಅನುಪಸ್ಥಿತಿಯಲ್ಲಿ ಆಫೀಸಿನ ಒಬ್ಬ ಅಧಿಕಾರಿ ಕೈಗೆ ಮನವಿ ಹಸ್ತಾಂತರವಾಯಿತು. ಟಿ. ವಿ. ಚಾನಲ್‌ಗಳ ಕ್ಯಾಮರಾಗಳೂ ಫೋಟೋ ಕ್ಯಾಮರಾಗಳೂ, ಪತ್ರಿಕಾ ವರದಿಗಾರರ ಪೆನ್ನು ಪುಸ್ತಕಗಳೂ ಬಿರುಸಿನಿಂದ ಕಾರ್ಯೋನ್ಮುಖವಾದವು. ಡಿ. ಸಿ. ಸಾಹೇಬರು ಬಂದ ಮೇಲೆ ಮನವಿಯನ್ನು ಅವರಿಗೆ ನೀಡಿ ವಿಷಯ ತಿಳಿಸಿ, ಕ್ರಮ ಕೈಗೊಳ್ಳುವಂತೆ ಮಾಡುತ್ತೇನೆಂದು ಅಧಿಕಾರಿ ಬೊಗಳೆ ಬಿಟ್ಟ ಮೇಲೆ ಧುರೀಣರು ನಿಲ್ಲೆಂದರೂ ಕೇಳದೆ, ಹಸಿವಾಗಿದ್ದ ಜನವೆಲ್ಲ ಚೆಲ್ಲಾಪಿಲ್ಲಿಯಾಯಿತು. ಪೊಲೀಸರ ಹಿಂಡು ನಾಟಕ ನೋಡುತ್ತಿರುವಂತೆ ಎಂಜಾಯ್ ಮಾಡುತ್ತಿತ್ತು. ಈ ಪ್ರತಿಭಟನೆಯ ಉದ್ದೇಶ, ಗೊತ್ತು ಗುರಿ ಏನೆಂದು ಸಂಕಪ್ಪಯ್ಯನಿಗೆ ಒಂದೂ ತಿಳಿಯಲಿಲ್ಲ. ನಡೆದುಬಂದಿದ್ದ ಸುಸ್ತು, ದಣಿವು ಒಂದು ಕಡೆ, ಹೊಟ್ಟೆಯಿಂದ ಬಾಯಿಗೆ ಬರುತ್ತಿದ್ದ ಹಸಿವು ಇನ್ನೊಂದು ಕಡೆ, ಮುಂಗಾರಿಗೆ ಏನೂ ತಯಾರಿ ಇಲ್ಲದ ದೀನಸ್ಥಿತಿ ಮತ್ತೊಂದು ಕಡೆಯಾಗಿ, ನಿಂತಿದ್ದ ಕಂಬವನ್ನೇ ಆಧರಿಸಿ ಆತ ಕುಳಿತುಕೊಂಡ. ನೆತ್ತಿ ಮೇಲೆ ಸುಡು ಸುಡು ಸೂರ್ಯ ಬೆಂಕಿ ಹಚ್ಚಿದ್ದ.

* * *

ಊರಿನಲ್ಲಿ ಜಾನಪದ ಉತ್ಸವದ ಉಸ್ತುವಾರಿ ಗ್ರಾಮ ಪಂಚಾಯತಿ ಹೊತ್ತಾಗ ಶಂಭ, ಮಂಜ, ಸಂಭಾಳಪ್ಪ ಒಂದಾಗಿ ಓಡಾಡತೊಡಗಿದ್ದು, ಅದಕ್ಕೆ ಮುಂದಾಳಾಗಿ ಚಾಮನನ್ನು ಮಾಡಿಕೊಂಡಿದ್ದು, ಆ ವಿಷಯವನ್ನು ಗಟ್ಟಿಗೊಳಿಸಿಕೊಳ್ಳಲು ಅವರೆಲ್ಲ ನಗರಕ್ಕೆ ಬಂದಿದ್ದರು. ಜೊತೆಗೆ ಚೆನ್ನಪ್ಪನೂ ಇದ್ದ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಎಲಿ ತಿನ್ನುತ್ತ ಕುಳಿತಿದ್ದ ಸಹ ನಿರ್ದೇಶಕ ಮೊದಮೊದಲು ಧಿಮಾಕಿನಿಂದ ಮಾತನಾಡಿ, ಉಡಾಫೆ ತೋರಿದ. ಚಾಮನನ್ನು ಬಿಟ್ಟರೆ ಉಳಿದವರು ಈಗಾಗಲೇ ದಲಿತ ಸಂಘಟನೆಗಳಲ್ಲಿ ಓಡಾಡಿದವರು. ಇಂತಹ ಅನುಭವ ಅವರಿಗೆ ಮೊದಲೇನಲ್ಲ. ಶಿಸ್ತು ಕಲಿಯುವಂತೆ ಜಬರಿಸಿದರು. ಆದರೆ ಆತ ತನ್ನದೇ ಸರಿಯೆಂದು ವಾದಿಸತೊಡಗಿದ. ಪರ್ಸೆಂಟೇಜ್ ಹೊಡೆಯಲು ಆತ ಈ ರೀತಿ ನಾಟಕ ಮಾಡುತ್ತಾನೆಂದು ಸಂಭಾಳಪ್ಪ-ಚಾಮನಿಗೆ ತಿಳಿದಿತ್ತು. ಆದರೆ ಶಂಭ, ಮಂಜ, ಚೆನ್ನಪ್ಪ ಪಟ್ಟು ಬಿಡಲಿಲ್ಲ. ಅಷ್ಟರಲ್ಲಿ ಅಚಾನಕ್ಕಾಗಿ ಅಲ್ಲಿಗೆ ಇಲಾಖೆಯ ಉಪನಿರ್ದೇಶಕರು ಬಂದರು. ವಿಷಯ ತಿಳಿದು ಸಹನಿರ್ದೇಶಕನಿಗೆ ಛೀಮಾರಿ ಹಾಕಿ ಆತ್ಮೀಯ ಗೌರವಗಳೊಂದಿಗೆ ಬಂದವರೊಡನೆ ಚರ್ಚಿಸಿ, ಕಾಫಿ ತರಿಸಿಕೊಟ್ಟು, ಇಲಾಖೆಯ ಎಲ್ಲ ಹಾದಿಗಳನ್ನೂ ತೆರೆದಿಟ್ಟರು. ಅಂತಿಮವಾಗಿ ಕಾರ್ಯಕ್ರಮ ಪಟ್ಟಿ ಅಲ್ಲೇ ತಯಾರಾಯಿತು. ಇನ್ನು ಡಿ. ಸಿ. ಸಾಹೇಬರಿಗೆ ಅಷ್ಟು ಹೇಳಿದರೆ ಮುಗಿಯಿತು. ಉಪನಿರ್ದೇಶಕರೇ ತಮ್ಮ ಡಕೋಟಾ ಜೀಪಿನಲ್ಲಿ ಅವರನ್ನೆಲ್ಲ ಕರೆದುಕೊಂಡು ಡಿ. ಸಿ. ಆಫೀಸಿನತ್ತ ಸಾಗಿದರು.

ಡಿ. ಸಿ. ಆಫೀಸಿನ ಪಾರ್ಕಿಂಗ್‌ನಲ್ಲಿ ಜೀಪು ಕರ್‍ರ್ರ್ ಸಪ್ಪಳದೊಂದಿಗೆ ನಿಂತಿತು. ಐವರೂ ಇಳಿದರು. ಚಾಮ ಹಣೆ ಮೇಲೆ ಕೈಯಿಟ್ಟು ಮತ್ತೇ ಮತ್ತೇ ನೋಡಿದ. ಹೌದು, ಆತ ಸಂಕಪ್ಪಯ್ಯನೇ ! ಬಿಟ್ಟ ಬಾಯಿ ಬಿಟ್ಟಂತೆ ಕಂಬಕ್ಕೊರಗಿ ಕುಳಿತಿದ್ದಾನೆ. ಹಾದು ಹೋಗುವ ಜನ ನೋಡಿಯೂ ನೋಡದಂತೆ ಹೋಗುತ್ತಿದ್ದಾರೆ. ಚಾಮ ಅತ್ತ ಧಾವಿಸಬೇಕೆಂದಾಗ ಸಂಭಾಳಪ್ಪ ''ಆ ಕಡಿ ಎಲ್ಲೋ ಅಜ್ಜ, ಈ ಕಡಿ ಬಾ...'' ಎಂದು ಕರೆದ ''ಅಲ್ಲಿ ಸಂಕಪ್ಪಯ್ಯ'' ಎಂದು ಚಾಮನ ಮಾತು ಕೇಳಿ ಶಂಭ ತಕ್ಷಣ ಅತ್ತ ಧಾವಿಸಿದ. ಉಳಿದವರೂ ಹಿಂಬಾಲಿಸಿದರು. ಸಂಕಪ್ಪಯ್ಯ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ಮಂಜ ಓಡಿಹೋಗಿ ಆಫೀಸಿನಿಂದ ಒಂದು ಗ್ಲಾಸ್ ನೀರು ತಂದು, ಹನಿ ಹನಿ ಕುಡಿಸಿದ. ಏನು-ಎತ್ತ ವಿಚಾರಿಸಿದರೂ ಸಂಕಪ್ಪಯ್ಯನ ಕೈಸನ್ನೆ ಅಲ್ಲಿಯವರಿಗೆ ಅರ್ಥವಾಗಲಿಲ್ಲ. ಚಾಮ ದುಃಖಿತನಾಗಿದ್ದ. ಸಂಕಪ್ಪಯ್ಯನನ್ನು ಆಸ್ಪತ್ರೆಗೆ ಸಾಗಿಸಲು ಸಹಕರಿಸಬೇಕು ಎಂದು ಉಪನಿರ್ದೇಶಕರ ಹತ್ತಿರ ಬೇಡಿಕೊಂಡ. ಸಂಸ್ಕೃತಿ ಇಲಾಖೆ ಜೀಪಿನಲ್ಲೇ ಮಂಜ, ಚೆನ್ನಪ್ಪ ಸಂಕಪ್ಪಯ್ಯನನ್ನು ಹೊತ್ತೊಯ್ದು ಮಲಗಿಸಿದರು. ''ಅವರು ಹೋಗಲಿ, ನಾವು ಡಿ. ಸಿ. ಸಾಹೇಬರಿಗೆ ಭೇಟಿಯಾಗೋಣ'' ಎಂದು ಉಪನಿರ್ದೇಶಕ ಹೇಳಿದಾಗ, ಚಾಮ ಇಲ್ಲವೆನ್ನುವಂತೆ ತಲೆಯಾಡಿಸಿ,''ಡಿ. ಸಿ. ಸಾಹೇಬರಿಗೆ ನಾಳೆ ಭೇಟಿಯಾಗೋಣ'' ಎಂದಷ್ಟೇ ಹೇಳಿ, ಜೀಪನ್ನೇರಿ, ಸಂಕಪ್ಪಯ್ಯನ ತಲೆಯನ್ನು ತನ್ನ ತೊಡೆ ಮೇಲಿಟ್ಟುಕೊಂಡ. ಸಂಕಪ್ಪಯ್ಯನ ಕಣ್ಣಿಂದ ಹನಿಗಳುದುರಿ ಚಾಮನ ಧೋತರ ತೊಯ್ಯಿತು.

ಕೆ. ಸಿದ್ರಾಮ
'ಸಾಯಿ ಸ್ವರೂಪ', ನಂ. ೮೧, ಚೆನ್ನಬಸವೇಶ್ವರ ನಗರ, ಧಾರವಾಡ - ೫೮೦ ೦೦೭

ಇತ್ತೀಚಿನ ಮಾರ್ಚ್-ಏಪ್ರಿಲ್ ತಿಂಗಳ ಅವಧಿಯಲ್ಲಿ ನಮ್ಮ ದೇಶಾದ್ಯಂತ ಒಂದು ನಾಟಕೀಯ ಘಟನೆ ಜರುಗಿದ್ದು ಬಹುಜನರ ಗಮನ ಸೆಳೆದಿರಬಹುದು. ಮಹಾತ್ಮಾ ಗಾಂಧಿಯವರು ೭೫ ವರ್ಷಗಳ ಹಿಂದೆ ಕೈಗೊಂಡ 'ದಾಂಡಿ ಯಾತ್ರೆ' (ಉಪ್ಪಿನ ಸತ್ಯಾಗ್ರಹ) ಪ್ರಕರಣವನ್ನು ನೆನಪಿಗೆ ತರುವ ಒಂದು ಕಾರ್ಯಕ್ರಮ ಅದು. ಅಂದು ಬ್ರಿಟಿಷ್ ಆಳರಸರ ದುರಾಡಳಿತದ ದಾಸ್ಯದಿಂದ ದೇಶವಿಮೋಚನೆಗಾಗಿ ಇಟ್ಟ ತೀರಾ ಸರಳ ಆದರೂ ನಿರ್ಣಯಾತ್ಮಕ ದಿಟ್ಟ ಹೆಜ್ಜೆ. ಎಲ್ಲಾ ಜೀವಜಂತುಗಳ ಉಳಿವಿಗೆ ಅತ್ಯವಶ್ಯಕವಾದ ಉಪ್ಪಿನ ಮೇಲೆ ಸರ್ಕಾರ ವಿಧಿಸಿದ ತೆರಿಗೆಯನ್ನು ವಿರೋಧಿಸುವ ಸಲುವಾಗಿ ಮೋಹನದಾಸ ಕರಮಚಂದ ಗಾಂಧಿ ಎಂಬ ವ್ಯಕ್ತಿ ತನ್ನ ಸಹಚರರೊಂದಿಗೆ ತಾವು ವಾಸಿಸುತ್ತಿದ್ದ ಸಾಬರಮತಿ ಆಶ್ರಮದಿಂದ ಇನ್ನೂರು ಮೈಲಿ ದೂರದ ಗುಜರಾತಿನ ಕಡಲತೀರದ 'ದಾಂಡಿ'ಗೆ ಕಾಲ್ನಡಿಗೆಯಲ್ಲಿ ನಡೆದುಹೋದ ಪ್ರಕರಣ ಅದು. ಅಲ್ಲದೆ ಯಾವುದೇ ಆಡಂಬರವಿಲ್ಲದ ಉದ್ವೇಗರಹಿತ, ತೀರಾ ಸರಳ ಹಾಗೂ ಸಹಜ ಯಾತ್ರೆಯಾಗಿತ್ತು. ಆದರೂ ಅದು ಭಾರತವು ಬ್ರಿಟಿಷರ ದಾಸ್ಯವನ್ನು ತೊಡೆದು ಹಾಕಲು ನಾಂದಿಹಾಡಿದ ಮೊಟ್ಟಮೊದಲ ನಿರ್ಣಾಯಕ ಹೆಜ್ಜೆ ಎಂಬುದಾಗಿ ನಮ್ಮ ಸ್ವಾತಂತ್ರ್ಯ ಆಂದೋಳನದ ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ.

ದಾಂಡಿ ಯಾತ್ರೆಯಂತಹ ಒಂದು ಮಹತ್ವದ ಚಾರಿತ್ರಿಕ ಘಟನೆಯನ್ನು ಸ್ವಾತಂತ್ರ್ಯದ ಪ್ರತಿಫಲವನ್ನು ಅನುಭವಿಸುತ್ತಿರುವ ದೇಶಬಾಂಧವರೆಲ್ಲ ಇಂದು ನೆನಪಿಗೆ ತಂದು ಘನತೆ, ಗೌರವಗಳಿಂದ ಆಚರಿಸುವುದು ನ್ಯಾಯಸಮ್ಮತವೇ. ಆದರೆ ಈಗ ಆ ಸಲುವಾಗಿ ಜರುಗಿಸಿದ ಯಾತ್ರೆಯ ರೀತಿ-ನೀತಿಗಳು ಮಾತ್ರ ರಾಷ್ಟ್ರಪಿತ ಅಂದು ಜರುಗಿಸಿದ ದಾಂಡಿ ಯಾತ್ರೆಯ ಅಣಕವಾಡುವಿನಂತೆ ಜರುಗಿದ್ದು ಬೇಸರದ ಸಂಗತಿ ಎಂದು ಹೇಳಬೇಕಾಗಿದೆ.

ಬ್ರಿಟಿಷ್ ಸರಕಾರದ ಕಾನೂನನ್ನು ಉಲ್ಲಂಘಿಸಿ ಉಪ್ಪು ತಯಾರಿಸಿ ವಿತರಿಸಬೇಕೆಂಬ ಮಹಾತ್ಮರ ಅಂತಿಮ ನಿರ್ಧಾರ ಹೊರಬೀಳುತ್ತಿದ್ದಂತೆಯೇ ಭಾರತದಾದ್ಯಂತ ಮಿಂಚಿನ ಸಂಚಾರ ಉಂಟಾದಂತಾಯಿತು. ಸಮಸ್ತ ಭಾರತೀಯರ ಗಮನ ಸಾಬರಮತಿ ಆಶ್ರಮದತ್ತ ಹೊರಳಿತು. ಗಾಂಧೀಜಿಯವರು ಆರಂಭಿಸುವ 'ಉಪ್ಪಿನ ಸತ್ಯಾಗ್ರಹ'ದಲ್ಲಿ ಭಾಗಿಗಳಾಗಲು ಜನ ತಾ ಮುಂದೆ ನೀ ಮುಂದೆ ಎಂಬಂತೆ ತಯಾರಿ ಮಾಡಿಕೊಂಡರು. ಆದರೂ ಕಾಂಗ್ರೆಸ್ಸಿನ ಉನ್ನತ ವಲಯದ ಮುಖಂಡರನೇಕರಲ್ಲಿ ಕಾನೂನು ಉಲ್ಲಂಘನೆ ಮಾಡಿ ಹಿಡಿ ಉಪ್ಪು ತಯಾರಿಸುವುದರಿಂದ ಸ್ವಾತಂತ್ರ್ಯ ಗಳಿಕೆ ಸಾಧ್ಯವೇ ಎಂಬ ಸಂಶಯ ವ್ಯಕ್ತಪಡಿಸಿದವರೂ ಇದ್ದರು. ಗಾಂಧೀಜಿಯವರ ಆಪ್ತ ಶಿಷ್ಯ ಜವಹರಲಾಲ್ ನೆಹರು ಅವರೇ ಅನುಮಾನ ವ್ಯಕ್ತಪಡಿಸಿದ್ದರಂತೆ!

ಗಾಂಧೀಜಿಯವರ ಈ ನಿರ್ಧಾರಕ್ಕೆ ದೆಹಲಿ ಹಾಗೂ ಲಂಡನ್‌ನ ಆಳರಸರ ವಲಯದ ಪ್ರತಿಕ್ರಿಯೆ ಮೊದಲಿಗೆ ತಾತ್ಸಾರದ್ದಾಗಿತ್ತಂತೆ. ಸಾಂಕೇತಿಕವಾಗಿ ಉಪ್ಪು ತಯಾರಿಕೆಗಾಗಿ ಕಾನೂನು ಉಲ್ಲಂಘಿಸುವುದನ್ನು ಬೆಂಬಲಿಸುವುದಕ್ಕೆ ಅದೆಷ್ಟು ಜನ ಮುಂದೆ ಬಂದಾರು? ಅದರಿಂದ ಅದೆಷ್ಟು ಮಹತ್ತರದ ಆಂದೋಳನವೆದ್ದೀತು? ಕೆಲ ಸಮಯದಿಂದ ಅರೆಬೆತ್ತಲೆ ಫಕೀರನ ಸೋಗು ಹಾಕಿಕೊಂಡು ಮುಗ್ಧ ಜನರ ಗಮನ ಸೆಳೆಯುತ್ತಿದ್ದ ಗಾಂಧಿ ಈ ಪ್ರಹಸನ ಮುಗಿದ ನಂತರ ಹೇಳಹೆಸರಿಲ್ಲದಂತಾಗುತ್ತಾನೆ ಎಂಬ ಕುಚೋದ್ಯದ ವ್ಯಾಖ್ಯಾನಗಳಾಗುತ್ತಿದ್ದವಂತೆ. ಆದರೂ ಆಡಳಿತ ವರ್ಗದವರ ಅಂತರಾಳದಲ್ಲಿ ಗಾಂಧೀಯವರ ಅಂತಃಸತ್ವದ ಅರಿವಿದ್ದವರೂ ಇದ್ದಿರಬೇಕು. ಅದರಿಂದಾಗಿ ದೆಹಲಿ-ಲಂಡನ್‌ಗಳ ನಡುವೆ ಭಾರತದಲ್ಲಿ ಕ್ರಮೇಣ ಅನಾವರಣವಾಗುತ್ತಿದ್ದ ಬೆಳವಣಿಗೆಗಳ ಬಗ್ಗೆ ಸದ್ದು ಗದ್ದಲವಿಲ್ಲದೆ ಕೇಬಲ್ ವಿಚಾರ ವಿನಿಮಯಗಳು ಚುರುಕುಗೊಂಡವು.

**ದಾಂಡಿ ಯಾತ್ರೆ**

ಗಾಂಧೀಜಿಗೆ ಆಗ ೬೧ ವರ್ಷ; ಸದಾ ಮಿತಾಹಾರ, ಉಪವಾಸ-ಅನಾಸಗಳಿಂದ ಬಡಕಲಾದ ಶರೀರ ಬೇರೆ; ಆದರೂ ಕಟ್ಟುಮಸ್ತಾದ ಯುವಕರನ್ನು ನಾಚಿಸುವಂಥ ಉತ್ಸಾಹದ ಬುಗ್ಗೆ ಅವರು. ಸರ್ಕಾರಕ್ಕೆ ಅವರು ನೀಡಿದ್ದ ಗಡುವು ಮಾರ್ಚ್ ೧೨ಕ್ಕೆ (೧೯೩೦) ಮುಗಿಯಿತು. ಅಂದೇ ಅವರ 'ದಾಂಡಿ ಯಾತ್ರೆ' ಆರಂಭವಾಗಿಬಿಟ್ಟಿತು!

'ದಾಂಡಿಯ ದಂಡು' ಪ್ರತಿದಿನ ೧೦-೧೨ ಮೈಲಿ ಪ್ರಯಾಣಿಸುತ್ತಿತ್ತು. ತಲುಪುವ ಹಳ್ಳಿಯಲ್ಲಿ ಸಂಜೆಯ ಹೊತ್ತಿಗೆ ವಿಶ್ರಾಂತಿ. ಸಂಜೆ ಪ್ರಾರ್ಥನಾ ಸಭೆ; ಉಪ್ಪಿನ ಕಾಯಿದೆ ಮುರಿಯುವುದರ ಹಿಂದಿನ ಚಿಂತನೆಗಳ ಬಗೆಗೆ ಗಾಂಧೀಜಿಯವರಿಂದ ಭಾಷಣ; ಜೊತೆಗೆ ಭಾರತದ ಉದ್ಧಾರಕ್ಕೆ ಸ್ವಾತಂತ್ರ್ಯ ಗಳಿಸುವ ಅವಶ್ಯಕತೆ, ಬಡತನ, ದಾರಿದ್ರ್ಯ ನಿವಾರಣೆ, ಅಸ್ಪೃಶ್ಯತಾ ನಿವಾರಣೆ, ಮದ್ಯಪಾನ ನಿಷೇಧ, ಖಾದಿ ಗ್ರಾಮೋದ್ಯೋಗ, ಅನಕ್ಷರತೆಗಳ ಬಗ್ಗೆ ಪ್ರಚಾರ; ಅವೆಲ್ಲವನ್ನು ಸಾಧಿಸಲು ಸತ್ಯ, ಅಹಿಂಸಾ ಮಾರ್ಗಗಳ ಅನುಸರಣೆ ಎಷ್ಟು ಪ್ರಭಾವಶಾಲಿ ಎಂಬುದನ್ನು ತಿಳಿಸಲು ಅವರು ಮರೆಯುತ್ತಿರಲಿಲ್ಲ. ಕಡೆಯಲ್ಲಿ ಸರ್ವಧರ್ಮ ಪ್ರಾರ್ಥನಾ ಕಾರ್ಯಕ್ರಮಗಳು ಜರುಗುತ್ತಿದ್ದವು.

ಸುದ್ದಿ ಹರಡುತ್ತಿದ್ದಂತೆ ದೇಶದ ಪ್ರಮುಖ ಪತ್ರಿಕಾ ವರದಿಗಾರರ ದಂಡು ಯಾತ್ರೆಯ ವಿವರಗಳನ್ನು ವರದಿಮಾಡಲು ಧಾವಿಸಿತು. ಅತ್ಯಲ್ಪ ಸಮಯದಲ್ಲೇ ಗಾಂಧಿ ಯಾತ್ರೆ ವಿಶ್ವದ ಗಮನ ಸೆಳೆಯಿತು. ಯೂರೋಪ್, ಇಂಗ್ಲೆಂಡ್, ಅಮೆರಿಕಾ ಮುಂತಾದ

# ದಾಂಡಿ ಯಾತ್ರೆ ಅಂದು-ಇಂದು



ಡಾ|| ಎಚ್. ಡಿ. ಚಂದ್ರಪ್ಪಗೌಡ

ಕಡೆಗಳಿಂದಲೂ ಪ್ರಮುಖ ಪತ್ರಿಕೆಗಳ ವರದಿಗಾರರು ವಿಮಾನಗಳ ಮೂಲಕ ಬಂದು ಸೇರಿಕೊಂಡರು. ಪ್ರಪಂಚದೆಲ್ಲೆಡೆಯ ರಾಜಕೀಯ, ಸಾಮಾಜಿಕ, ಧಾರ್ಮಿಕ ಮುಖಂಡರೂ ಯಾತ್ರೆಗೆ ಶುಭ ಕೋರಿ ಸಂದೇಶ ಕಳುಹಿಸಿದರು. ದಿನಗಳುರುಳಿದಂತೆಲ್ಲಾ ದೇಶದ ನಾನಾ ಭಾಗಗಳಿಂದ ಹಲವರು ನೇರವಾಗಿ ದಾಂಡಿ ಯಾತ್ರೆಯ ಗುಂಪನ್ನು ಸೇರಿಕೊಳ್ಳಲು ಬರುತ್ತಿದ್ದರು. ದಾಂಡಿಗೆ ನೇರವಾಗಿ ಬರಲಾಗದವರು ತಮಗೆ ಹತ್ತಿರವಿರುವ ಸಮುದ್ರತೀರಗಳತ್ತ ಗುಂಪುಗುಂಪಾಗಿ ಪಾದಯಾತ್ರೆ ಆರಂಭಿಸಿದರು. ಕ್ರಮೇಣ ಇಡೀ ದೇಶವನ್ನೇ ಈ ಚಳವಳಿ ಆವರಿಸಿಕೊಂಡುಬಿಟ್ಟಿತು. ಎಲ್ಲೆಲ್ಲೂ ಸಭೆ, ಮೆರವಣಿಗೆ, ಕಾನೂನು ಉಲ್ಲಂಘನೆ ಪ್ರಕರಣಗಳು ಭುಗಿಲೆದ್ದು ಹತ್ತಿಕೊಳ್ಳಲಾರಂಭಿಸಿದವು. ಗುಂಪುಗಳನ್ನು ಚದುರಿಸಲು ಲಾಠಿಚಾರ್ಜು, ದಸ್ತಗಿರಿ, ಜೈಲು ವಾಸಗಳು ದಿನಂಪ್ರತಿ ಜರುಗುತ್ತಿದ್ದವು.

ಗಾಂಧೀಜಿಯವರು ಏಪ್ರಿಲ್ ೯ರಂದು ದಾಂಡಿಯಲ್ಲಿ ಜರುಗಿಸಿದ ಉಪ್ಪಿನ ಸತ್ಯಾಗ್ರಹ ಕೇವಲ ಅಂದಿಗೆ ಅಥವಾ ಅಲ್ಲಿಗೇ ಮುಕ್ತಾಯವಾಗಲಿಲ್ಲ. ಒಂದು ರೀತಿಯಲ್ಲಿ ಲಂಕೆಯಲ್ಲಿ ಹನುಮಂತನ ಬಾಲಕ್ಕೆ ಬೆಂಕಿ ಹತ್ತಿಸಿದಂತಾಯಿತು ಆ ಘಟನೆ. ಸಮುದ್ರದ ತೀರದವರೇ ಅಲ್ಲದೆ ದೇಶದ ಉದ್ದಗಲದಲ್ಲಿ ಜಾಗೃತರಾದ ಧುರೀಣರಿಂದ ಹಿಡಿದು ಹಳ್ಳಿಗಾಡುಗಳಲ್ಲಿರುತ್ತಿದ್ದ ಅವಿದ್ಯಾವಂತ ಭಾರತೀಯರೆಲ್ಲರೂ ಆ ಮಹಾಯಜ್ಞದಲ್ಲಿ ಭಾಗಿಗಳಾಗಲು ಧುಮುಕಿದರು. ದೇಶದೆಲ್ಲೆಡೆ ಅಶಾಂತಿಯ ವಾತಾವರಣ ತಾಂಡವವಾಡಿತು. ಆ ಸಂದರ್ಭದಲ್ಲಿ ಸ್ವಯಂಪ್ರೇರಿತರಾಗಿ ಕರನಿರಾಕರಣೆಗೂ ಬಹಳಷ್ಟು ಜನ ಮುಂದಾದರು. ಸರಕಾರಿ ಕೆಲಸದಲ್ಲಿದ್ದ ಗ್ರಾಮಾಧಿಕಾರಿಗಳು, ಶಿಕ್ಷಕರು ಮುಂತಾದವರೂ ಸಹ ನೌಕರಿ ತ್ಯಜಿಸಿ ಚಳವಳಿಗಿಳಿದರು. ಲಾಠಿಚಾರ್ಜು, ಗೋಲಿಬಾರುಗಳನ್ನು ಲೆಕ್ಕಿಸದೆ ಜನ ಪ್ರತಿಭಟನೆಗೆ ಇಳಿದರು. ಜೈಲುಗಳು ಭರ್ತಿಯಾಗಿಹೋದವು. ಸುಭಾಷ್‌ಚಂದ್ರ ಬೋಸ್ ಅಂದಿನ ಪರಿಸ್ಥಿತಿಯನ್ನು ನೆಪೋಲಿಯನ್ ಎಲ್ಬಾದಿಂದ ಪ್ಯಾರಿಸ್ಸಿಗೆ ತಲುಪಿದ ವಿಜಯಯಾತ್ರೆಗೆ ಹೋಲಿಸಿ ಪುಲಕಿತರಾದರಂತೆ. ಗಾಂಧೀಜಿಯವರ ಯಾತ್ರೆಯ ಫಲಶ್ರುತಿಯ ಬಗೆಗೆ ಸಂಶಯ ವ್ಯಕ್ತಪಡಿಸಿದ್ದ ಜವಹರಲಾಲ್ ಸಂತಾಪ ವ್ಯಕ್ತಪಡಿಸಿ ಸಕ್ರಿಯವಾಗಿ ಚಳುವಳಿಯ ನಾಯಕತ್ವ ವಹಿಸಿದರು.

*ದಾಂಡಿ ಯಾತ್ರೆಯಂತಹ ಒಂದು ಮಹತ್ವದ ಚಾರಿತ್ರಿಕ ಘಟನೆಯನ್ನು ಸ್ವಾತಂತ್ರ್ಯದ ಪ್ರತಿಫಲವನ್ನು ಅನುಭವಿಸುತ್ತಿರುವ ದೇಶಬಾಂಧವರೆಲ್ಲ ಇಂದು ನೆನಪಿಗೆ ತಂದು ಘನತೆ, ಗೌರವಗಳಿಂದ ಆಚರಿಸುವುದು ನ್ಯಾಯಸಮ್ಮತವೇ. ಆದರೆ ಈಗ ಆ ಸಲುವಾಗಿ ಜರುಗಿಸಿದ ಯಾತ್ರೆಯ ರೀತಿ–ನೀತಿಗಳು ಮಾತ್ರ ರಾಷ್ಟ್ರಪಿತ ಅಂದು ಜರುಗಿಸಿದ ದಾಂಡಿ ಯಾತ್ರೆಯ ಅಣಕವಾಡುವಿನಂತೆ ಜರುಗಿದ್ದು ಬೇಸರದ ಸಂಗತಿ ಎಂದು ಹೇಳಬೇಕಾಗಿದೆ.*

ಮುಕ್ಕಾಲು ಶತಮಾನದ ಹಿಂದೆ ಪರಕೀಯ ದಾಸ್ಯದಲ್ಲಿ ಸಿಲುಕಿ ದಾರಿಗಾಣದೇ ತೊಳಲಾಡುತ್ತಿದ್ದ ಭಾರತೀಯರಿಗೆ ತೀರಾ ಸರಳವಾಗಿ ಗೌರವಯುತವಾಗಿ ಸ್ವತಂತ್ರಗಳಿಸುವ ತಂತ್ರಕ್ಕೆ ಗಾಂಧೀಜಿ ಅಡಿಪಾಯ ಹಾಕಿದ್ದರು. ಆದರೂ ಸಾವಿರಾರು ಜನರು ಸಾವು ನೋವುಗಳಿಗೊಳಪಡಬೇಕಾಯಿತು. ಅವರು ತೋರಿಸಿದ ಸತ್ಯ, ಅಹಿಂಸೆ, ಅಸಹಕಾರ, ಸತ್ಯಾಗ್ರಹಗಳ ಅನುಸರಣೆಯಿಂದ ನಾವಿಂದು ಸ್ವತಂತ್ರ ರಾಷ್ಟ್ರವಾಗಿ ವಿಶ್ವದ ಮಹಾನ್ ರಾಷ್ಟ್ರಗಳ ನಡುವೆ ತಲೆಯೆತ್ತಿ ನಿಲ್ಲಲು ಸಾಧ್ಯವಾಗಿದೆ. ಅಂತಹ ಸನ್ನಿವೇಶವನ್ನು ಇಂದಿನ ಜನಾಂಗದವರ ಅರಿವಿಗೆ ತರುವುದು ಅತ್ಯವಶ್ಯಕ. ಅದನ್ನು ತುಂಬಾ ಪ್ರಚಾರ, ಆಡಂಬರ, ಅದ್ದೂರಿ ಹಾಗೂ ವರ್ಣರಂಜಿತವಾಗಿ ಆಚರಿಸುವುದು ಅದೆಷ್ಟು ಸಮಂಜಸ ?

**ಡಾ|| ಎಚ್. ಡಿ. ಚಂದ್ರಪ್ಪಗೌಡ**
ನಿವೃತ್ತ ಜಿಲ್ಲಾ ವೈದ್ಯಾಧಿಕಾರಿ, ೬೨, ಶ್ರೀನಿವಾಸ ನಿಲಯ
ಮಿಷನ್ ಕಾಂಪೌಂಡು, ಶಿವಮೊಗ್ಗ – ೫೭೭೨೦೧

## ಸಾದರ ಸ್ವೀಕಾರ

**Applied English Course** *(9th Ed., 15th Pr.)*
*Bedre N. Manjunatha*
*Pages : 376* ***Price : Rs. 150***
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**Conflicting Identities in Karnataka**
*Vijay Poonacha Thambanda*
*Pages : 114* ***Price : Rs. 50***
**ಪ್ರಸಾರಾಂಗ**, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

**ಭಾರತ್ ಎಲೆಕ್ಟ್ರಾನಿಕ್ಸ್ ಇಂಗ್ಲಿಷ್-ಕನ್ನಡ ಪದಕೋಶ**
*ಸಂ : ಲಲಿತ, ಸಿ.ಡಿ. ಉಷಾ, ಎಸ್. ರಾಮಮೂರ್ತಿ*
*ಪುಟ : ೧೪೬* *ಬೆಲೆ : ನಮೂದಿಸಿಲ್ಲ*
**ಭಾರತ್ ಎಲೆಕ್ಟ್ರಾನಿಕ್ಸ್ ಪ್ರಕಟಣೆ**

**ಗುಡಿಸಿಲೊಳಗೊಂದು ಬೆಳ್ಳಿಚುಕ್ಕಿ** (ಕವನಸಂಕಲನ)
*ಬ್ಯಾಡರಹಳ್ಳಿ ಶಿವರಾಜ*
*ಪುಟ : ೮೮* *ಬೆಲೆ : ರೂ. ೫೦*
**ಸಂಗೀತ ಪ್ರಕಾಶನ**, ಬ್ಯಾಡರಹಳ್ಳಿ, ಎಲೆಕಡಕಲು ಅಂಚೆ, ಹೊಸದುರ್ಗ ಹೋಬಳಿ, ಕುಣಿಗಲ್ ತಾಲ್ಲೂಕು

**ಯಾನ** (ಕಥಾಸಂಕಲನ) *ಪ್ರೇಮಶೇಖರ*
*ಪುಟ : ೮೮* *ಬೆಲೆ : ರೂ. ೬೫*
**ಕಾವ್ಯಾಲಯ ಪ್ರಕಾಶಕರು**, ಜಯನಗರ, ಮೈಸೂರು-೧೪

**ಅನಾರೋಗ್ಯದ ಅಂಗರಚನಾಶಾಸ್ತ್ರ** (ರೋಗಿ ಗ್ರಹಿಸಿದ ವಿಧಾನ)
*ಡಾ|| ನಾರ್ಮನ್ ಕಸಿನ್ಸ್*
*ಅನು : ಡಾ|| ಎನ್. ಕೃಷ್ಣರಾಜು*
*ಪುಟ : ೧೩೦* *ಬೆಲೆ : ರೂ. ೫೦*
**ಶ್ರೀ ಮಂಜುನಾಥ ಅಲೈಡ್ ಸರ್ವೀಸಸ್**, ನಂ. ೫೪೩, ೭ನೇ ಮುಖ್ಯರಸ್ತೆ ವಿಜಯನಗರ, ಬೆಂಗಳೂರು - ೫೬೦ ೦೪೦

**ತಳಿ ತಪಸ್ವಿ** (ಲೇಖನ ಸಂಗ್ರಹ) *ನಾ. ಕಾರಂತ ಪೇರಾಜೆ*
*ಪುಟ : ೪೦* *ಬೆಲೆ : ರೂ. ೧೫*

**ಸರ್ವರೋಗ ನಿವಾರಕ ನೋಣಿ**
*ಮುನಿಯಾಲ್ ಗಣೇಶ್ ಶೆಣೈ*
*ಪುಟ : ೫೬* *ಬೆಲೆ : ರೂ. ೧೫*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಪುಸ್ತಕ ನಿಧಿ**, ಗಾವಳಿ ಶಾಲೆ ಹತ್ತಿರ, ಅಂಚೆ : ಹಳ್ಳಾಡಿ-ಹರ್ಕಾಡಿ, ಕುಂದಾಪುರ - ೫೭೬ ೨೧೦

**ಕಲ್ಲುಸಾರ** (ವಿಮರ್ಶಾ ಪ್ರಬಂಧಗಳ ಸಂಕಲನ)
*ಜೆ. ಕೆ. ರಮೇಶ್*
*ಪುಟ : ೧೦೪* *ಬೆಲೆ : ರೂ. ೯೦*
**ಸಿ.ವಿ.ಜಿ. ಪಬ್ಲಿಕೇಷನ್ಸ್**, ನಂ. ೭೦, ೨ನೇ ಮುಖ್ಯರಸ್ತೆ, ಜಬ್ಬಾರ್‌ಬ್ಲಾಕ್, ವಯ್ಯಾಲಿಕಾವಲ್, ಬೆಂಗಳೂರು - ೩

**ಕರ್ಪೂರದ ಕಾಯ ಹುಡುಕಿ** (ಕವನ ಸಂಕಲನ)
*ಶಂಕರಯ್ಯ ಆರ್. ಘಂಟಿ*
*ಪುಟ : ೮೮* *ಬೆಲೆ : ರೂ. ೬೦*
**ದಾಮಿನಿ ಸಾಹಿತ್ಯ**, ನಂ. ೫೫೯, ೯ನೇ ಮುಖ್ಯರಸ್ತೆ ವಿಜಯನಗರ, ಬೆಂಗಳೂರು

**ಸ್ವತಂತ್ರಭಾರತ – ವ್ಯಂಗ್ಯಚಿತ್ರಗಳಲ್ಲಿ**
*ಚಿತ್ರಗಾರ್ತಿ ಡಿ. ಭೂಪತಿ*
*ಪುಟ : ೮೦* *ಬೆಲೆ : ರೂ. ೫೦*
**ಎಂ. ಎಸ್. ನಾಯ್ಡು ಟ್ರಸ್ಟ್**, ೩೭೧, ೧೧ನೇ ಅಡ್ಡರಸ್ತೆ, ೨ನೇ ಬ್ಲಾಕ್, ಆರ್.ಟಿ. ನಗರ, ಬೆಂಗಳೂರು - ೩೨

**ತೆರೆದ ಬಾವಿ ಮರುಪೂರಣ – ಕಾಕೋಳದ ಯಶೋಗಾಥೆ**
*ಪೂರ್ಣಪ್ರಜ್ಞ ಬೇಳೂರು*
*ಪುಟ : ೨೪* *ಬೆಲೆ : ರೂ. ೧೫*
**ಪರ್ಯಾಯ ಕೃಷಿ ಮಾಧ್ಯಮ ಕೇಂದ್ರ**, ಕೃಷ್ಣಾಲಯ, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ - ೫೮೦ ೦೦೮

**Rajaji In Anecdotes**
**Dr. T. K. Sheshadri**
*Pages : VI + 89* *Price : Rs. : 50*
**Bhavan's Gandhi Centre of Science and Human Values,** Bharathiya Vidya Bhavan, 43/1, Race Course Road, Bangalore - 560 001

# ಬರಿ ಕಥೆಯಲ್ಲೋ ಅಣ್ಣಾ....

# ತಳಸಮಾಜದ ವಿಶ್ಲೇಷಣೆಗಳು

ಇತ್ತೀಚೆಗೆ ಬಂದ ಕುಂವೀ ಸಮಗ್ರ ಕಥೆಗಳ ಸಂಗ್ರಹ 'ಬರಿ ಕಥೆಯಲ್ಲೋ ಅಣ್ಣಾ...' ಕುರಿತ ಬರೆಹವಿದು. ಕುಂವೀ ಅವರ ಕಥೆಗಳ ವಾಸ್ತವ ಸಮಾಜದ ವಿಶ್ಲೇಷಣೆಗಳೆಂದೂ, ಪೂರ್ವಸಮಾಜದ ವಿಶ್ಲೇಷಣೆಗಳೆಂದೂ ಗುರುತಿಸಬಹುದು.

ನನ್ನ ಪ್ರಯೋಗಾತ್ಮಕ ಪ್ರಮೇಯವೊಂದರಿಂದ, ಈ ಬರೆಹವನ್ನು ಆರಂಭಿಸುತ್ತೇನೆ. ಹೆಸರು ಮಾಡಿದ ಕುಂವೀಯ ಒಂದು ಕಥೆ 'ದೇವರ ಹೆಣ' ಪ್ರಥಮ ಪಿಯೂಸಿಯ ಕನ್ನಡ ಪಠ್ಯದಲ್ಲಿ 'ಪಾಠ'ವಾಗಿತ್ತು. ಸುಮಾರು ಎಂಟು ವರ್ಷಗಳವರೆಗೆ ಪಾಠಮಾಡಿದ ನಾನು, ಕೆಲವು ಕುತೂಹಲಕಾರಿ ಪ್ರತಿಕ್ರಿಯೆಗಳನ್ನು ಗಮನಿಸಿದ್ದೇನೆ. ಇದು ಸ್ಥೂಲಗ್ರಹಿಕೆಯಲ್ಲದ ಸೂಕ್ಷ್ಮ ಅನುಭವ; ಸೈದ್ಧಾಂತಿಕ ಸ್ವರೂಪದ್ದೇನೂ ಅಲ್ಲ. 'ದೇವರ ಹೆಣ' ಕಥೆಯ ನಾಯಕ ರೊಣ್ಣಿ, ಹೊಟ್ಟೆಗೆ ಹಿಟ್ಟಿಲ್ಲದವನು. ಅವನ ಜೊತೆಗೆ ಅವನ ಹೆಂಡತಿ, ಮಕ್ಕಳು ಕೊಕ್ಕಾ, ಅಪಾರಿ, ತಿಮ್ಮಿ, ಕುಲ್ಡಿ ಎಲ್ಲರೂ ಅಷ್ಟೆ. ಅಷ್ಟೇ ಅಲ್ಲ, ಅವನ ಮನೆಯ ನಾಯಿ, ರೊಣ್ಣಿಯ ಪರಂಪರಾಗತವಾದ ಚಪ್ಪಲಿಯೊಂದನ್ನು ಕಡಿದು ತಿಂದಿರುತ್ತದೆ. ಬೆಕ್ಕು ಸದಾ ಉರಿದು ಕಾದ ಜಾಗವಾಗಿರಬೇಕಾಗಿದ್ದ ಒಲೆಯಲ್ಲಿ ತಣ್ಣಗೆ, ಗಾಢ ನಿದ್ದೆಯಲ್ಲಿರುತ್ತದೆ. ಒಂದು ಕಥೆಯ ತುಂಬಾ ಆವರಿಸಿರುವ ನಾಯಕ ಮತ್ತು ಆತನ ಬಳಗದವರು ಪಡಬೇಕಾದ ಪರಿಸ್ಥಿತಿ ಇಂಥದ್ದೇ!

ನನ್ನ ಪ್ರಕಾರ 'ದೇವರ ಹೆಣ' ಕನ್ನಡದ ಶ್ರೇಷ್ಠ ಕಥೆಗಳಲ್ಲಿ ಒಂದು. ಇದು ತಳ ಸಮಾಜವನ್ನು ಕೇಂದ್ರವಾಗಿರಿಸಿಕೊಂಡು ಸಾಂಸ್ಕೃತಿಕ ಚಿಂತನೆ ಮಾಡಬಹುದಾದ ಕಥೆ. ಈ ಕಥೆಯನ್ನು ಓದುವವನಿಗೆ ಕೆಲವು ಪೂರ್ವಸಿದ್ಧತೆಗಳ ಅಗತ್ಯವಿದೆ. ಮೊದಲ ಓದಿಗೂ ನಂತರದ ಓದಿಗೂ ಗ್ರಹಿಕೆಯಲ್ಲಿ ಕೆಲವು ಇತ್ಯಾತ್ಮಕ ಬೆಳವಣಿಗೆ ಕಂಡರೆ ಅದು ಅಸಹಜವೇನೂ ಅಲ್ಲ! ಓದಿನಿಂದ ಓದಿಗೆ ಹಲವು ಸ್ಥಿತ್ಯಂತರ ಪ್ರತಿಕ್ರಿಯೆಯನ್ನು ಮೂಡಿಸುವುದೇ ಈ ಕಥೆಯ ಪರಿಣಾಮದ ಪ್ರಮುಖ ಅಂಶವಾಗಿದೆ. ಈ ಕಥೆಯ ಮುಖ್ಯಸ್ಥಾಯೀಭಾವ ಹಸಿವು. ಒಂದರ್ಥದಲ್ಲಿ ಹಸಿವಿನ ಸಮೀಪದರ್ಶನ ಮಾಡಿಸುವ ರೊಣ್ಣಿ ಮುಖ್ಯ ಪಾತ್ರ ವಹಿಸುತ್ತಾನೆ. ಆತನ ಹೆಂಡತಿ, ಮಕ್ಕಳು, ಅಷ್ಟೇ ಅಲ್ಲ ಅವನ ಮನೆಯ ನಾಯಿ, ಬೆಕ್ಕು, ಆ ಊರಿನ ಕಾಗೆ, ಹದ್ದುಗಳೂ ಹಸಿವಿನಿಂದ ಬಳಲುತ್ತಿವೆ. ಬಲಿಸಮಾಜದ ಪ್ರಮುಖ ಭಾಗಗಳಾದ ಗೌಡ ಮತ್ತು ಪೊಲೀಸ್ ಇಲ್ಲಿ ಪೋಷಕ ವ್ಯಕ್ತಿಗಳಾಗಿದ್ದಾರೆ. ಅಲ್ಲದೆ ಅವು ಹಸಿದ ರೊಣ್ಣಿಯನ್ನು ಮುಟ್ಟಲೂ ಧೈರ್ಯವಿಲ್ಲದ ಪಾತ್ರಗಳಾಗಿವೆ. ಹೊಟ್ಟೆಗೆ ಹಿಟ್ಟಿಲ್ಲದ ರೊಣ್ಣಿ – ಕೊನೆಯವರೆಗೂ ಕೀಳರಿಮೆಯನ್ನು ಅನುಭವಿಸುವಂಥ, ಸಾಮಾಜಿಕ ದುಃಸ್ಥಿತಿಯನ್ನು ಹೀಗಳೆಯುವಂಥ, ಹೊಟ್ಟೆ ಹುಣ್ಣಾಗುವಂತೆ ನಗಿಸುವಂಥ, ತಮ್ಮ ಒಳ ಬದುಕನ್ನು ತೋರಿಸುವಂಥ – ಅನುಭವಗಳನ್ನು ಓದುಗನಿಗೆ ನೀಡುವ ಸಂಕೀರ್ಣತೆಯನ್ನೂ ಪಡೆದಿದ್ದಾನೆ.

ಎತ್ತನ್ನು ದೇವರೆಂದೂ, ಬೆಕ್ಕನ್ನು ಕೋತಿಯೆಂದೂ, ನಾಯಿಯನ್ನು ಹುಲಿಯೆಂದೂ ಹೀಗೆ... ಕರೆಯುವುದರಲ್ಲೇ ನಿಲುಕದ ಫಲವಂತಿಕೆಯನ್ನು ತಳಸಮಾಜದ ದುಸ್ತರ ಸ್ಥಿತಿಯನ್ನು ಈ ಕಥೆಯಲ್ಲಿ ಚಿತ್ರಿಸುವ ಪ್ರಯತ್ನವಿದೆ. ಮಕ್ಕಳ ಆಟ ಸಾಮಾನ್ಯವಾಗಿ ಅಸಹಜವಾದ ಮತ್ತು ಅಸಾಧ್ಯವಾದ ಒಂದು ಬಯಕೆಯನ್ನು ಪೂರೈಸಿಕೊಳ್ಳುವ ಸಹಜ ಮಾಧ್ಯಮವಾಗಿರುತ್ತದೆ. (ಉದಾಹರಣೆಗೆ, ರಾಜನಂತೆ, ಪ್ರಧಾನಿಯಾದಂತೆ ಅಭಿನಯಿಸಿ ಆಟ ಆಡುವುದು.) ಆದರೆ ಈ ಕಥೆಯಲ್ಲಿ ರೊಣ್ಣಿಯ ಮಕ್ಕಳ ಆಟ – ಅನ್ನ, ಸಾರುಗಳ ಪಾತ್ರ ವಹಿಸಿ ಉಂಡಂತೆ ಅನುಭವಿಸಿ ಅಭಿನಯಿಸುವ ಆಟ ಘೋರ ಹಸಿವಿನ ಒಂದು ಪರಿಣಾಮಕಾರಿ ಚಿತ್ರಣವೆನಿಸುತ್ತದೆ.

ನನ್ನ ಪ್ರಕಾರ ಈ ಕಥೆಯನ್ನು 'ಪಾಠ'ವಾಗಿ ಕೇಳಿದ ವಿದ್ಯಾರ್ಥಿಗಳು ಮೂರು ವರ್ಗಗಳವರು. ಅದರಲ್ಲಿನ ಮೊದಲ ವರ್ಗಕ್ಕೆ 'ದೇವರ ಹೆಣ'ದ ಇಡೀ ಕಥೆ ಒಂದು comedy serial ರೀತಿ ಕಂಡರೆ – (ರೊಣ್ಣಿ ಮತ್ತು ಆತನ ಹೆಂಡತಿ ಮಕ್ಕಳಿಂದ ಆತನ ಇಡೀ ಬದುಕು ಅವರಿಗೆ ತಮಾಷೆಯಾಗಿಯೇ ಕಾಣುತ್ತದೆ), ಎರಡನೇ ವರ್ಗಕ್ಕೆ – ತಮ್ಮ ಬದುಕಿಗೂ ರೊಣ್ಣಿಯ ಬದುಕಿಗೂ ನಡುವೆ ಇರುವ ಅಂತರ ತೀರಾ ಅಲ್ಪವಾದುದು. ಆತನ ಹಸಿವು, ಅದಕ್ಕಾಗಿ ಮಾಡುವ ದಿನನಿತ್ಯ ಹೋರಾಟ, ಅವನ ಅರಣ್ಯರೋದನ ಸ್ಥಿತಿ ಇತ್ಯಾದಿಗಳು ಈ ವರ್ಗಕ್ಕೆ ಸುಪರಿಚಿತ. ಮೂರನೇ ವರ್ಗ – ಮೇಲಿನ ಎರಡೂ ವರ್ಗಗಳಿಗೂ ಮಧ್ಯದಲ್ಲಿರುವಂಥದ್ದು.

ಹೀಗೆ ವಿಶಿಷ್ಟ ಮೇಲ್ಮೈ ಪಡೆದುಕೊಂಡಿರುವ ಈ ಕಥೆಯಲ್ಲಿ ರೊಣ್ಣಿ ಮತ್ತು ಆತನ ಕುಟುಂಬದವರನ್ನು ಮುಖ್ಯ ಪಾತ್ರ ಮಾಡುವ ದೃಷ್ಟಿ, ಸಾಧ್ಯತೆ, ಹಿನ್ನೆಲೆ ಬಹುಶಃ ಕುಂವೀಯಂಥವರಿಗೆ ಮಾತ್ರ ಸಾಧ್ಯವಾಗುತ್ತದೆ. ಇದು ಸ್ಥೂಲಗ್ರಹಿಕೆಯಲ್ಲಾದ ಅನುಭವ.

'ಬರೀ ಕಥೆಯಲ್ಲೋ ಅಣ್ಣ' – ಎನ್ನುವಾಗ ವೈಭವದ, ಸುಖದ ಬದುಕಿಗಿಂತಲೂ ವಿಭಿನ್ನವಾದ ಅಥವಾ ಪರ್ಯಾಯವಾದ ಬದುಕಿನ ಜೀವನಾನುಭವದ ವೈವಿಧ್ಯತೆ ಕುಂವೀಯವರದಾಗಿರುವುದರಿಂದ ಇವು ಬರೀ ಕಥೆಗಳಾಗಿಲ್ಲ! (ಕಥೆಗಳಲ್ಲ), ಇವುಗಳಿಗೆ 'ಬದುಕುಗಳು' ಎಂಬ ಅರ್ಥವೂ ಇದೆ. (ಸ್ವತಃ ಕುಂವೀಯೂ ಇದನ್ನೇ ಹೇಳುತ್ತಾರೆ.) ಸಂಕಲನದ ಶೀರ್ಷಿಕೆಯಲ್ಲಿ ಬೇಂದ್ರೆಯವರ 'ಬರೀ ಬೆಳಗಲ್ಲೋ ಅಣ್ಣಾ' – ಎಂಬುದರಲ್ಲಿರುವ ಅರ್ಥವಿಸ್ತಾರ ಮತ್ತು ವೈವಿಧ್ಯತೆಗಳು ಇಲ್ಲಿಯೂ ಇವೆ.

ಸಮಾಜದ ವಾಸ್ತವ ಬದುಕು ಕುಂವೀ ಕಥೆಗಳ ಕೇಂದ್ರ. ಇಲ್ಲಿರುವ ಬದುಕುಗಳ (ಅಂದರೆ ವ್ಯಕ್ತಿಗಳ) ಮೇಲೆ ರಾಷ್ಟ್ರೀಯ,ಅಂತಾರಾಷ್ಟ್ರೀಯ ವಿದ್ಯಮಾನಗಳ ಪ್ರಭಾವವಿಲ್ಲ. ಪ್ರಭಾವ ಒಂದೆಡೆ ಇರಲಿ, ತನ್ನೂರಿನ ಪ್ರತಿಷ್ಠಿತರ, ಪ್ರಭಾವಿಗಳ ವಿದ್ಯಮಾನದ ಪ್ರಭಾವವೂ ದುರ್ಬಲ ಬದುಕನ್ನು ತಟ್ಟಲಾರದೇ ಹೋಗುತ್ತದೆ. ಆದ್ದರಿಂದ ರೊಣ್ಣಿಯ ಜಾತಿ ಪ್ರಶ್ನೆ ಇಲ್ಲಿ ಮುಖ್ಯವಾಗದೇಹೋಗುತ್ತದೆ.

ಹಾಗೆಯೇ 'ಕಥೆ ಹೇಳೋ ಕರಿಯಜ್ಜ'ನ ಜಾತಿ ಯಾವುದೆಂಬುದು ನಮಗೆ ತಿಳಿಯದೇ ಹೋಗುತ್ತದೆ – ಅದು ಮುಖ್ಯವಾಗುವುದೂ ಬೇಕಿಲ್ಲ ಎಂಬುದು ಬೇರೆ ವಿಚಾರ. ಕರಿಯಜ್ಜ ತನ್ನ ಒಡನಾಟದ ಊರುಗಳಿಗೆ ಬಿಬಿಸಿಯಷ್ಟು ಮುಖ್ಯ ಸಂಪನ್ಮೂಲನಾಗುತ್ತಾನೆ; ದೂರದರ್ಶನದ ವಿವಿಧ ಚಾನೆಲ್‌ಗಳಿಗಿಂತಲೂ ಆಕರ್ಷಕ ಮಾಧ್ಯಮವಾಗಿಬಿಡುತ್ತಾನೆ.

ಕುಂವೀ, ಮೊಗಳ್ಳಿ, ನುಗಡೋಣಿಯಂಥವರಿಗೆ ಸಮಾಜದ ಪರ್ಯಾಯ ಬದುಕಿನೊಂದಿಗೆ ನೇರ ಅನುಭವದ ಬೆಸುಗೆಯಿರುವುದರಿಂದ ಸಾಂಪ್ರದಾಯಿಕ ಕಥಾಭಿವ್ಯಕ್ತಿ ಸದಾ ಚಾಲೆಂಜ್ ಬಯಸುವಂಥ ಕೆಣಕನ್ನುಂಟುಮಾಡುತ್ತಿರುತ್ತದೆ. ಅವರು ಕಥೆ ಹೇಳುತ್ತಿದ್ದಾರೆ ಎನ್ನುವುದಕ್ಕಿಂತಲೂ ಯಾವುದೋ ಒಂದು ಜೀವನದೃಷ್ಟಿಯ ಪರ ನಿಂತು ಮಾತನಾಡುತ್ತಿದ್ದಾರೆ ಎಂದೇ ಎನಿಸುತ್ತದೆ. ಇಡೀ ಪೂರ್ವಗ್ರಹವನ್ನು ಪಕ್ಕದಲ್ಲಿಟ್ಟು ನೋಡುವಂಥ ಇವರ ಸೃಜನಶೀಲತೆ 'ವಸ್ತು'ವಿಗೆ ಸಂಬಂಧಿಸಿದ್ದಾಗಿದೆಯೇ ವಿನಾ 'ಶೈಲಿ'ಗೆ ಸಂಬಂಧಿಸಿದ್ದಲ್ಲ. ಸಾಂಪ್ರದಾಯಿಕ ಕಥಾ-ಸಂವಿಧಾನವನ್ನು ಮುರಿದು ಮತ್ತೊಂದನ್ನು ನಿರ್ಮಿಸುವುದು ಇವರಿಗೆ ಒಳಗಿಟ್ಟುಕೊಳ್ಳಲಾಗದ 'ಆತಂಕ' ಎಂಬಂತೆ ಕಂಡುಬರುತ್ತದೆ. 'ಕಥೆ ಹೇಳೋ ಕರಿಯಜ್ಜ', 'ದೇವರ ಹೆಣ', 'ಇನ್ನಾದರೂ ಸಾಯಬೇಕು'... ಇಂಥ ಕಥೆಗಳು ನವೋದಯ ಕಾಲದಲ್ಲಿ ಸ್ವೀಕರಿಸಲ್ಪಡುತ್ತಿದ್ದವೇ ಎಂಬ ಪ್ರಶ್ನೆ ಹಾಕಿಕೊಂಡರೆ ಬಹುಶಃ ಉತ್ತರ ತಕ್ಷಣ ಸಿಗುವಂಥದ್ದಲ್ಲ.

ಕುಂವೀಯಂಥವರು ಕಥೆ ಬರೆಯುವವರೆಗೂ ಕನ್ನಡಿಗನ ಮನಸ್ಸು ಪೂರ್ವಸಿದ್ಧತೆ ಮಾಡಿಕೊಂಡಂತೆ ಇರಲಿಲ್ಲ. ಏಕೆಂದರೆ, ಅದುವರೆಗಿನ ಕಥೆಗಳಲ್ಲಿ ಓದುಗನಿರುತ್ತಿರಲಿಲ್ಲ. ಓದುಗನೇನಿದ್ದರೂ ಕಥೆಯ ಹೊರಗಿನಿಂದಲೇ ಪ್ರವೇಶ ಪಡೆಯಬೇಕಾಗಿದ್ದಿತು. ಆದರೆ ಬದಲಾದ ಕಥಾ ರಚನಾ ಸಂದರ್ಭದಲ್ಲಿ ಸಾಮಾನ್ಯ ಓದುಗನ ಬದುಕಿಗೆ ಹತ್ತಿರದಲ್ಲೇ ಕಥೆ ಹರಿದಾಡುತ್ತಿರುವ ಅರಿವುಂಟಾಯಿತು. ರೊಣ್ಣಿ ನಮ್ಮೂರಿನವನೇ ಆಗಿರಬಹುದು! ಡೋಮನಂಥವರು ನಮ್ಮ ಮನೆಗೆ ಭಿಕ್ಷೆ ಬೇಡಲು ಬರುತ್ತಿದ್ದರಲ್ಲ. ಎಂದೂ

ಡಾ|| ಮೃತ್ಯುಂಜಯ ರುಮಾಲೆ

ಅನ್ನಿಸಬಹುದು. ತಗಣೆ, ನುಸಿಗಳಂಥವುಗಳನ್ನು ತಿನ್ನುವ ಕೊಕ್ಕ ಅಸಹ್ಯ ಉಂಟುಮಾಡದೇ ಹೋಗುತ್ತಾನೆ. ಹಾಗೆಯೇ ಗೌಡನಿಗೆ ದೈವವಾಗಿರುವ ಎತ್ತು ಕೊಣ್ಣೆಗೆ ಆಹಾರವಾಗಿರುವ ಸಂಗತಿ ಅಚ್ಚರಿಯನ್ನುಂಟು ಮಾಡುವುದಿಲ್ಲ. 'ಎಂಜಲು'ನಲ್ಲಿರುವ ಕಿವುಡ ನಮ್ಮ ಊರಿನಲ್ಲಿಯೂ ಇದ್ದ! ಹೀಗೆ ಇಂಥ ಪಾತ್ರ, ಸನ್ನಿವೇಶ, ಗ್ರಹಿಕೆಗಳು ಕಥಾ ಸಂವಿಧಾನದಲ್ಲಿ ಬದಲಾದ ಬಹುದೊಡ್ಡ ವಿದ್ಯಮಾನಗಳಾಗಿ ಕಾಣುತ್ತವೆ.

ವಾಸ್ತವಿಕ ಬದುಕಿನ ಚಿತ್ರ ಇಂಥಲ್ಲಿ (ಅಥವಾ ಇಂಥವರಲ್ಲಿ) ದಟ್ಟವಾಗುತ್ತದೆ. ಕುಂವೀಯಂಥವರ ಮನೋಭಾವನೆಯನ್ನು ಸಾಮಾನ್ಯೀಕರಿಸಿ ಒಂದು ಸೂತ್ರದಲ್ಲಿ ಹೀಗೆ ಹೇಳಬಹುದು: ರೈಲ್ವೆ ನಿಲ್ದಾಣದಲ್ಲಿ ಇಸ್ತ್ರಿ ಮಡಿಕೆಯೂ ಬದಲಾಗದಂತೆ ನೋಡಿಕೊಂಡು ಅಚ್ಚುಕಟ್ಟಾಗಿ ಗರಿಮಾಡಿಸಿದ ಖಾದಿಧಾರಿಯಾಗಿ ಬರುವ 'ಜನನಾಯಕ' ರಾಜಕಾರಣಿಯ ಸುಸ್ವಾಗತ ಸಮಾರಂಭದಲ್ಲಿ ಕುಂವೀಯಂಥವರಿಗೆ ಅಲ್ಲೇ ಮೂಲೆಯಲ್ಲಿ ತಟ್ಟಿನ ಮೇಲೆ ೨೫-೫೦ ರೂ. ಬಂಡವಾಳದ ಶೇಂಗಾ ಮಾರುತ್ತ ಕುಳಿತಿರುವ ಹರಿದ ಬಟ್ಟೆಯ, ಮಗುವಿಗೆ ಹಾಲುಣಿಸುತ್ತ ಕುಳಿತಿರುವ ಹೆಂಗಸು ಕಾಣುವುದು ಸಹಜವಾಗಿದೆ. (ಇದು ಕುಂವೀಯವರ ದೃಷ್ಟಿಕೋನಕ್ಕೆ, ಗ್ರಹಿಕೆಗೆ ಸಿದ್ಧಾಂತರೂಪದ ದೃಷ್ಟಾಂತ.) ''ಪಡಬಾರದ ಕಷ್ಟವನ್ನು ಅನುಭವಿಸಿ ಪ್ರತಿಕಥೆಯ ಸೃಷ್ಟಿಯಾಗಿದೆ'' – ಎಂಬ ಮಾತೂ ವಸ್ತುನಿಷ್ಠತೆಯನ್ನು ನಿದರ್ಶಿಸಿದೆ. ಆದ್ದರಿಂದ ಕುಂವೀ ಕಥೆಗಾಗಿ ಹುಡುಕಾಡುವ ಪ್ರಯತ್ನವೇ ಕಾಣುವುದಿಲ್ಲ. ಅನುಭವಗಳೇ ಕಥೆಗೆ ವಸ್ತುವನ್ನು ನೀಡಿವೆ. ಅವರು ಕಲ್ಪನೆಗೆ ಮೊರೆಹೊಕ್ಕು ಕಥೆ ಬರೆದರು ಎನ್ನುವುದಕ್ಕಿಂತಲೂ ಅನುಭವವನ್ನು ಕುರಿತು ಹೇಳಿದ ಪರಿಣಾಮಕಾರಿ ಶೈಲಿಯಿಂದಲೇ ಅದು ಕಥೆಯಾಯಿತು ಎನ್ನಬೇಕಾಗುತ್ತದೆ. ಅನುಭವರೂಪಿ ಕಥೆಗಳು ಕಥಾರೂಪಿ ಅನುಭವಗಳೇ ಆಗಿರುವುದರಿಂದ ಕುಂವೀ ಮುಂದೊಂದು ದಿನ 'ಆತ್ಮಚರಿತ್ರೆ' ಬರೆದರೆ ಅದು ಈ ಎಲ್ಲಾ ಕಥೆಗಳ ಪುನರ್ಲೇಖನಗೈದಂತೆಯೇ ಆಗಬಹುದೇನೋ! ಅವರೆ ಬದಲಾಯಿಸಿದ ಕಥಾಸಂವಿಧಾನ (ಅಥವಾ ಅವರದೇ ಎನ್ನುವ ಕಥಾ ಸಂವಿಧಾನ) ಅವರ ವೈಯಕ್ತಿಕ ಬದುಕಿನೊಳಗೆ ಪ್ರವೇಶಿಸಿದ್ದಕ್ಕೆ 'ಇನ್ನಾದರೂ ಸಾಯಬೇಕು' – ಕಥೆ ಬರೆದು ಕೋರ್ಟಿನ ಕಟ್ಟೆ ಏರಿರುವುದು ಸಾಕ್ಷಿಯಾಗಿದೆ. ಇದು ಕನ್ನಡ ಬರೆಹಗಾರ ಪಡೆದ ಅಭಿವ್ಯಕ್ತಿಯ ಸೌಲಭ್ಯವೂ ಹೌದು!

ಅಕ್ರಮ ಸಂತಾನ, ಊರುಕೇರಿ, ಉಚಲ್ಯಾದಂಥ ದಲಿತ ಆತ್ಮಚರಿತ್ರೆಯ ಕೆಲವು ಘಟನೆಗಳನ್ನು ಕುಂವೀ ಕಥೆಯಲ್ಲಿ ಕಾಣುತ್ತೇವೆ. ಇದು ಕುಂವೀ – ಕಥೆಕಟ್ಟುವ ಪೂರ್ವದಲ್ಲಿ ಮತ್ತು ಸಂದರ್ಭದಲ್ಲಿ ಕಂಡ 'ವಾಸ್ತವ ಭಾರತ'ದ ಅನುಭವಗಳೇ ಆಗಿವೆ. ಬ್ರೆಡ್ ತಿಂದು ಜೀರ್ಣಮಾಡಿಕೊಳ್ಳದ, ಒಳ್ಳೆ ಅಂಗಿ ಹಾಕಿಕೊಂಡು ಓಡಾಡಲಾಗದೇ, ಅವುಗಳನ್ನು ಮಲಗುವಾಗ ಹಾಕಿಕೊಳ್ಳುವ ವ್ಯಕ್ತಿಗಳು ಕಥೆಗಳಲ್ಲಿ ತೂರಿಕೊಂಡು ಪಾತ್ರಗಳಾಗುವುದು ಇಂಥವರಿಂದ ಮಾತ್ರ ಸಾಧ್ಯ. ತಮ್ಮ ಅನುಭವಗಳಲ್ಲಿ ತಮ್ಮದೊಂದು ಕಥೆ ಕಳೆದು ಹೋಗುತ್ತಿದೆ ಎಂಬ ಕುತೂಹಲದ ಆತಂಕವು



ಕುಂವೀ, ಮೊಗಳ್ಳಿ, ನುಗಡೋಣಿಯಂಥವರಿಗೆ ಸಮಾಜದ ಪರ್ಯಾಯ ಬದುಕಿನೊಂದಿಗೆ ನೇರ ಅನುಭವದ ಬೆಸುಗೆಯಿರುವುದರಿಂದ ಸಾಂಪ್ರದಾಯಿಕ ಕಥಾಭಿವ್ಯಕ್ತಿ ಸದಾ ಚಾಲೆಂಜ್ ಬಯಸುವಂಥ ಕೆಣಕನ್ನುಂಟುಮಾಡುತ್ತಿರುತ್ತದೆ. ಅವರು ಕಥೆ ಹೇಳುತ್ತಿದ್ದಾರೆ ಎನ್ನುವುದಕ್ಕಿಂತಲೂ ಯಾವುದೋ ಒಂದು ಜೀವನದೃಷ್ಟಿಯ ಪರ ನಿಂತು ಮಾತನಾಡುತ್ತಿದ್ದಾರೆ ಎಂದೇ ಎನಿಸುತ್ತದೆ. ಇಡೀ ಪೂರ್ವಗ್ರಹವನ್ನು ಪಕ್ಕದಲ್ಲಿಟ್ಟು ನೋಡುವಂಥ ಇವರ ಸೃಜನಶೀಲತೆ 'ವಸ್ತು'ವಿಗೆ ಸಂಬಂಧಿಸಿದ್ದಾಗಿದೆಯೇ ವಿನಾ 'ಶೈಲಿ'ಗೆ ಸಂಬಂಧಿಸಿದ್ದಲ್ಲ.

ಇರುವುದರಿಂದ ಕುಂವೀ ಅದನ್ನು ತಕ್ಷಣ ಹಿಡಿದಿಡುವ ಪ್ರಯತ್ನ ಮಾಡುತ್ತಾರೆ. ಇದು ಒಂದು ಸಿದ್ಧಿಯೂ ಆಗಿರುವುದರಿಂದ ಅದು ಅನುಭವವೂ ಕಥೆಯೂ ಆಗಿ ರೂಪತಾಳುತ್ತದೆ. ಅವರ ಬದುಕಿನಲ್ಲಿ ನಡೆದ ತಂದೆ ಸಂಬಂಧಿತ ಘಟನೆಗಳಾಗಲೀ, ಕುಲ-ವೃತ್ತಿ ಸಂಬಂಧಿತ ಘಟನೆಗಳಾಗಲೀ ಅಥವಾ ಇತರ ದುರ್ಭರ ಅನುಭವಗಳಾಗಲೀ ತಮ್ಮಷ್ಟಕ್ಕೆ ತಾವು ಸಹಜವಾದವುಗಳೇ! ಆದರೆ ಕುಂವೀ ಸಾಂದರ್ಭಿಕವಾಗಿ ಆದ ಪ್ರಜ್ಞೆ, ಜಾಗೃತಗೊಂಡ ತಕ್ಷಣವೇ ಅವಲೋಕನದಂಥ ಮನೋವೇದನೆಗೆ ಒಳಗೊಂಡು ಅವುಗಳನ್ನು ಕಥೆಗಳನ್ನಾಗಿ ಮಾಡುತ್ತಾರೆ. ಆದ್ದರಿಂದಲೇ ಅವರಿಗೆ ಬೀದಿಬೀದಿಯಲ್ಲಿ ಕಥೆಗಳು ಸಿಗುತ್ತವೆ.

ಕಥೆಯ ಹೊರನಿಂತಾಗಲೂ, ನಿರೂಪಕನಾಗಿ ಒಳಗಿದ್ದಾಗಲೂ, ತಾನೇ ಒಂದು ಕಥೆಯಾಗಿ ಹೇಳುವಾಗಲೂ ನಿರೂಪಣತಂತ್ರ ವೈವಿಧ್ಯಗಳು ಸ್ಥಾಪಿತ ಮೌಲ್ಯದ ಸಮಾಜವನ್ನು ಮೀರಿ ನಿಲ್ಲುವೆಡೆಗೇ ಸೆಳೆಯುತ್ತಲಿರುವುದರಿಂದ ಹೇಳುವ ಎಲ್ಲ ಅಂಶಗಳಲ್ಲಿ ಮುಗ್ಧವಾದ ನಿರ್ಭೀತತೆ ಕಂಡುಬರುತ್ತದೆ. ಉದಾಹರಣೆಗೆ, ಕೆಲವು ಕತೆಗಳಲ್ಲಿ ವ್ಯಂಗ್ಯವೆನಿಸುವಂಥ ದೃಶ್ಯ-ಘಟನೆಗಳನ್ನು ವಿವರಿಸುವ, ಅವಾಚ್ಯ, ಲೈಂಗಿಕ, ಅಶ್ಲೀಲ ಎನಿಸುವಂಥ ಮಾತುಗಳಿರುವ ಸಂದರ್ಭಗಳು ಬರುತ್ತವೆ. ಇದು ಲೌಕಿಕ ಸಮಾಜದ ವಸ್ತುಸ್ಥಿತಿಯನ್ನು ವಿವರಿಸಬೇಕಾಗಿರುವುದರಿಂದ ಇವೆಲ್ಲವು ಬಾಯಿತಪ್ಪಿ, ಲೆಕ್ಕತಪ್ಪಿ ಹೇಳಿದ ಮಾತುಗಳು ಎಂದೆನಿಸುವುದೇ ಇಲ್ಲ. ಆದರೆ ಸ್ಥಾಪಿತ ಸಮಾಜ ಇದನ್ನು ಅಪರಾಧವೆಂಬಂತೆ ತನ್ನ ಮೇಲೆ ಹಾಕಿಕೊಳ್ಳುವುದು ಸಹಜವೇ! 'ಇನ್ನಾದರೂ...' ದಂತ ಕಥೆಗಳಿಂದ ಕುಂವೀ ಎದುರಿಸಿದ ಪ್ರಸಂಗಗಳು ಕಥೆಯ ಪರಿಣಾಮದ ಗಾಢತೆಯನ್ನು ಹೇಳುತ್ತವೆ.

ಬಹುತೇಕ ಕಥೆಗಳು ತಳಸಮಾಜವನ್ನು ಮುಂದಿಡುತ್ತವೆ. ಆ ಸಮಾಜದಲ್ಲಿನ ಇಡೀ ಬದುಕು ಮೇಲ್ಸಮಾಜಕ್ಕೆ ಅಥವಾ ಅನುಕೂಲಸ್ಥ ವರ್ಗಕ್ಕೆ ವ್ಯಂಗ್ಯವೆಂಬಂತೆ ಕಾಣುವುದಾಗಲೀ, ಕೇವಲ ಪ್ರೇಕ್ಷಕ-ಕೇಳುಗನೆಂಬಂತೆ ನಿರ್ವಹಿಸುವಂತಾಗುವುದಾಗಲೀ ಅಷ್ಟೇ ಸಹಜವಾದುದು! ಮೇಲ್ವರ್ಗಕ್ಕೆ ಸಂಬಂಧಿಸಿದ ಪಾತ್ರಗಳು ಇಲ್ಲಿ ಪೋಷಕಸ್ಥಾನದಲ್ಲಿ ನಿಲ್ಲುತ್ತಿರುವುದೇ ಕುಂವೀಯ ತಳಸಮಾಜಪರತೆಯನ್ನು ಸೂಚಿಸುತ್ತವೆ. ಕುಂವೀಯ ಈ ಚಿಕಿತ್ಸಕ ದೃಷ್ಟಿ – ಕಥೆಯನ್ನು ಹೇಳುವುದರ ಜೊತೆಗೆ (ಅಥವಾ ಅದಕ್ಕಿಂತಲೂ ಮುಖ್ಯವಾಗಿ) ಮತ್ತೊಂದು ಗುಪ್ತಗಾಮಿನಿ ಸಮಾಜವನ್ನು ಪರಿಚಯಿಸುವ ಉದ್ದೇಶವಾಗಿರುವಂತೆಯೂ ತೋರುತ್ತದೆ.

ಗೃಹೀತ ಸಮಾಜಕ್ಕೆ ಪರ್ಯಾಯ ಚಿಂತನೆ ಇಲ್ಲಿದೆ. ಇದುವರೆಗಿನ ಸಮಾಜವನ್ನು ಪೂರ್ವಪಕ್ಷದಲ್ಲಿಟ್ಟು ವಾದ ಮಾಡುವಂತೆ ಈ ಕಥೆಗಳು ಏನೋ ಹೊಸದನ್ನು ಕಟ್ಟುತ್ತವೆ.

* * *

ಕೇಳಿದ ಘಟನೆ ಕಥೆಯಾಗುವ ಕಾಲದಿಂದ ಹಿಡಿದು ನಡೆದ ಅನುಭವ ಕಥೆಯಾಗುವ ಕಾಲಕ್ಕೆ ಹೊರಳಿದ ಕನ್ನಡ ಕಥಾ ಸಂದರ್ಭದಲ್ಲಿ ಕುಂವೀ ತಮ್ಮ ಅನುಭವಗಳಿಂದ ಕಥೆಗಳನ್ನು ಕಟ್ಟಿದ್ದಾರೆ. ಇದಕ್ಕೆ ಸಾವಿರಪುಟಗಳ ಈ ಸಂಕಲನವೇ ಸಾಕ್ಷಿ.

'ಹತ್ಯೆ' ಕಥೆಯಲ್ಲಿ – ಬಲರಾಮನು ಶಿವು ಆಗಿ ಪರಿವರ್ತನೆಯಾಗುವುದು; ಚಾಕು ಇಟ್ಟಿರುವ ಚೀಲದಲ್ಲಿ ಹೂವು-ಹಣ್ಣು ಸೇರುವುದು; ನಿರಾಳವಾಗಿ ಭೀಕರ ಕೊಲೆ ಮಾಡುವ ಆತ ಅವಧೂತನಂತೆ ಕಾಣುವುದು; ಅಕ್ಕನೆಂಬಂತೆ ಬಂದ. ಗೌರಮ್ಮ ಕುಟುಂಬದ ಸದಸ್ಯತ್ವವನ್ನು ಬಲರಾಮನಿಗೆ ನೀಡುವುದು. 'ಕೊಲೆ ಎಂದರೇನು?' ಎಂದು ಮಗು ಕೇಳುವ ಪ್ರಶ್ನೆಗೆ ನಿರುತ್ತರನಾಗುವ ಬಲರಾಮ, ಬಲವುಳ್ಳ ಸಮಾಜದ 'ಆಯುಧ'ವೆಂಬಂತೆ ಅವನನ್ನು ಬಳಸಿಕೊಳ್ಳುತ್ತಿದ್ದರೂ

ಅವನ ಭೀಕರಮುಗ್ಧತೆಗೆ ಹೊಳೆಯದಂತಾಗುತ್ತಿರುವ ಸಂಕೀರ್ಣತೆಯಿಂದಲೇ ಕಥೆ ಕುತೂಹಲಕಾರಿ ಎನಿಸುತ್ತದೆ.

'ಎಂಜಲು' ಕಥೆ – ಒಂದೇ ಕಾಲಕ್ಕೆ ಒಂದು ಗ್ರಾಮದ ಮತ್ತು ಗ್ರಾಮೀಣ ಬದುಕಿನ ಒಟ್ಟು ದೃಶ್ಯವನ್ನು ನೀಡುತ್ತದೆ.

ಇದು 'ಕುಂವೀಯದು' – ಎಂದು ಹೇಳಬಹುದಾದ ಪ್ರತ್ಯೇಕಗುಣ ಕುಂವೀ ಕಥೆಗಳಿಗಿದೆ. 'ಕುಬುಸ', 'ಇನ್ನಾದರೂ ಸಾಯಬೇಕು', 'ಹತ್ಯೆ', 'ಸೂತಕ'... ದಂಥ ಕಥೆಗಳಲ್ಲಿ ಯಾವುದೋ ಒಂದು ಸಾಮ್ಯಗುಣ ಉಳಿದವರ ಕಥೆಗಳಿಗೆ ಸಂಬಂಧಿಸಿದಂತೆ ಇರಬಹುದಾದರೂ 'ಕುಂವೀತನ' ಎದ್ದುಕಾಣುತ್ತಿರುವುದರಿಂದ ಅವು ಪ್ರತ್ಯೇಕವಾಗುತ್ತವೆ. ಬಲರಾಮನಂಥ ಮುಗ್ಧ ಕೊಲೆಗಡುಕ ಮಾನವೀಯತೆಗೆ, ಅಂತಃಕರಣಕ್ಕೆ ಕರುಳಕೂಗಿಗೆ ಶರಣಾಗುವುದು ಹೊಸದೇನಲ್ಲ. ಆದರೆ 'ಹತ್ಯೆ'ಯಲ್ಲಿ ಅದು ವಿಶೇಷವಾಗಿರುವುದರಿಂದ ವಿಭಿನ್ನವಾಗುತ್ತದೆ. 'ಕುಬುಸ' ನಾಗರಿಕ ಗ್ರಾಮೀಣಗಳ ಹೊಂದಾಣಿಕೆಯಾಗದ ಧೋರಣೆಗೆ ಸಂಕೇತವಾಗಿ ಚಿತ್ರಣಗೊಂಡಿರುವುದೂ ಅಷ್ಟೇ. ಎಲ್ಲಾ ಕಥೆಗಳಲ್ಲಿ ಕೊನೆಗೆ ಅಂತಃಕರಣದ್ದೇ ಗೆಲುವು !

ಕುಂವೀ ಕಥೆಗಳ ಪಾತ್ರಗಳಿಗೆ ರಾಜಕೀಯ ಬೇಡ, ಖಚಿತ ಮತ್ತು ಸೀಮಿತವಾದ ಸಾಂಸ್ಕೃತಿಕ ಪರಿಧಿ ಬೇಡ, ದೇವರು-ಧರ್ಮಗಳೂ ಇಲ್ಲಿ ಬೇರೆಯೇ. ಡೋಮ, ಬಲರಾಮ, ಕೊಕ್ಕ, ರೊಣ್ಣ, ಕಿವುಡನಂಥವರಿಗೆ ''ಕಾಣುವುದೆಲ್ಲ ರೊಟ್ಟಿಯಂತೆಯೇ'' ಎನ್ನುವಂಥ ಹಸಿವಿದೆ. ಮೂಲಭೂತ ಅವಶ್ಯಕತೆಯಾದ ರೊಟ್ಟಿಯ ಮಟ್ಟದಲ್ಲಿಯೇ ಇವರೆಲ್ಲರೂ ಇರುವುದರಿಂದ ಇವರು ದೇಶ-ಭಾಷೆ-ಧರ್ಮಗಳವರೆಗೆ ಹೋಗಲಾರರು. ಬಹುಶಃ ಹೀಗಿರುವುದರಿಂದಲೇ ಕಥೆಗಳಲ್ಲಿ ಬರುವ ಕೆಲವು ರೂಪಕಗಳೂ ಮತ್ತು ಕಥೆಯ ಹೆಸರುಗಳೂ ಸಾಂಪ್ರದಾಯಿಕ ಗ್ರಹಿಕೆಗೆ ಪರ್ಯಾಯಗಳಾಗುತ್ತವೆ. (ಉದಾಹರಣೆಗೆ, ಗಾಡ್‌ಮದರ್..., ಕಳ್ಳ ಮನೆಹೊಕ್ಕಡೆ..., ಬಂದನಾ ಬ್ರೆಡ್ ರಾಯನು, ದೆವ್ವ ಬಂತು ದೆವ್ವ... ಹೀಗೆ). ಇವು ಘೋಷಿತ ಸಮಾಜಕ್ಕೆ ವಿರೋಧ ನೀಡುವ ಹೇಳಿಕೆಗಳೂ ಹಾಗೂ ಒಂದು ವಿಭಿನ್ನ ಚಿತ್ರವೂ ಆಗಿವೆ. ಜೊತೆಗೆ, ಗೃಹೀತ ನೆಲೆಗೆ ಕಟ್ಟುವ ಮತ್ತೊಂದು ಚರಿತ್ರೆಯೂ ಇದಾಗುತ್ತದೆ. ಗಂಗಪ್ಪ ಗಾಡ್‌ಮದರ್ ಆಗಿ ಚಿತ್ರಿತವಾಗಿ ಸೃಷ್ಟಿಶೀಲ ಪ್ರಕ್ರಿಯೆಯಲ್ಲಿ ಸ್ಥಾನ ಪಡೆಯುತ್ತಿರುವುದು – ಗಮನಾರ್ಹವಾದುದು.

ಸಿದ್ಧನಂಬಿಕೆಗಳನ್ನು ಕೆಣಕುವ ಮತ್ತು ಉಕ್ತ ಹೇಳಿಕೆಗಳನ್ನು ಅಲ್ಲಾಡಿಸುವ ತಂತ್ರದ ಮೂಲಕ ವಿಷಯವನ್ನು ವಿವರಿಸುವುದು ಕುಂವೀಗೆ ಸಿಕ್ಕಿರುವ ನಿರೂಪಣಾ ತಂತ್ರದ ಹಿಡಿತವಾಗಿದೆ.

ಕುಂವೀ ಮಾತನಾಡುವುದೆಲ್ಲಾ ಕಥೆಯಾಗಿ ಬಿಡುತ್ತದೆ ಎಂಬುದಕ್ಕೆ 'ಕಥೆ ಹೇಳೋ ಕರಿಯಜ್ಜ' – ಉತ್ತಮ ಉದಾಹರಣೆ. ಈ ಕಥೆಯ ಆರಂಭ-ಅಂತ್ಯಗಳು ಗೃಹೀತ ಕಥಾ ವ್ಯಾಕರಣವನ್ನು ಉಲ್ಲಂಘಿಸುತ್ತಿರುವುದೇ ಮೊದಲ ಕುತೂಹಲಕಾರಿ ಅಂಶ. ಕಥೆ ಮತ್ತು ಮನುಷ್ಯ, ಕಥೆ ಮತ್ತು ಬದುಕು, ಕತೆ ಮತ್ತು ಹಳ್ಳಿಗಳ



ಇವನೇ ಕಣೋ ಬೋರಾ
ನನ್ನ ಮಗ, ವಾಮನ !

ನಡುವೆ ಇದ್ದ ಅಥವಾ ಇರುವ ಅವಿನಾಭಾವವನ್ನು ಇದು ಉದಾಹರಿಸುತ್ತದೆ. ಕಥೆ ಹೇಳುವ ಕರಿಯಜ್ಜ – ಈ ಕಥೆಯ ಹೀರೋ ಆಗಿರುವುದರ ಜೊತೆಗೇ ಒಂದು ಕಥೆಯು ಆಗಿ ಮಾರ್ಪಟ್ಟಿರುವುದು ಇಲ್ಲಿ ವಿಶೇಷ. ಮಕ್ಕಳ ಜಗಳವನ್ನು ಉಪಶಮನ ಮಾಡುವುದರಿಂದ ಹಿಡಿದು ಎರಡು ಊರುಗಳ ನಡುವಿನ ವ್ಯಾಜ್ಯಕ್ಕೆ ಪರಿಹಾರವನ್ನು ಕೊಡುವುದರವರೆಗೆ ಕರಿಯಜ್ಜ ಮತ್ತು ಆತನ ಕಥೆ ಪಾತ್ರ ವಹಿಸುತ್ತಿರುವುದು ಇಲ್ಲಿಯ ಪ್ರಮುಖ ಅಂಶವಾಗಿ, ತಂತ್ರವಾಗಿ ಪರಿಣಮಿಸಿದೆ. ನನ್ನ ಪ್ರಕಾರ ಈ ಕಥೆಯ ಕಲ್ಪನೆಯೇ ಒಂದು ಶಕ್ತಿಶಾಲಿ ಪ್ರತಿಭೆಗೆ ಸಂಬಂಧಿಸಿದ್ದಾಗಿದೆ. ಇಡೀ ಕಥೆ ಅಸಂಗತವೆನಿಸುತ್ತದೆಯಾದರೂ ಅವೆಲ್ಲವುಗಳಿಗೆ ತನ್ನ ಪೂರ್ವಸಿದ್ಧತೆಯ ಮೂಲಕ ಓದುಗ ಹೊಂದಿಕೊಂಡು ಬಿಡುತ್ತಾನೆ. ಕಥೆಯ ಪ್ರಾರಂಭದಲ್ಲಿ 'ಎಂಥ ಅನಾಹುತ ನಡೆಯಿತು' – ಎಂಬ ಗಾಬರಿ ಹುಟ್ಟಿಸಿ ಅದರ ಪರಿಣಾಮದ ವಿಸ್ತಾರವನ್ನು ಕಥೆಯ ಉದ್ದಕ್ಕೂ ಹೇಳುತ್ತ ಹೋಗುವುದು ಕುತೂಹಲಕಾರಿ ಅಂಶವಾಗಿದೆ.

'ಕುಬುಸ'ದಲ್ಲಿ ವಿದ್ಯಾವಂತನಾಗಿ, ನೌಕರನೂ ಆಗಿ ನಗರ ಸೇರಿದ ನೆಟ್ಟಕಲ್ಲುವಿಗೆ ತನ್ನ ತಾಯಿಯ ಮುಗ್ಧ ಆಚರಣೆ ತನ್ನ ತಿಳುವಳಿಕೆಗೆ ಕಾಣುವ ವಿಭಿನ್ನತೆಯು ಗ್ರಾಮೀಣ ಸಮಾಜದ ಒಂದು ಲಕ್ಷಣಕ್ಕೆ ಬದ್ಧವಾಗಿಯೇ ಇದೆ. ಕಥೆಗಾರನೂ ಕುಬುಸ ಮತ್ತು ಬಂಡೆವ್ವಜ್ಜಿಯ ಪರವಾಗಿಯೇ ನಿಲ್ಲುತ್ತಾನೆ. ಕುಬುಸ ಮುಗ್ಧ-ಭಾವುಕ ಲೋಕದ ಸಂಕೇತವಾಗಿ ಪ್ರಕಟಗೊಳ್ಳುತ್ತಿರುವುದರಿಂದ ಅದೂ ಸಹಾ ಈ ಕಥೆಯಲ್ಲಿ ಅಮೂರ್ತ ಪಾತ್ರವಾಗುತ್ತದೆ. ('ಮುಳ್ಳು' – ಕಥೆಯಲ್ಲಿ ಮುಳ್ಳು ಸಹಾ ಹೀಗೆಯೇ ಒಂದು ಅಮೂರ್ತ ಪಾತ್ರವೇ.) ಒಂದರ್ಥದಲ್ಲಿ ನಾಗರಿಕತೆಯ ಅಥವಾ ನಮ್ಮ ಅತಿವೈಚಾರಿಕತೆಯ ಮುಂದೆ ಈ ಮುಗ್ಧ ಪಾರಂಪರಿಕ ಆಚರಣೆಯ ಗೆಲುವಾಗಿ ಈ ಕುಬುಸ ಗೋಚರಿಸುತ್ತದೆ. 'ನೆಟ್ಟಕಲ್ಲು' ಎಂದು ತನ್ನ ಮಗನಿಗೆ ಇಟ್ಟ ಹೆಸರಿನಿಂದಲೇ ಬಂಡೆವ್ವಜ್ಜಿಯ ಗಾಢವಾದ ಮುಗ್ಧ ನಂಬಿಕೆಗೆ ಸಾಕ್ಷಿಯಾಗಿದೆ. ನಾಗರಿಕತೆಯಲ್ಲಿ ಅದರ ಒಂದು ಭಾಗವಾಗಿ ಹೋಗುವ ನೆಟ್ಟಕಲ್ಲುವಿಗೆ ಆ ಹೆಸರು ಯಾವ ರೀತಿಯಲ್ಲೂ ಹೊಂದಾಣಿಕೆಯಾಗುವುದಿಲ್ಲ ಎಂಬುದು ಇಲ್ಲಿಯ ಬದುಕಿನ ಸ್ಥಿತ್ಯಂತರವಾಗಿದೆ. ಬಂಡೆ – ನೆಟ್ಟಕಲ್ಲುಗಳು ಒಂದರ್ಥದಲ್ಲಿ ಸ್ಥಿರವಾದ ಗ್ರಾಮೀಣ ಬದುಕಿಗೆ ಸೂಚನೆ ನೀಡುತ್ತವೆ. ಚಲನಶೀಲವಾದ ನಾಗರಿಕತೆಗೆ ಹೊಂದಿಕೊಳ್ಳಲಾಗದ ಹಳೆ ಪೀಳಿಗೆಗೆ ಬಂಡೆವ್ವ ಮತ್ತು ಹಳೆಯ ಹೊಸದರ ನಡುವಿನ ಗೊಂದಲದಲ್ಲಿ ನೆಟ್ಟಕಲ್ಲು ಭಾವನಾತ್ಮಕ ನೆಲೆಯಲ್ಲಿ ರೂಪತಾಳುತ್ತಾರೆ.

* * *

ಕುಂವೀಯ ಬಹುತೇಕ ಕಥೆಗಳಲ್ಲಿ ಒಬ್ಬೊಬ್ಬ ಕಥೆಗಾರನಿದ್ದಾನೆ. 'ಹತ್ಯೆ'ಯ ಬಲರಾಮ ಕೊಲೆಗಡುಕನಾದರೂ ಅವನಲ್ಲೂ ಒಬ್ಬ ಕಥೆಗಾರನಿದ್ದಾನೆ. ಆ ಕಥೆಗಾರ ಆತನೊಳಗಿರುವ ಅಂತಕನಿಗೆ ಸಹಾಯ ಮಾಡುತ್ತಾನೆ. 'ದೇವರ ಹೆಣ'ದ ರೊಣ್ಣಿಯೂ ಒಬ್ಬ ಕಥೆಗಾರನೇ ! ಗೌಡನೊಂದಿಗಿನ ಆತನ ಸಂಭಾಷಣೆಯಿಂದ ಅದು ವಿದಿತವಾಗುತ್ತದೆ. 'ಸೂತಕ' ಅದು ಒಂದು ಕಥೆಯ ಕಥೆಯೇ ಆಗಿದೆ. 'ಕಥೆಯೇಳೋ ಕರಿಯಜ್ಜ'ನಂತೂ ಸರಿಯೇ. 'ಇನ್ನಾದರೂ ಸಾಯಬೇಕು' – ವಿನಲ್ಲಿರುವ ಕಥೆಗಾರನು ಒಳತೋಟಿಯ ಕಥೆಯನ್ನು ಹೇಳುತ್ತಾನೆ. 'ಭಾಗೀರಥಿ ಮೇಡಂ' – ನಲ್ಲಿರುವ ವಿಕ್ಷಿಪ್ತತೆ ಒಂದು ಸಾಮಾಜಿಕ ವಾಸ್ತವಕ್ಕೆ ಸಂಬಂಧಿಸಿದ್ದೇ ಆಗಿದೆ.

* * *

ಕುಂವೀ – ತಮ್ಮ ಕಥೆಗಳಲ್ಲಿ ನಿರೂಪಕನಾಗಿ, ಒಂದು ಪಾತ್ರವಾಗಿ ಸೇರಿಹೋಗುತ್ತಿರುವುದರಲ್ಲಿ ('ನೆರಳು' ಕಥೆಯಲ್ಲಿ ಗುಬ್ಬಿಯಂಥ ಪಕ್ಷಿಯೊಳಗೂ ಸೇರುತ್ತಾರೆ) ಬಹುಶಃ ಎರಡು ಅಂಶಗಳಿವೆ ಎನಿಸುತ್ತದೆ. ಒಂದು : ಘಟನೆಯನ್ನು ಅಥವಾ ಅನುಭವವನ್ನು ಪೂರ್ವಪಕ್ಷದಲ್ಲಿಟ್ಟು ನೋಡಲಾಗದೆ ಆ ಘಟನೆ, ಅನುಭವಗಳನ್ನು ತನ್ನ ಸಂವೇದನೆಗೆ ಒಗ್ಗಿಸಿಕೊಂಡು ಅಥವಾ ಒಗ್ಗಿಕೊಂಡು ಪ್ರಸ್ತುತಪಡಿಸಬೇಕಾಗುವಂಥದ್ದು. ಎರಡು : ಸಂಪ್ರದಾಯನಿಷ್ಠ ಗೃಹೀತ ದೃಷ್ಟಿಯನ್ನು ನಿರಾಕರಿಸಿ ವಿಭಿನ್ನ ಸೃಜನಶೀಲತೆಯನ್ನು ಒಂದು ಅಸ್ತ್ರವಾಗಿ ಬಳಸಬೇಕಾಗಿರುವಂಥದ್ದು.

– ಈ ಕಾರಣಗಳಿಂದಲೇ ತಳ ಸಮಾಜದ ಒಂದೊಂದು ಎಳೆಗಳೂ 'ವ್ಯಂಗ್ಯ' ಎನ್ನುವಷ್ಟು ವಸ್ತುನಿಷ್ಠವಾದ ವಿಶ್ಲೇಷಣೆಗೆ ಒಳಗಾಗಿವೆ.

ಕೊನೆಗೆ :

ಕುಂವೀ – ಒಂದು ನಿರ್ದಿಷ್ಟ ಅಸೌಖ್ಯ ಸಾಮಾಜಿಕ ವರ್ಗವೊಂದರ ಪರ ಮಾತನಾಡುತ್ತಿರುವುದರಿಂದ ಕಥೆಗಳು ನಮ್ಮ ಮುಂದೆಯೇ ಓಡಾಡುತ್ತವೆ.

ಕುಂವೀ – ಆತ್ಮಚರಿತ್ರೆ ಬರೆದರೆ ಈ ಕಥೆಗಳನ್ನು ಮತ್ತೊಮ್ಮೆ ಬರೆದಂತೆಯೂ ನಾವು ಈ ಕಥೆಗಳನ್ನು ಮತ್ತೊಮ್ಮೆ ಓದಿದಂತೆಯೂ ಆಗಬಹುದು. ಅಂದರೆ ಕುಂವೀಗೆ ಅನುಭವಗಳ ದುಡಿತ ಒಂದೆಡೆ ಆತ್ಮಚರಿತ್ರೆಗೂ ಮತ್ತೊಂದೆಡೆ ಕನ್ನಡ ಕಥಾಲೋಕಕ್ಕೂ ಆಹಾರ ಒದಗಿಸಿವೆ.

ಡಾ|| ಮೃತ್ಯುಂಜಯ ರುಮಾಲೆ
ಪ್ರಣವ, ಬಸವೇಶ್ವರ ಬಡಾವಣೆ, ಹೊಸಪೇಟೆ - ೫೮೩ ೨೦೧

# ವಿಶ್ವಸಂಸ್ಥೆಯ ೬೧ನೇ ಮಾನವ ಹಕ್ಕು ನಿಯೋಜನೆ – ಕ್ಯೂಬಾದ ನಿಲುವೇನು ?

ಬಿ. ಎನ್. ವೇಣುಗೋಪಾಲ್

*ಕೆಲವೇ ದೇಶಗಳಲ್ಲಿ, ಅದರಲ್ಲೂ ಕ್ಯೂಬಾವು ಸಮಾಜವಾದ ವ್ಯವಸ್ಥೆಯನ್ನು ಅನುಸರಿಸಿ ಮುಂದುವರೆಯುತ್ತಿರುವ ಸಂದರ್ಭದಲ್ಲಿ, ಮಾನವ ಹಕ್ಕುಗಳ ಬಗ್ಗೆ ತಮ್ಮದೇ ಆದ ಗಂಭೀರ ಹಾಗೂ ಶ್ರದ್ಧಾಪೂರ್ವಕ ಕಾಳಜಿಯನ್ನು ತೋರಿಸಿರುವುದು ಸ್ವಾಗತಾರ್ಹ. ಇದು ಅಮೆರಿಕಾದಂತಹ ದೇಶಗಳಿಗೆ ನುಂಗಲಾರದ ತುತ್ತಾಗಿರುವುದೂ ವಾಸ್ತವದ ಸಂಗತಿ. ಸಮಾನತೆ, ವರ್ಗರಹಿತ ಸಮಾಜ ಹಾಗೂ ಆರ್ಥಿಕ-ಸಾಮಾಜಿಕ ನ್ಯಾಯವು ಯಾವ ದೇಶದಲ್ಲಿ ಯಶಸ್ವಿಯಾಗುತ್ತದೆಯೋ ಅಲ್ಲಿ ಮಾನವ ಹಕ್ಕುಗಳು ತಮ್ಮ ನಿಜ ಅರ್ಥವನ್ನು ಪಡೆಯುತ್ತವೆ. ಈ ನಿಟ್ಟಿನಲ್ಲಿ ಕ್ಯೂಬಾವು ವಿಶ್ವಸಂಸ್ಥೆ ವೇದಿಕೆಗಳಲ್ಲಿ ತನ್ನ ನಿಲುವನ್ನು ಸ್ಪಷ್ಟಪಡಿಸಿದೆ.*

**ಕ್ಯೂ**ಬಾದ ವಿದೇಶಾಂಗ ಮಂತ್ರಿ ಫಿಲಿಪ್ ಪೆರೆಸ್ ರೋಕೀ ಅವರು ೧೬ನೇ ಮಾರ್ಚ್, ೨೦೦೫ರಂದು ಜಿನೀವಾದಲ್ಲಿ ಜರುಗಿದ ೬೧ನೇ ಮಾನವ ಹಕ್ಕು ನಿಯೋಜನೆಯ ಸಮಾರಂಭದಲ್ಲಿ, ಬಂಡವಾಳಶಾಹಿ ದೇಶಗಳಲ್ಲೊಂದಾದ ಅಮೆರಿಕಾವು ಮಾನವ ಹಕ್ಕು ನೀತಿಯ ಬಗ್ಗೆ ಹೊಂದಿರುವ ಅಸಡ್ಡೆ ಮತ್ತು ಆ ನೀತಿಯ ಮೂಲಕ್ಕೆ ಚ್ಯುತಿ ತಂದಿರುವ ಸಂದರ್ಭದಲ್ಲಿ ಇದರ ವಿರುದ್ಧ ಧೈರ್ಯದಿಂದ ತಮ್ಮ ನಿಲುವುಗಳನ್ನು ಮಾನವ ಹಕ್ಕು ವೇದಿಕೆಯಲ್ಲಿ ಮಂಡಿಸಿದ್ದಾರೆ. ಈ ಕಟು ಸತ್ಯವನ್ನು ಬಹಿರಂಗವಾಗಿ ಹೇಳುವ ಎದೆಗಾರಿಕೆ ಕ್ಯೂಬಾಕ್ಕೆ ಮಾತ್ರ ಇದೆ ಎನಿಸುತ್ತದೆ.

ಮಾನವ ಹಕ್ಕುಗಳ ಪ್ರವಾದಿಗಳು, ಅವರ ಪ್ರಯತ್ನ, ನಂಬಿಕೆ, ಅದರ ಪ್ರಾಮುಖ್ಯತೆ ಮತ್ತು ಮಾನವ ಹಕ್ಕುಗಳ ಉಲ್ಲಂಘನೆಯ ವಿರುದ್ಧದ ಸಮರ – ಈ ಎಲ್ಲವೂ ತಮ್ಮ ತೀವ್ರತೆ ಹಾಗೂ ಕ್ಷಮತೆಯನ್ನು ಕಳೆದುಕೊಂಡಿವೆ. ಬಂಡವಾಳಶಾಹಿ ದೇಶಗಳ ಕಪಿ ಮುಷ್ಟಿಯಲ್ಲಿ ಮಾನವ ಹಕ್ಕುಗಳು ಬಂಧಿತವಾಗಿವೆಯಲ್ಲದೆ, ಈ ದೇಶಗಳ ಮೋಸ, ವಂಚನೆ ಹಾಗೂ ಪೊಳ್ಳು ಭಾಷಣಗಳಿಂದ ಪ್ರಾಮುಖ್ಯತೆ ಪಡೆದರೂ, ಪ್ರಪಂಚದಲ್ಲಿ ಕೋಟಿಗಟ್ಟಲೆ ಜನರು ತಮ್ಮ ಜೀವನದ ಹಕ್ಕು, ಶಾಂತಿಯ ಹಕ್ಕು, ಅಭಿವೃದ್ಧಿಯ ಹಕ್ಕು, ಆಹಾರದ ಹಕ್ಕು, ಕಲಿಕೆಯ ಹಕ್ಕು, ಉದ್ಯೋಗದ ಹಕ್ಕು, ಹಾಗೂ ಘನತೆಯಿಂದ ಬಾಳುವ ಹಕ್ಕುಗಳಿಂದ ವಂಚಿತರಾಗಿದ್ದಾರಲ್ಲದೆ, ಬಂಡವಾಳಶಾಹಿ ದೇಶಗಳು ಇದರ ಕಡೆ ನೋಡಿಯೂ ನೋಡದಂತೆ ವರ್ತಿಸುತ್ತಿವೆ.

ಪ್ರಪಂಚದ ಎಲ್ಲ ದೇಶಗಳ ಮುಂದಾಳತ್ವ ವಹಿಸುವ ಅಮೆರಿಕಾವು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಮಾನವ ಹಕ್ಕು ನಿಯೋಜನೆಯನ್ನು ತನ್ನ ಖಾಸಗಿ ಸ್ವತ್ತೆಂದು ತಿಳಿದು ಯಾವ ದೇಶವು ತನ್ನ ಜೊತೆಗೆ ಹಸ್ತ ಜೋಡಿಸುವುದಿಲ್ಲವೋ ಅದನ್ನು ನಿಂದಿಸುವುದು ತನ್ನ ಜನ್ಮಸಿದ್ಧ ಹಕ್ಕು ಎಂದು ಭಾವಿಸಿದೆ. ಆದರೂ ಸಮಾಜವಾದದಲ್ಲಿ ನಂಬಿಕೆಯಿಟ್ಟ ದೇಶಗಳು, ಅದರಲ್ಲೂ ಕಳೆದ ಒಂದು ವರ್ಷದಲ್ಲಿ ಕ್ಯೂಬಾದಲ್ಲಿ ಜರುಗಿದ ಇತರ ಎರಡು ಘಟನೆಗಳು ಅಟ್ಟಹಾಸದಿಂದ ಮೆರೆಯುತ್ತಿರುವ ಅಮೆರಿಕಾವನ್ನು ತಲೆ ತಗ್ಗಿಸುವಂತೆ ಮಾಡಿದೆ.

ಮೊದಲನೆಯದಾಗಿ, ಕ್ಯೂಬಾದ ಗ್ವಾಂಟನಾಮೋದಲ್ಲಿ ಅಮೆರಿಕಾದ ನೌಕಾ ಪಡೆಗಳು ಬೀಡುಬಿಟ್ಟು ಸರಿಸುಮಾರು ಐನೂರು ಜನ ಸ್ಥಳೀಯರಿಗೆ ಊಹಿಸಲ ಸಾಧ್ಯವಾದ ರೀತಿಯಲ್ಲಿ ಕಿರುಕುಳ ನೀಡಿ ತನ್ನ 'ದೊಡ್ಡತನ'ವನ್ನು ಪ್ರದರ್ಶಿಸಿದ್ದು. ಈ ಕೃತ್ಯವನ್ನು ಮರೆಮಾಚುತ್ತಿದ್ದ ಸಂದರ್ಭದಲ್ಲಿ, ಐರೋಪ್ಯ ಒಕ್ಕೂಟ ರಾಷ್ಟ್ರಗಳು ಯಾವುದೇ ತೆರನಾದ ಸಹಮತ ತೋರಿಸದೆ ಅಮೆರಿಕಾ ವಿರುದ್ಧ ತಮ್ಮ ಹಕ್ಕು ಚಲಾಯಿಸಿವೆ. ಇದು ಅಮೆರಿಕಾಕ್ಕೆ ಮಸಿ ಬಳೆದಂತಾಗಿದೆ. ಅಬು ಗ್ರೈಬ್‌ನಲ್ಲಿ ಬಂಧಿತರನ್ನು ನಾನಾರೀತಿಯಲ್ಲಿ ಹಿಂಸಿಸಿ ಅವರ ನಗ್ನ ಛಾಯಾಚಿತ್ರಗಳನ್ನು ತೆಗೆದು ಆನಂದಿಸಿದ ಅಮೆರಿಕಾದ ಮಿಲಿಟರಿ ಉನ್ನತಾಧಿಕಾರಿಗಳು ತಮ್ಮ ತಪ್ಪನ್ನು ಒಪ್ಪಿಕೊಂಡಿದ್ದಾರೆ. ಈ ಸಂದರ್ಭದಲ್ಲಿ ಅಮೆರಿಕಾವು ಮಾನವ ಹಕ್ಕುಗಳಿಗೆ ವಿಧೇಯನಾಗಿ ನಡೆದುಕೊಳ್ಳುತ್ತದೆಂದು ನಿರೀಕ್ಷಿಸುವುದು ತೀರಾ ಹಾಸ್ಯಾಸ್ಪದವಾಗುತ್ತದೆ.

ಎರಡನೆಯದಾಗಿ, ಮಾನವ ಹಕ್ಕುಗಳಿಗೆ ಒದಗಿರುವ ಬೆದರಿಕೆ, ಸವಾಲು ಹಾಗೂ ಅವುಗಳೆಲ್ಲ ಮಾರ್ಪಾಡುಗಳನ್ನು ತರುವ ನಿಟ್ಟಿನಲ್ಲಿ ಅಧ್ಯಯನ ಮಾಡಲು ವಿಶ್ವಸಂಸ್ಥೆಯ ಕಾರ್ಯದರ್ಶಿಯವರ ನೇತೃತ್ವದಲ್ಲಿ ಒಂದು ಉನ್ನತ ಮಟ್ಟದ ಸಮಿತಿಯನ್ನು ರಚಿಸಿದ್ದರೂ ಆ ಸಮಿತಿಯು ತನ್ನ ವರದಿಯಲ್ಲಿ ಮಾನವ ಹಕ್ಕುಗಳ ಬಗ್ಗೆ ಇಬ್ಬಗೆಯ ನಿಲುವನ್ನು ಅನುಸರಿಸಿರುವುದು ಕಂಡುಬಂದಿದೆ. ಈ ವರದಿಯನ್ನು ಕ್ಯೂಬಾವು ಸಾರಾಸಗಟಾಗಿ ತಳ್ಳಿಹಾಕಿದೆ. ಇದರಿಂದ ಅಮೆರಿಕಾದ ಕಣ್ಣು ಮತ್ತಷ್ಟು ಕೆಂಪಗಾಗಿದೆ.

ಬಹುತೇಕ ತೃತೀಯ ರಾಷ್ಟ್ರಗಳು ಅಮೆರಿಕಾದ ಆರ್ಥಿಕ ನೀತಿಯ ಕಪಿಮುಷ್ಟಿಯಲ್ಲಿ ಬಂಧಿತರಾಗಿರುವುದು ಎಲ್ಲರಿಗೂ ತಿಳಿದ ವಿಷಯ. ಒಂದು ರೀತಿಯಲ್ಲಿ ಈ ದೇಶಗಳು ಕ್ಯೂಬಾದ ಜೊತೆ ದನಿಗೂಡಿಸಿದರೆ ಅಂತಹ ದೇಶಗಳ ವಿರುದ್ಧ ಅಮೆರಿಕಾವು ತನ್ನ ಆರ್ಥಿಕ ದಿಗ್ಬಂಧನಾಸ್ತ್ರವನ್ನು ಪ್ರಯೋಗಿಸುವುದರಲ್ಲಿ ಯಾವುದೇ ಅನುಮಾನವಿಲ್ಲ. ಇದರಿಂದ ಈ ತೃತೀಯ ದೇಶಗಳ ಆರ್ಥಿಕ ವ್ಯವಸ್ಥೆಗಳ ಮೇಲೆ ಪ್ರತಿಕೂಲ ಪರಿಣಾಮಗಳಾಗುವುದು ನಿಶ್ಚಿತ.

ಪ್ರಸ್ತುತ ಎಲ್ಲ ರಾಷ್ಟ್ರಗಳು ಮಾನವ ಹಕ್ಕುಗಳ ಪ್ರಯೋಜನವನ್ನು ಖಾತರಿಯಾಗಿ ಅನುಭವಿಸಬೇಕಾದರೆ, ಮೊದಲು ಅವು ಯಾವ ಅಭಿವೃದ್ಧಿ ಸ್ಥಾನ ಪಟ್ಟಿಯಲ್ಲಿ ನಿಲ್ಲುತ್ತವೆ ಹಾಗೂ ಯಾವ ವರ್ಗಾಧಾರಿತ (ಬಂಡವಾಳಶಾಹಿ ಅಥವಾ ಸಮಾಜವಾದಿ) ವ್ಯವಸ್ಥೆಗೆ ಸೇರಿವೆ ಎಂಬ ಅಂಶವನ್ನು ಆಧಾರಿಸಿರುತ್ತದೆ. ಈ ಬಗೆಯ ತಾರತಮ್ಯವನ್ನು ವಿಶ್ವಸಂಸ್ಥೆಯು ಅಮೆರಿಕಾದ ಕೈಗೂಸಾಗಿ ನೀತಿಗಳನ್ನು ಸಿದ್ಧಪಡಿಸಿದರೆ ವಿಶ್ವದಾದ್ಯಂತ ಆಂತರಿಕ ಹಾಗೂ ಅಂತರರಾಷ್ಟ್ರೀಯ ಮಾನವ ಸಮಾಜ ಹಂತಗಳಲ್ಲಿ ಸಾಮಾಜಿಕ ನ್ಯಾಯ ಸಾಧಿಸಲು ಹೇಗೆ ತಾನೇ ಸಾಧ್ಯವಾಗುತ್ತದೆ? ಕ್ಯೂಬಾವು ಮಾನವ ಹಕ್ಕುಗಳನ್ನು ಕುರಿತಂತೆ ವಸ್ತುನಿಷ್ಠ ನಿಲುವು ತಳೆದಿರುವುದು ಶ್ಲಾಘನೀಯ.

ಅಭಿವೃದ್ಧಿ ಹೊಂದಿದ ಹಾಗೂ ಬಡರಾಷ್ಟ್ರಗಳು ಏಕಕಾಲದಲ್ಲಿ ಶಾಂತಿಯ ಹಕ್ಕು ಪಡೆದಿವೆಯಾದರೂ, ಇದರಲ್ಲಿ ಬಹಳಷ್ಟು ಬಡರಾಷ್ಟ್ರಗಳು ಯಾವತ್ತಿಗೂ ಅಭಿವೃದ್ಧಿ ದೇಶಗಳ ಆಕ್ರಮಣಕಾರಿ ನೀತಿಗಳಿಂದ ನಲುಗುತ್ತಿವೆ. ಅನೇಕ ರಾಷ್ಟ್ರಗಳ ಶಾಂತಿ ಪ್ರಕ್ರಿಯೆಯು ಅವರ ಸೇನಾಬಲದ ಮೇಲೆ ನಿರ್ಧರಿಸಲ್ಪಡುತ್ತದೆ. ಈಗಾಗಲೇ ಆರ್ಥಿಕವಾಗಿ ಮುಂದುವರೆದ ದೇಶಗಳು, ಬಡರಾಷ್ಟ್ರಗಳ ಸಂಪತ್ತಿನಿಂದ ಹಾಗೂ ವಸಾಹತುಗಳ ದಯೆಯಿಂದ ಬೀಗುತ್ತಿವೆಯಾದರೂ ಅಲ್ಲಿನ ಮಾನವ ಹಕ್ಕುಗಳು ಶ್ರೀಮಂತರಿಗಾಗಿವೆಯೇ ಹೊರತು ಮಧ್ಯಮ ವರ್ಗದವರು ಮತ್ತು ಬಡವರಿಗಲ್ಲ. ಇದೊಂದು ದುರಂತ. ಉದಾಹರಣೆಗೆ, ಅಮೆರಿಕಾದ ಒಬ್ಬ ಮಧ್ಯಮ ವರ್ಗದ ಪ್ರಜೆ, ಒಬ್ಬ ಬಡ ನಾಗರಿಕ, ಸೆನೆಟ್ ಚುನಾವಣೆಗೆ ಸ್ಪರ್ಧಿಸಲು ಸಾಧ್ಯವಿಲ್ಲ, ಕಾರಣ, ಚುನಾವಣಾ ಪ್ರಚಾರಕ್ಕೆ ಸರಿಸುಮಾರು ಎಂಟು ಮಿಲಿಯನ್ ಡಾಲರ್‌ಗಳು ವೆಚ್ಚವಾಗುತ್ತದೆ. ಇಷ್ಟು ಹಣವನ್ನು ಒಬ್ಬ ಮಧ್ಯಮ ವರ್ಗದ ವ್ಯಕ್ತಿ ಅಥವಾ ಬಡವನು

ಖರ್ಚುಮಾಡಲು ಸಾಧ್ಯವೇ? ಇನ್ನು, ಇರಾಕಿನಲ್ಲಿ ಸುಮಾರು ಎರಡು ಸಾವಿರ ಅಮೆರಿಕಾದ ಯುವಕರು ಅಸು ನೀಗಿದರು. ಇವರ್‍ಯಾರೂ ಶ್ರೀಮಂತ ವರ್ಗಕ್ಕೆ ಸೇರಿದವರಲ್ಲ. ಈ ಹಿನ್ನೆಲೆಯಲ್ಲಿ ಅಮೆರಿಕಾವು ಹಕ್ಕುಗಳ ಅಡಿಯಲ್ಲಿ ಇಂತಹ ತನ್ನ ಬಡ ಜನತೆಗೆ ಯಾವ ರೀತಿ ನೆರವು ನೀಡುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ.

ಅನಭಿವೃದ್ಧ ದೇಶಗಳಲ್ಲಿ ಇಂದು ಜನಜೀವನವು ಬಹಳಷ್ಟು ಹದಗೆಟ್ಟಿದೆ. ಇದಕ್ಕೆ ಮುಖ್ಯ ಕಾರಣ ಇಲ್ಲಿ ವಾಸಿಸುವ ಬಹುತೇಕ ಜನಸಮುದಾಯವು ಬಡವರಾಗಿದ್ದು ದುಡಿಯುವ ವರ್ಗಕ್ಕೆ ಸೇರಿದವರಾಗಿದ್ದಾರೆ. ಇನ್ನು ಶ್ರೀಮಂತರು ಅಲ್ಪಸಂಖ್ಯಾತ ರಾಗಿದ್ದು, ಎರಡು ವರ್ಗಗಳ ನಡುವಿನ ಅಂತರ ಅಷ್ಟೇ ದೊಡ್ಡದಾಗಿದೆ. ಈ ಪರಿಸರದಲ್ಲಿ ಶಾಂತಿಯ, ಆರ್ಥಿಕತೆಯ, ಜೀವನದ ಹಕ್ಕು ಪ್ರತಿಯೊಬ್ಬ ನಾಗರಿಕನಿಗೂ ದಕ್ಕುತ್ತದೆಂದು ಊಹಿಸುವುದು ಅಸಾಧ್ಯದ ಮಾತು.

ತೃತೀಯ ರಾಷ್ಟ್ರಗಳಲ್ಲಿ ಸುಮಾರು ನೂರಮೂವತ್ತು ದೇಶಗಳು ಅಭಿವೃದ್ಧಿಯ ಹಕ್ಕು ಅನುಸರಿಸಲು ಅಶಕ್ತವಾಗಿವೆ. ಈ ಸಂದರ್ಭದಲ್ಲಿ ತಮ್ಮದೇ ಆದ ವಸ್ತುಗಳಿಗೆ, ಸೇವೆಗಳಿಗೆ ಮಾರುಕಟ್ಟೆ ಹಾಗೂ ನವೀನ ತಾಂತ್ರಿಕತೆಯನ್ನು ಹೊಂದಲು ಇನ್ನೂ ಹೆಣಗಾಡುತ್ತಿವೆ. ಮುಂದುವರಿದ (ಆರ್ಥಿಕವಾಗಿ) ಕೆಲವೇ ರಾಷ್ಟ್ರಗಳು ಅದರಲ್ಲೂ ಅಮೆರಿಕಾವು ಇಂತಹ ಹಿಂದುಳಿದ ದೇಶಗಳಿಗೆ ತೊಡಿಸಿರುವ ಕೋಳಗಳೇ ಮಾನವ ಹಕ್ಕುಗಳ ಜಾರಿಗೆ ತಡೆಯುಂಟಾಗಲು ಮುಖ್ಯ ಕಾರಣ ಎನ್ನಬಹುದು. ಅಭಿವೃದ್ಧಿ ಹೊಂದುತ್ತಿರುವ ಬಹುತೇಕ ದೇಶಗಳು ಅನುಭವಿಸುತ್ತಿರುವ ಬಡತನ, ನಿರುದ್ಯೋಗ, ಅನಕ್ಷರತೆ ಮುಂತಾದುವು ತಮ್ಮಿಂದಲೇ ಆದ ಒಂದು ಪ್ರಮಾದವೆಂದು ಬಗೆದು ಅದರ ನಿರ್ಮೂಲನಕ್ಕೆ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದ ಸಾಲಕ್ಕೆ ಕೈ ಚಾಚುತ್ತಿರುವುದು ಸೋಜಿಗದ ವಿಷಯ. ಅಮೆರಿಕಾದಂತಹ ದೇಶವು ಇಂತಹ ಸಂದರ್ಭಗಳನ್ನು ದುರುಪಯೋಗಪಡಿಸಿಕೊಳ್ಳಲು ಎಲ್ಲಾ ರೀತಿಯ ಪ್ರಯತ್ನ ಮಾಡುತ್ತಿದೆ ಹಾಗೂ ಕೆಲ ದೇಶಗಳಲ್ಲಿ ಯಶಸ್ಸನ್ನು ಕಂಡಿದೆ.

ಪ್ರಪಂಚದಲ್ಲಿ ಇಂದು ಪ್ರತಿನಿತ್ಯ ಹನ್ನೊಂದು ಮಿಲಿಯನ್ ಮಕ್ಕಳು (ಐದು ವರ್ಷಕ್ಕಿಂತ ಕಡಿಮೆ ವಯಸ್ಸಿನವರು) ನಾನಾ ರೋಗಗಳಿಗೆ ತುತ್ತಾಗಿ, ಲಸಿಕೆಯ ಪೂರೈಕೆ ಇಲ್ಲದೆ ಸಾಯುತ್ತಿದ್ದಾರೆ. ಬದುಕುಳಿದ ಮಕ್ಕಳಲ್ಲಿ ಆರುನೂರು ಮಿಲಿಯನ್ ಮಕ್ಕಳು ಕಲಿಕೆಯ ಹಕ್ಕಿನಿಂದ ವಂಚಿತರಾಗಿದ್ದಾರೆ. ಲ್ಯಾಟಿನ್ ಅಮೆರಿಕಾದಲ್ಲೇ ಇಪ್ಪತ್ತು ಮಿಲಿಯನ್ ಮಕ್ಕಳು ಹಲವಾರು ರೀತಿಯ ಶೋಷಣೆಗೊಳಪಡುತ್ತಿದ್ದಾರೆ. ಈ ನಿಟ್ಟಿನಲ್ಲಿ ಬಾಲಕಾರ್ಮಿಕ ಪದ್ಧತಿಯನ್ನು ತಡೆಗಟ್ಟುವಲ್ಲಿ ವಿಶ್ವಸಂಸ್ಥೆಯು ಸಂಪೂರ್ಣ ವಿಫಲವಾಗಿದೆ. ಆಶ್ಚರ್ಯವೆಂದರೆ, ಪ್ರಪಂಚದಲ್ಲಿ ಒಂದು ಬಿಲಿಯನ್ ಅನಕ್ಷರಸ್ಥರಿದ್ದು, ಅವರ ಸಂಖ್ಯೆಯು ದಿನೇ ದಿನೇ ಹೆಚ್ಚುತ್ತಿದೆ. ಈ ಸಂದರ್ಭದಲ್ಲಿ ವಿಶ್ವಸಂಸ್ಥೆಯು ಸಮಸ್ತ ಮಾನವ ಹಕ್ಕುಗಳನ್ನು ಮಂಡಿಸುವಲ್ಲಿ ದಿವ್ಯ ಮೌನ ತಳೆದಿದೆ.

ಕೆಲವೇ ದೇಶಗಳಲ್ಲಿ ಅದರಲ್ಲೂ ಕ್ಯೂಬಾವು ಸಮಾಜವಾದ ವ್ಯವಸ್ಥೆಯನ್ನು ಅನುಸರಿಸಿ ಮುಂದುವರೆಯುತ್ತಿರುವ ಸಂದರ್ಭದಲ್ಲಿ, ಮಾನವ ಹಕ್ಕುಗಳ ಬಗ್ಗೆ ತಮ್ಮದೇ ಆದ ಗಂಭೀರ ಹಾಗೂ ಶ್ರದ್ಧಾಪೂರ್ವಕ ಕಾಳಜಿಯನ್ನು ತೋರಿಸಿರುವುದು ಸ್ವಾಗತಾರ್ಹ. ಇದು ಅಮೆರಿಕಾದಂತಹ ದೇಶಗಳಿಗೆ ನುಂಗಲಾರದ ತುತ್ತಾಗಿರುವುದೂ ವಾಸ್ತವದ ಸಂಗತಿ. ಸಮಾನತೆ, ವರ್ಗರಹಿತ ಸಮಾಜ ಹಾಗೂ ಆರ್ಥಿಕ-ಸಾಮಾಜಿಕ ನ್ಯಾಯವು ಯಾವ ದೇಶದಲ್ಲಿ ಯಶಸ್ವಿಯಾಗುತ್ತದೆಯೋ ಅಲ್ಲಿ ಮಾನವ ಹಕ್ಕುಗಳು ತಮ್ಮ ನಿಜ ಅರ್ಥವನ್ನು ಪಡೆಯುತ್ತವೆ. ಈ ನಿಟ್ಟಿನಲ್ಲಿ ಕ್ಯೂಬಾವು ವಿಶ್ವಸಂಸ್ಥೆ ವೇದಿಕೆಗಳಲ್ಲಿ ತನ್ನ ನಿಲುವನ್ನು ಸ್ಪಷ್ಟಪಡಿಸಿದೆ. ಇದಕ್ಕೆ ಕ್ಯೂಬಾವು ತೆತ್ತ ಬೆಲೆ ಅಪಾರ. ಅದೆಂದರೆ ಅಮೆರಿಕಾದಿಂದ ಆರ್ಥಿಕ ದಿಗ್ಬಂಧನ ಮತ್ತು ಜನರ ಪ್ರೀತಿಗೆ ಪಾತ್ರರಾದ ಅಧ್ಯಕ್ಷ ಫಿಡೆಲ್ ಕ್ಯಾಸ್ಟ್ರೋ ಅವರನ್ನು ಸಿ.ಐ.ಎ. ಮೂಲಕ ಅನೇಕ ಬಾರಿ ಕೊಲ್ಲಲು ಆ ರಾಷ್ಟ್ರವು ಹೂಡಿದ ಒಳಸಂಚುಗಳು. ಇವೆಲ್ಲವನ್ನು ಮೆಟ್ಟಿನಿಂತು ತನ್ನ ನಾಗರಿಕರಿಗಷ್ಟೇ ಅಲ್ಲದೆ ಎಲ್ಲಾ ದೇಶಗಳ ಜನತೆಯ ಮಾನವ ಹಕ್ಕುಗಳ ರಕ್ಷಣೆಗೆ ಪಣತೊಟ್ಟು ನಿಂತಿದೆ ಕ್ಯೂಬಾ. ೧೬-೩-೨೦೦೫ರಂದು ಜಿನೀವಾದಲ್ಲಿ ಜರುಗಿದ ವಿಶ್ವಸಂಸ್ಥೆಯ ೬೧ನೇ ಮಾನವ ಹಕ್ಕು ನಿಯೋಜನೆಯ ಯಾವುದೇ ಠರಾವು ಅಥವಾ ನಿರ್ಣಯವನ್ನು ತಾನು ಸಮ್ಮತಿಸುವುದಿಲ್ಲವೆಂದು ಕ್ಯೂಬಾ ಹೇಳಿಕೆ ನೀಡಿದೆ. ಕ್ಯೂಬಾದ ಈ ನಿಲುವು ಮಾನವ ಹಕ್ಕುಗಳ ಬಗ್ಗೆ ಪೊಳ್ಳು ಭಾಷಣ ಮಾಡುವ ದೇಶಗಳಿಗೆ ಪಾಠವಾಗಬಲ್ಲುದೇ?

ಬಿ. ಎನ್. ವೇಣುಗೋಪಾಲ್
ನಂ. ೫೨೫/೭೦, ತ. ರಾ.ಸುಬ್ಬರಾವ್ ರಸ್ತೆ, ೮ನೇ ಮುಖ್ಯರಸ್ತೆ, ಹನುಮಂತನಗರ, ಬೆಂಗಳೂರು - ೧೯



## ಮತದಾರರಿಗೆ

ಓದಲಿಲ್ಲ ಬರೆಯಲಿಲ್ಲ
ಬರಿದೇ ರುಜು ಹಾಕಿದಿರಿ
ಎದುರಿಟ್ಟ ಪ್ರಾಮಿಸರಿ ಪತ್ರಕ್ಕೆ
ಈಗ ನೋಡಿ! ಹರಿದ ರಕ್ತಕ್ಕೆ ಬಿದ್ದ ಹೆಣಕ್ಕೆ
ಮಾಡಿದ ಹಾದರಕ್ಕೆಲ್ಲ ನೀವೇ ಹೊಣೆಯಾದಿರಿ.

ಮತವೆಂದರೇನು ? 'ಮತ'ಕ್ಕೆ ಅನುಮತವೆ ?!
ದಾನವೆಂದರೇನು ? ದಾನವರಿಗೆ ದಾನವೇ ?!

ನಂಬಬಾರದು ಹೀಗೆ ಹುಂಬತನ ಮಗುತನವಲ್ಲ
ಓದಿರಿ ಈಗಲಾದರೂ
ರಕ್ತತಿಲಕದ ನಡುವಿನ ಆರ್ತತೆಯ
ನೋಡಿರಿ ಈಗಲಾದರೂ
ಹಾರುವ ಹದ್ದಿನ ಹಿಂದಿನ ಹಂಚಿಕೆಯ
ಪ್ರಿಯ ಮತದಾರರೇ
'ಮತ'ವನ್ನು 'ಮತ'ಕ್ಕೆ ಮಾರಬೇಡಿ
ಮತವನ್ನು ಚಿತೆಗೂ ಹಾಕಬೇಡಿ

ಗುದ್ದಲಿಯಾಗಲಿ, ಪಿಕಾಸಿಯಾಗಲಿ ಮತ
ಅಗೆಯಿರಿ ಮನಮನದ ಹೊಲದೆದೆಯ
ಬಿತ್ತಿ ದಯೆ, ಪ್ರೀತಿ ಸ್ನೇಹದ ಬೀಜ
ಮತಾತೀತವಾಗಲಿ ಮತ-ಮತಿ
ಪ್ರೀತಿಯವತರಣಕ್ಕೆ ಅನುಮತಿ

ಯು. ಎಸ್. ಶ್ರೀಧರ ಆರಾಧ್ಯ
ಕನ್ನಡ ಉಪನ್ಯಾಸಕ, ಶ್ರೀಮತಿ ಡಿ. ಚೆನ್ನಮ್ಮ ಪದವಿ ಪೂರ್ವ ಕಾಲೇಜು
ಮಾದಾಪುರ, ಕೊಡಗು ಜಿಲ್ಲೆ - ೫೭೧ ೨೫೧

# ಕುವೆಂಪು ನಾಟಕಗಳು

ಆಧುನಿಕ ಕನ್ನಡ ಸಾಹಿತ್ಯದ ಶ್ರೇಷ್ಠ ಬರಹಗಾರರಲ್ಲಿ ಕುವೆಂಪು ಅವರೂ ಒಬ್ಬರು. ಕತೆ, ಕಾದಂಬರಿ, ಮಹಾಕಾವ್ಯ, ಕವಿತೆ, ನಾಟಕ, ಶಿಶು ಸಾಹಿತ್ಯ, ಜೀವನ ಚರಿತ್ರೆ, ವಿಮರ್ಶೆ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ವಿಪುಲ ಸಾಹಿತ್ಯ ಸೃಷ್ಟಿಸಿದ್ದಾರೆ. ರಾಷ್ಟ್ರೀಯ ಚಳುವಳಿಯು ಪ್ರಖರವಾಗಿದ್ದ ಕಾಲದಲ್ಲಿ ಬರೆಯಲು ಆರಂಭಿಸಿದ ಕುವೆಂಪು ಅವರ ಬರವಣಿಗೆಯಲ್ಲಿ ವಸಾಹತು ಶಾಹಿಯೊಂದಿಗಿನ ಮುಖಾಮುಖಿ ಎದ್ದುಕಾಣುತ್ತದೆ.

'ಶತಮಾನದ ಕವಿ' ಎಂದೇ ಕರೆಯಲ್ಪಡುವ ಕುವೆಂಪು ಅವರ ಸಾಹಿತ್ಯ ಸಿದ್ಧಿಯೊಳಗಿನ ಅನರ್ಘ್ಯ ರತ್ನಗಳೆಂದರೆ : ರಾಷ್ಟ್ರೀಯತೆ, ವಿಶ್ವಪ್ರಜ್ಞೆ, ಅನಿಕೇತನ ತತ್ವ, ಶೂದ್ರ ಪ್ರಜ್ಞೆ, ಅಧ್ಯಾತ್ಮ, ವೈಚಾರಿಕತೆ. ಇವೆಲ್ಲವೂ ಒಬ್ಬ ಲೇಖಕನ ಸೃಜನಶೀಲ ಬರವಣಿಗೆಯಲ್ಲಿ ಕಂಡುಬರುತ್ತವೆಯೆಂದಾಗ ಸಹಜವಾಗಿಯೇ ತಾತ್ವಿಕ ದ್ವಂದ್ವ, ಮಿತಿಗಳು ಮತ್ತು ಉದಾರವಾದ ದೃಷ್ಟಿಕೋನವೊಂದು ಇರುತ್ತವೆಂಬುದನ್ನು ಈಗಾಗಲೇ ಗುರುತಿಸಲಾಗಿದೆ. ಈ ದಿಸೆಯಲ್ಲಿ ನೋಡಿದಾಗ ಕುವೆಂಪು ನವೋದಯದ ಎಲ್ಲಾ ಬರಹಗಾರರಂತೆಯೇ ಅನೇಕ ವೈರುಧ್ಯಗಳ ನಡುವೆಯೂ ವಸಾಹತುಶಾಹಿಗೆ ಪ್ರತಿರೋಧ ವ್ಯಕ್ತಪಡಿಸುತ್ತಾರೆ. ಕುವೆಂಪು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲ ಬಾರಿಗೆ ಶೂದ್ರಪ್ರಜ್ಞೆಯ ದನಿಯನ್ನು ದಾಖಲಿಸಿದವರು ಮತ್ತು ಶೂದ್ರಪ್ರಜ್ಞೆಗೆ ಗಟ್ಟಿ ನೆಲೆಯನ್ನು ಒದಗಿಸಿದವರು. ಕನ್ನಡ ನವೋದಯದ ಲಕ್ಷಣಗಳನ್ನು ಮೈಗೂಡಿಸಿಕೊಂಡಿದ್ದ ಕುವೆಂಪು ಅವರ ಸಾಹಿತ್ಯದಲ್ಲಿನ ವೈರುಧ್ಯಗಳನ್ನು ಮತ್ತು ಸಾಹಿತ್ಯ ಸಿದ್ಧಿಯನ್ನು ಗುರುತಿಸುವ ಮೂಲಕ ಸಮಕಾಲೀನ ಸಾಹಿತ್ಯ ಸಂದರ್ಭದಲ್ಲಿ ಅವರ ಪ್ರಸ್ತುತತೆಯನ್ನು ಕಂಡುಕೊಳ್ಳಬೇಕಾಗಿದೆ. ಈ ಕಾರಣಕ್ಕೆ ಕುವೆಂಪು ಅವರ ಸಮಗ್ರ ಸಾಹಿತ್ಯ ಕುರಿತ ಮರುವಿಮರ್ಶೆ ಅಗತ್ಯವಿದೆ.

ಪ್ರಸ್ತುತ, ಕುವೆಂಪು ಅವರ ನಾಟಕಗಳನ್ನು ಕುರಿತು ಚರ್ಚಿಸೋಣ. ಕುವೆಂಪು ಪುರಾಣ, ಇತಿಹಾಸ ಮತ್ತು ಸಾಮಾಜಿಕ ಸಂಗತಿಗಳನ್ನು ಆಧರಿಸಿದ ಹದಿನಾಲ್ಕು ನಾಟಕಗಳನ್ನು ಬರೆದಿದ್ದಾರೆ. ಇಲ್ಲಿ, ಕುವೆಂಪು ಅವರ ನಾಟಕಗಳ ವಸ್ತುವಿನ್ಯಾಸ, ಸನ್ನಿವೇಶ ನಿರ್ಮಾಣ, ಪಾತ್ರಚಿತ್ರಣ ಮತ್ತು ಭಾಷೆಯನ್ನು ಕುರಿತಂತೆ ಚರ್ಚಿಸಿ ಅನಂತರ ಕುವೆಂಪು ಅವರ ಸಾಹಿತ್ಯ ಸೃಷ್ಟಿಯನ್ನು ಪ್ರಭಾವಿಸಿದ ಸಂಗತಿಗಳು, ತಾತ್ವಿಕನೆಲೆ, ವೈಚಾರಿಕಪ್ರಜ್ಞೆ, ಆಧುನೀಕರಣ, ರಂಗಭೂಮಿ ಸಾಧ್ಯತೆ ಮತ್ತು ಅವರ ನಾಟಕಗಳ ಪ್ರಸ್ತುತತೆಯನ್ನು ಕಂಡುಕೊಳ್ಳುವ ಒಂದು ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಕುವೆಂಪು ಅವರ ನಾಟಕಗಳಿವು : ಬೆರಳ್‌ಗೆ ಕೊರಳ್ (೧೯೪೭), ಶ್ಮಶಾನ ಕುರುಕ್ಷೇತ್ರ (೧೯೪೭), ಕಾನೀನ (೧೯೭೪), ಶೂದ್ರತಪಸ್ವಿ (೧೯೪೪), ವಾಲ್ಮೀಕಿಯ ಭಾಗ್ಯ (೧೯೩೧), ಚಂದ್ರಹಾಸ (೧೯೬೩), ಯಮನ ಸೋಲು (೧೯೨೮), ಮಹಾರಾತ್ರಿ (೧೯೩೧), ರಕ್ತಾಕ್ಷಿ (೧೯೩೨), ಬಿರುಗಾಳಿ (೧೯೩೦), ಜಲಗಾರ (೧೯೨೮), ಬಲಿದಾನ (೧೯೪೮), ಮೋಡಣ್ಣನ ತಮ್ಮ (೧೯೨೬), ನನ್ನ ಗೋಪಾಲ (೧೯೩೦).

**ಪೌರಾಣಿಕ ನಾಟಕಗಳು :** ಕುವೆಂಪು ಅವರು ರಚಿಸಿದ ನಾಟಕಗಳಲ್ಲಿ ಅರ್ಧದಷ್ಟು ನಾಟಕಗಳು ಪುರಾಣದ ವಸ್ತುವನ್ನು ಒಳಗೊಂಡವು ಎಂಬುದು ಕುತೂಹಲಕರವಾದುದು. ಪೌರಾಣಿಕ ಕಥಾವಸ್ತುವಿನ ಆಯ್ಕೆಯ ಹಿಂದಿರುವ ಕಾರಣಗಳನ್ನು ಗುರುತಿಸುವುದಾದರೆ,

೧. ವಸಾಹತುಶಾಹಿಯ ಪರ್ಯಾಯ ಚಿಂತನೆಯ ಫಲ
೨. ಕುವೆಂಪು ಅವರ ತಾತ್ವಿಕ ದ್ವಂದ್ವಗಳು ಪೌರಾಣಿಕ ಕಥಾವಸ್ತುವಿನ ಆಯ್ಕೆಗೆ ಕಾರಣ
೩. ಪುರಾಣ, ಮಹಾಕಾವ್ಯಗಳಲ್ಲಿ ಚಿತ್ರಿತವಾಗಿದ್ದ ಕೊಳಕುಗಳನ್ನು ನಿವಾರಿಸಿ, ಸಮಕಾಲೀನಗೊಳಿಸುವಲ್ಲಿ ಅವರಿಗಿದ್ದ ಜಾಣ್ಮೆ ಮತ್ತು ಚಿಕಿತ್ಸಕ ದೃಷ್ಟಿ
೪. ಅವಿಘಟಿತ ಸಂಘರ್ಷ ಮತ್ತು ಉದಾರವಾದಿ ಮಾನವತಾವಾದ.

ಮಹಾಭಾರತ ಕತೆಯನ್ನು ಆಧರಿಸಿ ರಚಿತವಾದ ನಾಟಕಗಳು : ಬೆರಳ್‌ಗೆ ಕೊರಳ್ (೧೯೪೭), ಶ್ಮಶಾನ ಕುರುಕ್ಷೇತ್ರ (೧೯೩೧), ಕಾನೀನ (೧೯೭೪). ಬೆರಳ್‌ಗೆ ಕೊರಳ್ (೧೯೪೭) ನಾಟಕವು ಕುವೆಂಪು ಅವರ ದರ್ಶನ ಪ್ರಜ್ಞೆಗೆ ಉತ್ತಮ ನಿದರ್ಶನ. ಈ ನಾಟಕದಲ್ಲಿ ಮಹಾಭಾರತ ಉಪಾಖ್ಯಾನದ ಏಕಲವ್ಯ ಪ್ರಸಂಗವನ್ನು ಸಾರ್ವಕಾಲಿಕಗೊಳಿಸುವ ಪ್ರಯತ್ನ ಮಾಡಿದ್ದಾರೆ. ಗುರುತತ್ವ, ಕರ್ಮತತ್ವ ಮತ್ತು ಯಜ್ಞತತ್ವಗಳು ನಾಟಕದಲ್ಲಿ ಮೈದೋರಿರುವ ಬಗೆ ಬೆರಗುಗೊಳಿಸುವಂತಹದ್ದು. ವಿದ್ಯೆಯ ಮಹತ್ವವನ್ನು ವಿವರಿಸಿ ಗುರು-ಶಿಷ್ಯರಿಬ್ಬರನ್ನೂ ಎತ್ತರಕ್ಕೇರಿಸಿದ ಕೃತಿ ಇದು. ಇಲ್ಲಿ ಬರುವ ಏಕಲವ್ಯನ ಅನನ್ಯ ಗುರುಭಕ್ತಿ, ಸಮರ್ಪಣಾ ಮನೋಭಾವ, ಏಕಾಗ್ರತೆ, ಧ್ಯಾನ, ಜ್ಞಾನದಾಹ – ಇವು ಎಲ್ಲ ಕಾಲಕ್ಕೂ ಸ್ವೀಕೃತವಾಗುವಂತಹವು. ಆದರೆ, ವರ್ಣ ವ್ಯವಸ್ಥೆಯಲ್ಲಿ ಏಕಲವ್ಯನಂತಹವರು ಕಲಿಯಲು ಅನರ್ಹರೆನಿಸಿಬಿಡುತ್ತಾರೆ. ಇದಕ್ಕೆ ವರ್ಗವ್ಯವಸ್ಥೆಯು ಅಸಹನೆಯ ಅಡ್ಡಗೋಡೆಯನ್ನ ನಿರ್ಮಿಸಿಬಿಡುತ್ತದೆ. ಕುವೆಂಪು ಅವರ ನಾಟಕದ ಸಿದ್ಧಿ ಮತ್ತು ಮಿತಿಗಳೆರಡೂ ಇಲ್ಲಿಯೇ ಇವೆ. ಅಧ್ಯಾತ್ಮ ಉದಾರ ಮಾನವತಾವಾದ ಮತ್ತು ಅವರ ವಿಘಟನೆಗೊಳ್ಳದ ಸಂಘರ್ಷದಿಂದಾಗಿ ಮೂಲ ಕತೆಯಲ್ಲಿ ವಿದ್ಯೆಕಲಿಸಲು ನಿರಾಕರಿಸುವ ದ್ರೋಣರು, ಬೆರಳ್‌ಗೆ ಕೊರಳ್ ನಾಟಕದಲ್ಲಿ ಅಶ್ವತ್ಥಾಮನ ಕೋರಿಕೆಯಂತೆ ತಮ್ಮ ಮನೆಯಲ್ಲೇ ಇಟ್ಟುಕೊಂಡು ವಿದ್ಯೆ ಕಲಿಸುವ ಮೂಲಕ ಗುರುವನ್ನು ವರ್ಣತಾರತಮ್ಯದಿಂದ ಪಾರು ಮಾಡುವ ಬಗೆಯನ್ನು ಕಾಣಬಹುದು. ಆದರೆ ಅರ್ಜುನ ಏಕಲವ್ಯನ ವಿದ್ಯೆಯನ್ನು ಕಂಡು ಕರುಬುವುದು ಪ್ರಭುತ್ವದ ಅಸಹನೆಯನ್ನು ಸೂಚಿಸುತ್ತದೆ. ವರ್ಗ ವ್ಯವಸ್ಥೆಯು ತಂದೊಡ್ಡಿದ ನೋವನ್ನು ವಾತ್ಸಲ್ಯಮಯಿಯಾದ ತಾಯಿಯ ಬಳಿ ಏಕಲವ್ಯ ನಿವೇದಿಸುವುದು ಅರ್ಥಪೂರ್ಣವಾಗಿದೆ :

ಅರಸು ಮಕ್ಕಳ ಅಸೂಯೆ ಅಡ್ಡವಂದುದು ನನಗೆ
ಪಾಂಡವರೊಳೊರ್ವನಾ ಬಿಂಕಗುಳಿ ಅರ್ಜುನನ್
ನನ್ನ ಬಿಲ್ಲೇಳ್ಗೆಯಂ ಕಂಡು ಕರುಬಿದನ್
ಶೂದ್ರನೊಡನೆಮಗೆ ಸಮಚರ್ಯೆ ಸಲ್ಲದೆಂದಾಡಿ
ಸಡೆತನ್, ಮುನಿದನ್, ಕೀಳವೋಲಾಡಿದನ್

(ಬೆ.ಕೊ. ಪು. ೧೬)

ಪರಿಶುದ್ಧ ಗುರುಭಕ್ತಿಯಿಂದ ಕೂಡಿರುವ ಏಕಲವ್ಯ ಗುರುವನ್ನು ತನ್ನೆತ್ತರಕ್ಕೇರಿಸಿದ ಶಿಷ್ಯ. ಇದಕ್ಕೆ 'ಶೂದ್ರನಾದೊಡಮೇನ್ ? ಸಮರ್ಥನ್, ವಿನಯಶಾಲಿ' ಎಂಬ ಗುರು ದ್ರೋಣರ ಸಮರ್ಥನೆ. ಇದೇ ಕುವೆಂಪು ಅವರ ಸಿದ್ಧಿ. ಅಸೂಯೆ, ಅಸಹನೆ, ಮತ್ಸರ, ದ್ವೇಷದಿಂದ ಕೂಡಿದ ಅರ್ಜುನನನ್ನು ಏಕಲವ್ಯನು

ಡಾ|| ಕೆ. ಶಿವಾನಂದಯ್ಯ

ದಿಟ್ಟವಾಗಿಯೇ ಎದುರಿಸುತ್ತಾನೆ.

*ವನಚರರ್ ಅನಸೂಯಶೀಲರ್*
*ಅರಿಯರ್ ಪೆಸರಂ ಮೆರೆವ ಅಹಂಕಾರಮಂ*
*ಪೆಸರಾಸೆ, ಅದೊಂದು ನಾಗರಿಕರ್ಗೆ ಮೀಸಲಾಗಿರ್ಪ*
*ಮನೋಜಾಡ್ಯಂ ಕಣಾ !* (ಬೆ.ಕೊ. ಪು. ೧೯)

ಎಂಬಲ್ಲಿ ಕುವೆಂಪು ಅವರ ಅಪ್ಪಟ ಶೂದ್ರಪ್ರಜ್ಞೆ ಅಭಿವ್ಯಕ್ತಗೊಂಡಿದೆ. ಶೂದ್ರ ಅನಸೂಯಶೀಲನೂ, ನಿರಹಂಕಾರಿಯೂ, ಕೀರ್ತಿಶನಿಯನ್ನು ನಿರಾಕರಿಸುವವನೂ ಆಗಿದ್ದಾನೆ. ಆದರೆ ಪುರೋಹಿತಶಾಹಿ ಮನಸ್ಸು ಯಾರೊಬ್ಬರ ಏಳ್ಗೆಯನ್ನು ಸಹಿಸದು. ಪ್ರಭುತ್ವದ 'ಅಹಂ'ನ್ನು ಬಲ್ಲ ದ್ರೋಣರು ಹೀಗೆ ಹೇಳುತ್ತಾರೆ :

*ಅರಸು ಮಕ್ಕಳ್ಗೋವಜುಗೆಯ್ವುದುಂ ಮೇಣ್*
*ಸಿಡಿಮದ್ದನೆರೆವುದುಂ ಎರಡುಮೊಂದೆ !*
(ಬೆ.ಕೊ. ಪು. ೨೯)

ಹಾಗೂ,

*ಏನಹಂಕಾರಮೋ ಈ ಕ್ಷತ್ರಿಯರ ಮಕ್ಕಳ್ಗೆ*
*ಪೆಸರ ಬಿಂಕಂ ! ರಕ್ತಪಂಕಂ*
*ಸೆಣಸುವಂಕಂ ! ಲೋಕಕಾತಂಕಂ !*
*ಪೆಸರಂತೆ ಪೆಸರ್ ! ಕೆಸರ್ ! ನೆತ್ತರ್ಗೆಸರ್ !*
(ಅದೇ ಪು. ೩೦)

ಗುರು ದ್ರೋಣಾಚಾರ್ಯರ ಅಂತರಾಳವನ್ನು ತೆರೆದಿಡುವ ಕುವೆಂಪು ಇಡೀ ಪ್ರಭುತ್ವವನ್ನು ಜುಗುಪ್ಸಿತ ಭಾವದಿಂದ ನೋಡುತ್ತಾರೆ. ಆದರೂ ಅವರಿಗೆ ವಿದ್ಯೆ ಕಲಿಸಿದ್ದಾದರೂ ಏಕೆ ? ಅನ್ನದ ಋಣವೋ ಅಥವಾ ಗುರುಶಕ್ತಿ ಕೂಡ ರಾಜಶಕ್ತಿಯೆದುರು ಶರಣಾಗಿ ಬಿಡುವುದೋ ? ಏಕೆಂದರೆ, ಇಷ್ಟಕ್ಕೆ ತೃಪ್ತನಾಗದ ದ್ರೋಣರ ಆತ್ಮವಿಮರ್ಶೆಯ ನುಡಿ ಹೀಗಿದೆ :

*ಬಿಂಕಕ್ಕೆ ಡೊಳ್ಳೀವುದದು ವಿದ್ಯೆಯೇ ? ಅವಿದ್ಯೆ !*
*ತವಿಪುದಾವುದೋ ಅಹಂಕಾರಮಂ ಅದು ವಿದ್ಯೆ ;*
*ಮಿಕ್ಕುದೆಲ್ಲಂ ಅವಿದ್ಯೆ !*
*ವಿದ್ಯೆಯೆಂಬ ಪೆಸರ ಮರೆಯೊಳಾನ್*
*ಅವಿದ್ಯೆಯಂ ಪೋಷಿಸುವ ಗುರುವಾದೆನಲ್ತೆ !*
(ಅದೇ ಪುಟ)

ಎಂಬ ಮಾತು ಎಲ್ಲ ಕಾಲದ ಅಧ್ಯಾಪಕರು ತಮ್ಮ ಆತ್ಮಸಾಕ್ಷಿಯೊಂದಿಗೆ ಮುಖಾಮುಖಿಯಾಗುವಂತೆ ಮಾಡುತ್ತದೆ. ಮುಂದೆ, ಏಕಲವ್ಯನ ಬಿಲ್ವಿದ್ಯೆ ಪರೀಕ್ಷಿಸುವ ನೆಪದಲ್ಲಿ ದ್ರೋಣರು ಆಕಾಶದಲ್ಲಿ ಹಾರಾಡುವ ಹಕ್ಕಿಯನ್ನು ಹೊಡೆದುಕೆಡಹು ಎಂದಾಗ,

*ಅಪರಾಧಮಿಲ್ಲದಾ ಸಾಧುವಂ ಕೊಲಲ್ಕಲ್ತು,*
*ಆಚಾರ್ಯ, ಆ ವಿದ್ಯೆಯಂ ನೀನಿತ್ತುದೆನಗೆ*
(ಪು. ೪೨)

ಆತ್ಮಹಾನಿ, ಸರ್ವನಾಶದಂತಹ ಕೆಲಸಕ್ಕೆ ಕೈಹಾಕದ ಏಕಲವ್ಯನಂಥವನು ಇಂದಿನ ಸಂದಿಗ್ಧ ಪರಿಸ್ಥಿತಿಯಲ್ಲಿ ನಾವೆಲ್ಲರೂ ಅಪೇಕ್ಷಿಸುವ ಒಬ್ಬ ವಿನಯಶೀಲ ಶಿಷ್ಯ.

*ನೀನ್ ಬರ್ದುಕಿ ನನ್ನನುಂ ಬರ್ದುಕಿಸಿದಯ್*
*ನಿನಗಲ್ತಿದು ಪರೀಕ್ಷೆ, ನನಗುಂ ಕಣಾ !*
(ಪು. ೪೩)

ಎಂಬ ದ್ರೋಣನ ಕೃತಜ್ಞತಾ ಮಾತುಗಳು ಪರೀಕ್ಷೆಯೆಂಬುದು, ಗುರು-ಶಿಷ್ಯರಿಬ್ಬರೂ ಎದುರಿಸುವಂತಹದ್ದು ಎಂಬುದನ್ನು ವಿವರಿಸುತ್ತದೆ. ಅಂತಹ ಬಹುದೊಡ್ಡ ನೈತಿಕ ಜವಾಬ್ದಾರಿ ಮತ್ತು ಎಚ್ಚರಿಕೆಯನ್ನು ನೀಡುತ್ತಾರೆ. ದ್ರೋಣಾಚಾರ್ಯರು ಗುರುದಕ್ಷಿಣೆಯನ್ನು ಕೇಳಿದಾಗ ಏಕಲವ್ಯನು ಗುರುವಿನ ಧರ್ಮಸಂಕಟವನ್ನು ಅರಿತು ಗುರುಮಾತು ಹುಸಿಯಾಗದಂತೆ ನಡೆದುಕೊಳ್ಳುತ್ತಾನೆ.

*ಪಡೆವುದೆಲ್ಲಂ ಕೊಡುವುದಕ್ಕಲ್ತೆ, ಆರ್ಯ ? ಮೇಣ್*
*ಪೂರ್ಣಮಂ ಕೊಡದೆ ಪಡೆದಪವೆಂತು*
*ಪೂರ್ಣಮಂ* (ಪು. ೪೬)

ಗುರುವನ್ನು ಮೀರಿ ನಿಂತ ಪರಿಪೂರ್ಣ ವ್ಯಕ್ತಿತ್ವದ ಸಮರ್ಪಣಾ ಭಾವವು ಈ ಮಾತುಗಳಲ್ಲಿ ಎದ್ದ ಕಾಣುತ್ತದೆ.

ಮಹಾಭಾರತ ಕತೆಯಲ್ಲಿ ಗುರುದಕ್ಷಿಣೆಯಾಗಿ ಹೆಬ್ಬೆರಳನ್ನು ನೀಡುವ ಮೂಲಕ ದ್ರೋಣನು ಕೊಟ್ಟ ಮಾತು ಉಳಿಸಿಕೊಂಡರೆ, ಅರ್ಜುನನಿಗೆ ಹರ್ಷವಾಗುವುದರೊಂದಿಗೆ ನಾಟಕ ಮುಗಿಯುತ್ತದೆ. ಆದರೆ ಕುವೆಂಪು ನಾಟಕದ ಸಿದ್ಧಿ ಇರುವುದು ಇದನ್ನು ಮೀರಿ ನಿಲ್ಲುವ ವಸ್ತುವಿನ್ಯಾಸಕ್ರಮದಲ್ಲೇ. ಏಕಲವ್ಯನು ಬೆರಳು ಕತ್ತರಿಸಿಕೊಟ್ಟಾಗ ಸುರಿದ ರಕ್ತದ ಮಡುವನ್ನು ದ್ರೋಣಾಚಾರ್ಯ ಬಾಗಿ ನೋಡುತ್ತಾನೆ. ಅಲ್ಲಿ ಅವನ ಕೊರಳ ನೆರಳು ಬೀಳುತ್ತದೆ. ಆ ನೆರಳ ಕೊರಳನ್ನು ಭೀಮಾಕಾರದ ಹಸ್ತ ಕಡಿದುರುಳಿಸುತ್ತದೆ. ಆಗ ದ್ರೋಣ ಹೀಗೆ ಹೇಳುತ್ತಾನೆ :

*ಬೆರಳ್‌ಗೆ ಕೊರಳ್*
*ವತ್ಸಾ, ನಿನ್ನ ಬೆರಳ್ಗೆ ನನ್ನ ಕೊರಳ್ !* (ಪು. ೫೦)

ಜೊತೆಗೆ, ತನ್ನ ಮಗ ಏಕಲವ್ಯನಿಗೆ ಬಂದೊದಗಿದ ಸ್ಥಿತಿಯನ್ನು ಕಂಡು ತಾಯಿ ಶಪಿಸುತ್ತಾಳೆ :

*ಆರ್ಗೊ ಬಲಿ ನನ್ನ ಕಂದನ ಬೆರಳ್*
*ಬಲಿಯಕ್ಕೆ ಆ ಪಾಪಿಯ ಕೊರಳ್* (ಪು. ೫೫)

ಕರ್ಮದ ಪಾಂಗು, ಮರಿಗೆ ಮರಿ, ತಾಯಿಯ ಶಾಪವು ಸಮನಿಸಿತೆಂಬಂತೆ, ಮುಂದೆ ಮಹಾಭಾರತ ಯುದ್ಧದಲ್ಲಿ ಧೃಷ್ಟದ್ಯುಮ್ನನಿಂದ ಸಾವು ಸಂಭವಿಸುವುದನ್ನು ಸೂಚಿಸುತ್ತದೆ.

ವಿದ್ಯೆ, ಗುರು-ಶಿಷ್ಯ, ವರ್ಣ ಮತ್ತು ವರ್ಗ ಸಂಘರ್ಷದ ವಿಷಯಗಳನ್ನು ಒಳಗೊಂಡ ಈ ನಾಟಕವೂ ಕೂಡಾ ವರ್ಗಸಂಘರ್ಷದ ಚರಿತ್ರೆಯ ಸತ್ಯಗಳನ್ನು ಪೂರ್ಣವಾಗಿ ಗ್ರಹಿಸದೆ ಗುರು-ಶಿಷ್ಯರನ್ನು ಕುರಿತ ಸನಾತನ ಮೌಲ್ಯಗಳನ್ನೇ ಸಮಕಾಲೀನ ಜಗತ್ತಿಗೆ ಸಿದ್ಧಗೊಳಿಸುತ್ತದೆ. ನಾಟಕದ ಕಲಾತ್ಮಕ ಸಿದ್ಧಿಯು ಅದರಲ್ಲಿನ ಮಿತಿಗಳನ್ನು ಮರೆಮಾಡಿದೆ ಎಂದು ಹೇಳಬಹುದು.

ಶ್ಮಶಾನ ಕುರುಕ್ಷೇತ್ರ (೧೯೩೧) ನಾಟಕವು ಹದಿನೆಂಟು ದಿನಗಳ ಕುರುಕ್ಷೇತ್ರ ಯುದ್ಧ ಕೊನೆಗೊಂಡ ನಂತರ ಶ್ಮಶಾನ ಸದೃಶವಾಗಿರುವುದನ್ನು ಚಿತ್ರಿಸುತ್ತದೆ. ವ್ಯಾಸಭಾರತದಿಂದ ಆಯ್ದ ಕತೆಯಾದರೂ ಅದಕ್ಕೆ ಭಿನ್ನವಾಗಿದೆ. ಹಾಗೆ ನೋಡಿದರೆ, ಶ್ಮಶಾನ ಕುರುಕ್ಷೇತ್ರ ನಾಟಕವು ಯುದ್ಧಾನಂತರದ ಕತೆ. ಯುದ್ಧದ ಭೀಕರ ಪರಿಣಾಮ, ಪ್ರಭುತ್ವ ಪ್ರತಿಷ್ಠೆಗಾಗಿ ಶ್ರೀಸಾಮಾನ್ಯನ ಪ್ರಾಣಾರ್ಪಣೆ, ವಿನಾಶ, ಹೊಸ ಯುಗದ ಆರಂಭ – ಮುಂತಾದ ಸಂಗತಿಗಳನ್ನೊಳಗೊಂಡಿರುವ ಈ ನಾಟಕವು ವ್ಯಾಸ, ಪಂಪ, ರನ್ನ, ಕುಮಾರವ್ಯಾಸರ ನಂತರದ ಪರಂಪರೆಯನ್ನು ಸಮರ್ಥವೂ, ಸಮಕಾಲೀನವೂ ಆದ ರೀತಿಯಲ್ಲಿ ಮುಂದುವರೆಸಿದಂತೆ ಕಾಣುತ್ತದೆ. ನಾಟಕ ಆರಂಭವಾಗುವುದು ಶ್ರೇಷ್ಠತಮ ಸಂಸ್ಕೃತಿಯನ್ನು ಹೊಂದಿದ ದ್ವಾಪರದ ಅಂತ್ಯ ಮತ್ತು ಕಲಿಯುಗ ಪ್ರಾರಂಭವಾಗುವ ಯುಗಾರಂಭದೊಂದಿಗೆ :

ಸಾವಿನಲಿ ಹೊಸಬಾಳು ಹುದುಗಿಹುದು ;
ನಾಶದಲಿ
*ನವಸೃಷ್ಟಿ ಪವಡಿಸಿದೆ, ನೂರು ಮಾತಿಂದೇನ್ ?*
*ಸಾವೆ ಹೊಸಬಾಳಿಗಾಧಾರಮಾಗಿರ್ಪುದು*
*ನಾಶಮೇ ನವಸೃಷ್ಟಿಗುತ್ಸಾಹಮಾದಪುದು !*
(ಶ್ಮ.ಕು. ಪು. ೧೧)

ಎಂಬ 'ಕಲಿ'ಯ ಮಾತುಗಳಲ್ಲಿ ಹೊಸ ಭರವಸೆಯ ನವಯುಗಾರಂಭದ ಸ್ವಾಗತವನ್ನು ಕಾಣಬಹುದು. ಇಲ್ಲಿ ಪೌರಾಣಿಕ ಪರಿಧಿಯನ್ನು ದಾಟುವ ಕುವೆಂಪು ಮುಂಬರಲಿರುವ ಕಲಿಯುಗ ಹಿಂದಿನದಕ್ಕಿಂತ ಶ್ರೇಷ್ಠತಮವಾದುದೆಂದು ಸಾರುತ್ತಾರೆ. ಸಾಮಾನ್ಯರ ದೃಷ್ಟಿಕೋನದಲ್ಲಿ, ಯುದ್ಧದ ಭೀಕರ ಚಿತ್ರಣಗಳನ್ನು ಸೆರೆಹಿಡಿಯುವ ಮೂಲಕ ಯುದ್ಧದ ಅನಾಹುತಗಳೇನೆಂಬುದನ್ನು ಸಾರ್ವಕಾಲಿಕಗೊಳಿಸಿದ್ದಾರೆ. ಕಂದನನ್ನು ಕಳೆದುಕೊಂಡ ಮುದುಕಿ, ''ಶ್ರೀಮಂತರ ಕಲಹಾಗ್ನಿಗೆ ಯಜ್ಞಪಶುಗಳೆಮ್ಮಂತಹ ದರಿದ್ರರಲ್ತೆ?''

**'ಶತಮಾನದ ಕವಿ' ಎಂದೇ ಕರೆಯಲ್ಪಡುವ ಕುವೆಂಪು ಅವರ ಸಾಹಿತ್ಯ ಸಿದ್ಧಿಯೊಳಗಿನ ಅನರ್ಘ್ಯ ರತ್ನಗಳೆಂದರೆ : ರಾಷ್ಟ್ರೀಯತೆ, ವಿಶ್ವಪ್ರಜ್ಞೆ, ಅನಿಕೇತನ ತತ್ವ, ಶೂದ್ರ ಪ್ರಜ್ಞೆ, ಅಧ್ಯಾತ್ಮ, ವೈಚಾರಿಕತೆ. ಇವೆಲ್ಲವೂ ಒಬ್ಬ ಲೇಖಕನ ಸೃಜನಶೀಲ ಬರವಣಿಗೆಯಲ್ಲಿ ಕಂಡುಬರುತ್ತವೆಯೆಂದಾಗ ಸಹಜವಾಗಿಯೇ ತಾತ್ವಿಕ ದ್ವಂದ್ವ, ಮಿತಿಗಳು ಮತ್ತು ಉದಾರವಾದ ದೃಷ್ಟಿಕೋನವೊಂದು ಇರುತ್ತವೆಂಬುದನ್ನು ಈಗಾಗಲೇ ಗುರುತಿಸಲಾಗಿದೆ. ಈ ದಿಸೆಯಲ್ಲಿ ನೋಡಿದಾಗ ಕುವೆಂಪು ನವೋದಯದ ಎಲ್ಲಾ ಬರಹಗಾರರಂತೆಯೇ ಅನೇಕ ವೈರುಧ್ಯಗಳ ನಡುವೆಯೂ ವಸಾಹತುಶಾಹಿಗೆ ಪ್ರತಿರೋಧ ವ್ಯಕ್ತಪಡಿಸುತ್ತಾರೆ. ಕುವೆಂಪು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲ ಬಾರಿಗೆ ಶೂದ್ರಪ್ರಜ್ಞೆಯ ದನಿಯನ್ನು ದಾಖಲಿಸಿದವರು ಮತ್ತು ಶೂದ್ರಪ್ರಜ್ಞೆಗೆ ಗಟ್ಟಿ ನೆಲೆಯನ್ನು ಒದಗಿಸಿದವರು.**

(ಪು. ೪೨) ಎಂದು ರೋದಿಸುತ್ತಾಳೆ. ಮಹಾಭಾರತದಲ್ಲಿ ಪ್ರಸ್ತಾಪಿಸಲ್ಪಟ್ಟ ಧರ್ಮ, ಅಧರ್ಮದಂತಹ ವಿಚಾರಗಳನ್ನು ಮರುವಿಮರ್ಶೆಗೊಳಪಡಿಸುತ್ತಾರೆ. 'ವಿಧಿವಿಳಸನದಿಂ ಅಂತಾದುದು; ಇಲ್ಲದಿರೆ ಭೀಮಂಗದುವೆ ಪಾಡಾಗುತ್ತಿತ್ತು. ನಾನಲ್ಲಿಯೆ ನಿಂತು ನೋಡಿದೆನು ಅವರ ಗದಾಯುದ್ಧಮಂ – ಕೌರವನು ಸೋತು ಸೋತವನಲ್ಲ; ಭೀಮನು ಗೆದ್ದು ಗೆದ್ದವನಲ್ಲ' (ಪು. ೧೯) ಎಂಬ ಮರುಳುಗಳ ಮಾತುಗಳು ಕುವೆಂಪು ಅವರ ಪ್ರತಿಭಾ ಸೃಷ್ಟಿಗೆ ಸಾಕ್ಷಿ. ಯುದ್ಧವಿರೋಧಿ ನಿಲುವಿನ ಕವಿ ಮನುಜನ ಕೊಲೆಪಾತಕತನಕ್ಕೆ ಬೇಸತ್ತಿದ್ದಾನೆ. ಯುದ್ಧದ ಕುತಂತ್ರ, ಒಳಸಂಚಿಗೆ ಜುಗುಪ್ಸಿತನಾಗಿ ನಿಜವಾದ ವೀರನನ್ನು ಕೊಂಡಾಡಿದ್ದಾನೆ. ಅದಕ್ಕೇ ದುರ್ಯೋಧನನ ಬಗ್ಗೆ ಅಪಾರ ಪ್ರೀತಿ. ಪಾಂಡವರ ಧರ್ಮನಿಷ್ಠೆಯನ್ನು ಪರೀಕ್ಷೆಗೊಡ್ಡುವ ಕವಿ ದುರ್ಯೋಧನನ ಮೂಲಕ ಹೀಗೆ ಹೇಳಿಸಿದ್ದಾನೆ :

*ಧರ್ಮಂ ! ಅಧರ್ಮಂ !*
*ಧರ್ಮಿಗಳಾರ್ ! ಅಧರ್ಮಿಗಳಾರ್ ?*
*ಆಹಾ, ಧರ್ಮಸಂಸ್ಥಾಪಕನಲ್ತೆ, ಆ ಕೃಷ್ಣನ್ !*
*ಅಸಂಸ್ಕೃತಂ, ಅನಾಗರಿಕನ್ !*
*ಇರ್ಕೆ, –*
*ನಾನಂತುಂ ಅರಗುಲಿ, ಇರ್ಕೆ*
*ಪಾಂಡವರೊ ?*
........................
*ಇವರೆಲ್ಲರುಂ ಧರ್ಮಿಗಳ್ ?*
*ನಾನೊರ್ವನ್ ಅಧರ್ಮಿ !* (ಪು. ೩೩)

ಎಂಬ ಪ್ರಶ್ನೆ ನಾಟಕಕಾರನಲ್ಲಿರುವ ಪರಂಪರೆಯ ಬಗೆಗಿನ ಜಾಗೃತ ಪ್ರಜ್ಞೆಯನ್ನು ಸೂಚಿಸುತ್ತದೆ. ಆ ಕಾರಣಕ್ಕಾಗಿಯೇ ಇಂತಹ ಪ್ರಶ್ನೆಗಳು ಸಾರ್ವಕಾಲಿಕವಾಗಿ ನಿಂತುಬಿಡುತ್ತವೆ. ಆದರೆ, ಕೊನೆಯಲ್ಲಿ ಶ್ಮಶಾನ ಕುರುಕ್ಷೇತ್ರ ನಾಟಕವು ಸರ್ವರಿಗೂ ಮುಕ್ತಿ ತೋರುವ ಮೂಲಕ ಆಧ್ಯಾತ್ಮಿಕ ಮತ್ತು ಅಲೌಕಿಕ ನೆಲೆಯನ್ನು ತಲುಪಿಬಿಡುತ್ತದೆ.

ಕಾನೀನ (೧೯೭೪) ನಾಟಕವು ಕರ್ಣನ ವೃತ್ತಾಂತವನ್ನು ಒಳಗೊಂಡಿದೆ. ರಚನೆಯ ದೃಷ್ಟಿಯಿಂದ ಇದು ಕುವೆಂಪು ಬರೆದ ಮೊದಲ ನಾಟಕ (ಮಳಲಿ, ಪು. ೬೫). ಕರ್ಣ, ಪರಶುರಾಮ ಮತ್ತು ಭೀಷ್ಮ – ಈ ಮೂರು ಪಾತ್ರಗಳಿಗೆ ತಗುಲಿಕೊಂಡಿದ್ದ ಕಳಂಕವನ್ನು ದೂರಮಾಡಿದ್ದನ್ನು ಬಿಟ್ಟರೆ ಇದರಲ್ಲಿ ವಿಶೇಷವಾದುದೇನೂ ಇಲ್ಲ ಎಂದು ಹೇಳಬಹುದು. ವ್ಯಾಸಭಾರತದಲ್ಲಿ ಪರಶುರಾಮನ ಬಳಿ ವಿದ್ಯೆ ಕಲಿಯುವ ಸಲುವಾಗಿ ಕರ್ಣನು ಬ್ರಾಹ್ಮಣ ವೇಷದಲ್ಲಿ ಹೋಗುತ್ತಾನೆ. ಆದರೆ ಕುವೆಂಪು ಅವರ ನಾಟಕದಲ್ಲಿ ಕರ್ಣ ವೇಷಮರೆಸಿಕೊಳ್ಳದೆ, ಬೆಸ್ತಕುಲದವನಾಗಿಯೇ ಹೋಗುತ್ತಾನೆ, ವಿದ್ಯಾಭ್ಯಾಸವನ್ನೂ ಪೂರೈಸುತ್ತಾನೆ. ಇಲ್ಲಿ ಕರ್ಣನ ಸಹಜ ಶೂರ ವ್ಯಕ್ತಿತ್ವಕ್ಕಿದ್ದ ಕಪ್ಪು ಚುಕ್ಕೆಯೊಂದನ್ನು ಆ ಮೂಲಕ ಕವಿ ಅಳಿಸಿಹಾಕುತ್ತಾರೆ. ಅಂತೆಯೇ, ಗುರು ಮಹಿಮೆ ಮತ್ತು ಗುರುಭಕ್ತಿಯ ಬಗೆಗೆ ಅಪಾರ ಗೌರವವಿರಿಸಿಕೊಂಡಿರುವ ಕುವೆಂಪು, ಪರಶುರಾಮನಿಗೂ ಅಂಟಿದ ಕಳಂಕವನ್ನು ನಿವಾರಿಸಿಬಿಡುತ್ತಾರೆ.

*ವಟುಗಳಿರಾ, ಯಾವಾತನ ಮೊಗದಲ್ಲಿ ತೇಜಸ್ಸು*
*ತೋರುವುದೊಪ...*
............
*ಎಲ್ಲಿ ಸಾಮರ್ಥ್ಯ ಮೈದೋರುವುದೋ ?*
*ಮೇಣೆಲ್ಲಿ*
*ವೀರರಸ ಉಕ್ಕುವುದೊ ಅವರೆಲ್ಲ ಕ್ಷತ್ರಿಯರು*
(ಕಾನೀನ, ಪು. ೨೧)

ಎಂಬ ಉದಾತ್ತ ಮಾತುಗಳು, ''...ಕುಲವು ಜನನದೊಳಿಲ್ಲ; ಗುಣದೊಳಿಹುದು'' (ಪು. ೨೦) ಎಂಬ ಬ್ರಹ್ಮಚಾರಿಯ ಮಾತುಗಳು ವರ್ಣಸಂಘರ್ಷದ ಸರಳ ಪರಿಹಾರವೆಂಬಂತೆ ಕಾಣುತ್ತವೆ. ಅಲ್ಲದೆ, ಗಾಂಗೇಯನು 'ಈ ವೀರಬಾಲಕನು ಸಾಮಾನ್ಯನೆಂದರಿಯಬೇಡ. ನೀನೊಂದು ವರ್ಷದಲ್ಲಿ ಕಲಿತುದನು ಇವನೊಂದು ತಿಂಗಳಲಿ ಅರಿತಿಹನು' (ಪು. ೨೮) ಎಂದು ಹೇಳುವ ಮಾತುಗಳಲ್ಲಿ ಆತನು ಸೂತಪುತ್ರನೆಂದು ಹೀಯಾಳಿಸದೆ, ಕುಲವ ನೋಡದೆ ಗುಣವನ್ನು ಮೆಚ್ಚಬೇಕೆಂಬ ತತ್ವಕ್ಕೆ ಬದ್ಧನಾಗುತ್ತಾನೆ. ಗುರು, ವಯೋವೃದ್ಧರು ವರ್ಣ ತಾರತಮ್ಯದಿಂದ ಹೊರಬಂದಾಗ ಕರ್ಣನ ಪರಾಕ್ರಮ ಮತ್ತಷ್ಟು ಎತ್ತರಕ್ಕೇರುತ್ತದೆ. ಇಲ್ಲಿನ ವರ್ಣ-ವರ್ಗ ಸಂಘರ್ಷಗಳು ಕುವೆಂಪು ಅವರ ಮಹೋನ್ನತ ಶೈಲಿಯೊಳಗೆ ಹುದುಗಿರುವುದನ್ನು ಕಾಣಬಹುದು.

ರಾಮಾಯಣದ ಕಥೆಯನ್ನು ಆಧರಿಸಿದ ನಾಟಕಗಳೆಂದರೆ : ಶೂದ್ರತಪಸ್ವಿ (೧೯೪೪) ಮತ್ತು ವಾಲ್ಮೀಕಿಯ ಭಾಗ್ಯ (೧೯೩೧), ಶೂದ್ರತಪಸ್ವಿ

(೧೯೪೪) ನಾಟಕವು ರಾಮಾಯಣದ ಉತ್ತರ ಕಾಂಡ ದಲ್ಲಿ ಪ್ರಕ್ಷಿಪ್ತ ಕತೆಯಾದ ಶಂಬೂಕವಧೆ ಪ್ರಸಂಗವನ್ನು ಆಧರಿಸಿದೆ. ವರ್ಣ ವ್ಯವಸ್ಥೆಯ ಬೇರುಗಳನ್ನು ತುಸು ಹೆಚ್ಚಾಗಿ ಅಲ್ಲಾಡಿಸಿದ ಕೃತಿ ಇದು. ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಶೂದ್ರನಾದವನು ಅಧಿಕಾರ, ವಿದ್ಯೆ, ತಪಸ್ಸನ್ನು ಕೈಗೊಳ್ಳುವುದು ಪಾಪ, ಲೋಕಕಂಟಕ ಎಂದು ಸಾರಿದ ಪುರೋಹಿತಶಾಹಿಗೆ ಸೆಡ್ಡು ಹೊಡೆದದ್ದು ಈಗ ಇತಿಹಾಸ. ಸೀತಾ ಪರಿತ್ಯಾಗದ ನಂತರ ವೃದ್ಧ ಬ್ರಾಹ್ಮಣನೊಬ್ಬ ಮೃತ ಬಾಲಕನನ್ನು ಹೊತ್ತು ತಂದು ತನ್ನ ಮಗನ ಸಾವಿಗೆ ರಾಜದೋಷ ಕಾರಣ ಎನ್ನುತ್ತಾನೆ. ಆಗ ರಾಜ ವಿಚಾರಣೆ ನಡೆಸಿದಾಗ ಶೂದ್ರನೊಬ್ಬ ತಪೋನಿರತನಾಗಿರುವುದೇ ಈ ಸಾವಿಗೆ ಕಾರಣ ಎಂಬುದು ತಿಳಿದುಬರುತ್ತದೆ.

*ಅಲ್ತಲ್ತು, ರಾಮಚಂದ್ರ*
*ಶೂದ್ರನ್ ತಪಂಗೆಯ್ವೊಂದು ಅಧರ್ಮಕ್ಕೆ*
*ವರ್ಣಾಶ್ರಮ ಧರ್ಮದುಲ್ಲಂಘನೆಯ ಪಾಪಕ್ಕೆ*
*ನಿನ್ನ ಬಾಲಪ್ರಜೆಯೊರ್ವನ್ ಬಲಿಯಾದನ್*
(ಶೂ.ತ. ಪು. ೨೫)

ಎನ್ನುವ ಬ್ರಾಹ್ಮಣ ಪ್ರಭುತ್ವವನ್ನೇ ಪ್ರಶ್ನಿಸುತ್ತಾನೆ. ಅಲ್ಲದೆ, 'ತಪಕ್ಕನಧಿಕಾರಿ ಶೂದ್ರನ್' (ಪು. ೩೩) ಎನ್ನುತ್ತಾನೆ. ಆದರೆ ಕುವೆಂಪು ಅವರ ನಾಟಕದ ವಿಶೇಷತೆ ಯಿರುವುದು, ಶ್ರೀರಾಮ 'ಸನ್ಮತಿಯ ಸತ್ಕೃತಿಗೆ ಶಾಸ್ತ್ರದ ನೆರಂ ಬೇಕೆ?' (ಪು. ೩೭) ಎಂದು ತಿಳಿಹೇಳಿ ಬ್ರಾಹ್ಮಣನ ಮನಃಪರಿವರ್ತನೆಯ ಸನ್ನಿವೇಶದಲ್ಲಿ,

*ಬೋಧಮಾಯ್ತೆನಗೀಗಳ್, ಮಹಾಪ್ರಾಜ್ಞ*
*ಬುದ್ಧಿಗಲಿಸಿದಯ್ ಸಂಪ್ರದಾಯಬದ್ಧಂಗೆ*
*ಶಾಸ್ತ್ರಸಂಮೂಢಂಗೆ ಜಾತಿಗರ್ವಾಂಧಂಗೆ*
............................
*ಆರಾದರೇನ್? ಆರಾಧ್ಯರ್ ತಪೋಧನರ್!*
*ನಮಸ್ಕಾರಮೆ ಪುಣ್ಯಂ; ತಿರಸ್ಕಾರಮೆ ಪಾಪಂ!*
(ಶೂ.ತ. ಪು. ೩೭, ೩೮)

ಎನ್ನುತ್ತಾ ಶೂದ್ರತಪಸ್ವಿಗೆ ನಮಸ್ಕರಿಸುತ್ತಾನೆ. ಕೊನೆಯಲ್ಲಿ ಬ್ರಾಹ್ಮಣನ ಅಹಂ ನಿವಾರಣೆಯಾಗಿ ರಾಮನ ತೇಜಸ್ಸು ಬೆಳಗುತ್ತದೆ. ಬ್ರಾಹ್ಮಣ ಪುತ್ರ ಬದುಕುತ್ತಾನೆ. ಶಂಬೂಕನ ತಪೋಮಹಿಮೆ ಇಡೀ ವನವನ್ನೆಲ್ಲಾ ಆವರಿಸಿಕೊಳ್ಳುತ್ತದೆ. 'ಶೂದ್ರನಪ್ಪೊಡಂ ತಪಂ ಶಕ್ತಿದಾಯಕಂ' (ಪು. ೩೪) ಎಂಬ ರಾಮನ ಮಾತುಗಳು ಕವಿಯ ದೃಷ್ಟಿಯಲ್ಲಿ ನಿತ್ಯಸತ್ಯ.

ವರ್ಣ ವ್ಯವಸ್ಥೆ ವಿರುದ್ಧ ದಿಟ್ಟವಾದ ದನಿಯೆತ್ತುವ ಇಂತಹ ಕೃತಿಗಳೂ ಕಲಾತ್ಮಕ ಚೌಕಟ್ಟಿನೊಳಗೆ ಯಶಕಾಣುವಷ್ಟಕ್ಕೆ ತೃಪ್ತವಾಗಿಬಿಡುತ್ತವೆ. ಒಂದೆಡೆ, ಶೂದ್ರತಪಸ್ವಿಯ ಮಹೋನ್ನತಿಯನ್ನು ಒಪ್ಪಿಕೊಂಡು ಮತ್ತೊಂದೆಡೆ, ಬ್ರಾಹ್ಮಣನ ಆತ್ಮಪ್ರಜ್ಞೆಯನ್ನು ಬೆಳಗಿಸಿ ತಪಸ್ವಿಗೆ ನಮಸ್ಕರಿಸುವಂತೆ ಕವಿ ಮಾಡುತ್ತಾರೆ. ಅಂತಿಮವಾಗಿ ಸನಾತನ ಮೌಲ್ಯಗಳನ್ನು ತಮ್ಮ ವೈಜ್ಞಾನಿಕ ಚಿಂತನಾಕ್ರಮದಲ್ಲಿ ಕಲಾತ್ಮಕವಾಗಿ ಚಿತ್ರಿಸಿ ಸಮಕಾಲೀನಗೊಳಿಸಲು ಪ್ರಯತ್ನಿಸುತ್ತಾರೆ.

ವಾಲ್ಮೀಕಿಯ ಭಾಗ್ಯ (೧೯೩೧) ನಾಟಕವು ರಾಮಾಯಣ ಕತೆಯನ್ನಾಧರಿಸಿದೆ. ಶ್ರೀರಾಮನ ಅಪ್ಪಣೆಯಂತೆ ಲಕ್ಷ್ಮಣನು ಸೀತೆಯನ್ನು ಅರಣ್ಯದಲ್ಲಿ ಬಿಟ್ಟುಹೋಗುವ ಹೃದಯವಿದ್ರಾವಕ ಸನ್ನಿವೇಶ ನಾಟಕದ ವಸ್ತು. ಈ ನಾಟಕದ ವಿಶೇಷತೆಯಿರುವುದು ಲಕ್ಷ್ಮಣ-ಸೀತೆಯರ ಒಳತೋಟಿಯಲ್ಲಿ. ಇಡೀ ಸನ್ನಿವೇಶವನ್ನು ಅತ್ಯಂತ ಭಾವುಕ ನೆಲೆಯಲ್ಲೇ ಚಿತ್ರಿಸಿದ್ದಾರೆ. ವ್ಯಸನಚಿತ್ತ ಲಕ್ಷ್ಮಣ, ಅಶುಭ ಶಕುನ ಕಂಡು ಬೆದರುವ ಸೀತೆ, ಲಕ್ಷ್ಮಣನ ರೋದನದಂತಹ ಸನ್ನಿವೇಶಗಳು ನಾಟಕೀಯ ಗುಣದಿಂದ ಕೂಡಿವೆ. ಲಕ್ಷ್ಮಣನು ಸೀತೆಯನ್ನು ಅರಣ್ಯದಲ್ಲಿ ಬಿಟ್ಟು ಮರಳಿದ ನಂತರ ಅನಾಥೆಯಾದ ಸೀತೆಯನ್ನು ಸಂತೈಸುವ ವಾಲ್ಮೀಕಿ,

*ನೀನೆನ್ನ ಮಹಾಕಾವ್ಯದ ಸವಿಗಣ್ಣಲ್ತೆ!*
*ಕಥಾ ನಾಯಕಿಯಲ್ತೆ!*
*ವಾಲ್ಮೀಕಿಯ ಭಾಗ್ಯಮಲ್ತೆ!* (ವಾ.ಭಾ. ಪು. ೩೨)

ಎಂದು ಆಶ್ರಯ ನೀಡುತ್ತಾನೆ.

ಯಮನ ಸೋಲು (೧೯೨೮), ಚಂದ್ರಹಾಸ (೧೯೬೩) ನಾಟಕಗಳು ಪೌರಾಣಿಕ ಕತೆಯನ್ನು ಆಧರಿಸಿದ ನಾಟಕಗಳು. ಯಮನ ಸೋಲು ನಾಟಕ ಎಂಟು ದೃಶ್ಯಗಳಿಂದ ಕೂಡಿದ್ದು, ಸಾವಿತ್ರಿಯ ಅಮರ ಪ್ರೇಮವು ಯಮನನ್ನು ಸೋಲಿಸಿ ಸತ್ಯವಾನನನ್ನು ಮರಳಿಪಡೆಯುವುದು ನಾಟಕದ ವಸ್ತು. ಚಂದ್ರಹಾಸ ನಾಟಕದಲ್ಲಿ ದುಷ್ಟಬುದ್ಧಿಯ ಕುತಂತ್ರದ ನಡುವೆಯೂ ವಿಷಯೆ ಚಂದ್ರಹಾಸರ ವಿವಾಹ ನಡೆಯುವುದೇ ನಾಟಕದ ವಸ್ತು. ಸಾವಿತ್ರಿಯ ಅಮರ ಪ್ರೇಮ, ಯಮನೊಂದಿಗೆ ಸಂವಾದ, ಸಾವಿತ್ರಿಯ ದೃಢವಿಶ್ವಾಸ ಮತ್ತು ಚಂದ್ರಹಾಸ ನಾಟಕದಲ್ಲಿನ ದುಷ್ಟಬುದ್ಧಿಯ ಪಾತ್ರಚಿತ್ರಣ, ಉತ್ತಮ ಸನ್ನಿವೇಶ ನಿರ್ಮಾಣ – ಈ ಸಂಗತಿಗಳಿಂದ ಎರಡೂ ನಾಟಕಗಳು ಗಮನಸೆಳೆಯುತ್ತವೆ.

**ಸಾಮಾಜಿಕ ನಾಟಕಗಳು**: ಸಾಮಾಜಿಕ ವಸ್ತುವನ್ನಾಧರಿಸಿ ಬರೆದ ನಾಟಕಗಳಲ್ಲೂ ಕುವೆಂಪು ಪುರಾಣ, ಅಧ್ಯಾತ್ಮ ಮುಂತಾದ ವಿಚಾರಗಳಿಂದ ಸಂಪೂರ್ಣವಾಗಿ ಹೊರಬರಲಾಗಿಲ್ಲ. ಏಕೆಂದರೆ ಅವರು ಬರೆದ ಎಲ್ಲಾ ಪೌರಾಣಿಕ ನಾಟಕಗಳಿಗೆ ಒಂದು ಸಾಮಾಜಿಕ ಮುಖವಿದ್ದೇ ಇದೆ. ಅಂತೆಯೇ ಸಾಮಾಜಿಕ ವಸ್ತುವನ್ನಾಧರಿಸಿ ಬರೆದ ನಾಟಕಗಳು ಕಲಾಸಿದ್ಧಿ ಪಡೆಯುವುದು ಅಧ್ಯಾತ್ಮ ಇಲ್ಲವೇ ಅಲೌಕಿಕ ಸ್ಪರ್ಶದಿಂದ ಎಂಬುದು ಗಮನಾರ್ಹ. ಕುವೆಂಪು ಅವರ ಸಾಮಾಜಿಕ ನಾಟಕಗಳ ರಚನೆಯ ಹಿಂದಿರುವ ಒತ್ತಾಸೆಗಳು ಇಂತಿವೆ:

೧. ವರ್ಣ ವ್ಯವಸ್ಥೆಯ ರೂಕ್ಷತೆಯನ್ನು ಸಮಷ್ಟಿ ನೆಲೆಯಲ್ಲಿ ಕಾಣುವ ತುಡಿತ
೨. ಉತ್ಕಟ ರಾಷ್ಟ್ರಾಭಿಮಾನ
೩. ಮೌಢ್ಯ, ಕಂದಾಚಾರ, ಯಜ್ಞಾದಿಗಳಿಲ್ಲದ ಭಕ್ತಿ ಮತ್ತು ದೈವ ಕಲ್ಪನೆ
೪. ವೈಜ್ಞಾನಿಕ ಮತ್ತು ವೈಚಾರಿಕ ಮನೋಭಾವ.

ಜಲಗಾರ (೧೯೨೮) ನಾಟಕ ವರ್ಣವ್ಯವಸ್ಥೆಯನ್ನು ವಿರೋಧಿಸುತ್ತದೆ. ಜಲಗಾರ ಕುವೆಂಪು ಸೃಜಿಸಿದ ಕರ್ಮಯೋಗಿ. ಈತ ಕಾಯಕ ನಿಷ್ಠೆಯಿಂದಲೇ ಶಿವನನ್ನು ಕಾಣುವ ವಿಶಿಷ್ಟ ಪಾತ್ರ. ರೈತ, ಕಬ್ಬಿಗ, ಭಟ್ಟ, ಪಾರ್ವರು ಇವರೆಲ್ಲರೂ ಕರ್ಮಾರಾಧನೆಗೆ ಹೊರತಾಗಿ ದೇವರನ್ನು ಕಾಣಲು ಬಯಸಿದರೆ ಜಲಗಾರ,

*ಕರ್ಮವಾರಾಧನೆ, ಸೇವೆಯೇ ಪೂಜೆ*
*ನನ್ನ ಭಾಗಕೆ ಪೊರಕೆ ಆರತಿ, ಗುಡಿಸುವುದೆ*
*ನನ್ನ ದೇವರ ಪೂಜೆ!*
......................
*ಶಿವಗುಡಿಯ ಶಿವನು ಜೋಯಿಸರ ಶಿವನಂತೆ*
*ನನ್ನ ಶಿವನೀ ಮಣ್ಣಿನಲ್ಲಿಹನು, ನನ್ನ ಶಿವ*
*ಕೊಳೆತ ಕಸದೊಳಗಿಹನು, ಕಪ್ಪುರದೊಳಿಲ್ಲ;*
*ಮಂಗಳಾರತಿಯೊಳಿಲ್ಲ; ಹೂವುಗಳಲಿಲ್ಲ*
(... ಪು. ೧೦)

ರೈತನೊಡನೆ ಮಾತನಾಡುವ ಜಲಗಾರ ನೇಗಿಲ ಯೋಗಿಗೆ ದೈವಸಾಕ್ಷಾತ್ಕಾರದ ರೀತಿಯನ್ನು ಹೇಳಿದ್ದು ಹೀಗೆ:

*ಶಿವನ ಕಾಣಲು ನೀನು*
*ಗುಡಿಗೆ ಹೋಗುವೆಯೇನು? ನಿನ್ನ ನೇಗಿಲ*
*ಗೆರೆಯ*
*ದಿವ್ಯ ದೇವಾಲಯದಿ ಶಿವನ ಕಾಣೆಯ ನೀನು*
......................

*ನಮ್ಮ ಕರ್ಮವೆ ನಿತ್ಯಯೋಗ* (ಜಲಗಾರ, ಪು. ೧೧) ಹಾಗೂ, 'ಪುಡಿಯೊಳಗವನನರಸುವೆನು' (ಪು. ೧೫) ಎನ್ನುತ್ತಾನೆ.

ಗುಡಿಯಿಂದ ಬಂದ ರೈತನು ದೇವರನ್ನು ತರಲಾಗದೆ ಜಾತ್ರೆ, ಜನ, ಗಲಭೆ, ರಮ್ಯನೋಟ, ಶಿವಗುಡಿ, ಚಂದದ ವಿಗ್ರಹ, ಜೋಯಿಸರ ಮಡಿ ಪಂಚೆ, ಜಾಗಟೆ, ಹೂ ಹಣ್ಣು, ಕರ್ಪೂರ, ಹರಕೆ ಇತ್ಯಾದಿಯಾಗಿ ಜಾತ್ರೆಯ ವೈಭವವನ್ನು ವಿವರಿಸುತ್ತಾನೆಯೇ ಹೊರತು ದೇವರ ಇರುವಿಕೆಯನ್ನು ತೋರಿಸುವಲ್ಲಿ ವಿಫಲನಾಗುತ್ತಾನೆ. ಕುವೆಂಪು 'ಶಿವಗುಡಿಯ ದೆಸೆಯಿಂದ ಹಿಟ್ಟು ಹೊಟ್ಟೆಗೆ, ದುಡ್ಡು ಬಟ್ಟೆಗೆ' ಎಂಬ ಸತ್ಯವನ್ನು ಪಾರ್ವರ ಸಂಭಾಷಣೆಯ ವ್ಯಂಗದ ಮೂಲಕ ಅನಾವರಣಗೊಳಿಸುತ್ತಾರೆ. ಕೊನೆಯಲ್ಲಿ ಶಿವನೇ ಬಂದು –

*ನಿನ್ನದೇ ಶಿವಭಕ್ತಿ! ನೀನೇ ಶಿವಭಕ್ತ*
*ನೀನೇ ನಾನಾಗಿಹೆನು! ನಾನೇ ನೀನಾಗಿರುವೆ!*
*ಶಿವ ನೀನು; ಶಿವ ನೀನು!* (ಜ. ಪು. ೩೪)

ಎಂದು ಜಲಗಾರನನ್ನು ಒಪ್ಪಿಕೊಳ್ಳುತ್ತಾನೆ. ಸಾಮಾಜಿಕ ಕಥನ ಸಾಮಗ್ರಿಯನ್ನು ಆಯ್ದುಕೊಂಡ ಕುವೆಂಪು ಪೌರಾಣಿಕ ಆವರಣದೊಳಗೆ ಉತ್ತರ ಕಂಡುಕೊಳ್ಳುವ ತೀವ್ರತೆ ಎದ್ದುಕಾಣುತ್ತದೆ. 'ಜಲಗಾರನನ್ನೇ ಶಿವ' ಎಂದು ಹೇಳುವ ಸಮಷ್ಟಿ ಪ್ರಜ್ಞೆಯ ಕವಿಗೆ ಜನಪದರ 'ಶಿವನು ಭಿಕ್ಷೆಗೆ ಬಂದ ನೀಡು ಬಾರೆ ತಂಗಿ' ಎಂಬ ವಿಶಾಲ ಮನೋಧರ್ಮವನ್ನು ನೆನಪಿಸುತ್ತದೆ. ಅಷ್ಟೇ ಅಲ್ಲ, ಅದು ಅನೇಕ ವೈರುಧ್ಯಗಳಿಂದ ಕೂಡಿರುವ ಕುವೆಂಪು ಅವರ ಚಿಂತನಾಕ್ರಮದ ತುತ್ತತುದಿಯಲ್ಲಿರುವ ಸದಾಶಯ ಕೂಡ ಹೌದು. ಜಲಗಾರ ನಾಟಕದಲ್ಲಿ ಕುವೆಂಪು ಅವರ ವರ್ಣ-ವರ್ಗ ಸಂಘರ್ಷ, ಮೌಢ್ಯ, ಕಾಯಕತತ್ವ, ಧರ್ಮನಿರಪೇಕ್ಷತೆಯಂತಹ ವಿಚಾರಧಾರೆಗಳು ಮೊಳಕೆಯೊಡೆಯುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಬಲಿದಾನ (೧೯೪೮) ಭರತಸುತ ಮತ್ತು ಭಾರತಾಂಬೆಯ ನಡುವೆ ನಡೆಯುವ ಸಂವಾದ ನಾಟಕದ ವಸ್ತು – ಸ್ವಾತಂತ್ರ್ಯ ಹೋರಾಟ, ಗಾಂಧೀಜಿಯ ಬಲಿದಾನ ಮತ್ತು ಸ್ವಾತಂತ್ರ್ಯಾನಂತರದ

ಜವಾಬ್ದಾರಿ – ಈ ಮೂರು ಸಂಗತಿಗಳನ್ನು ಒಳಗೊಂಡಿದೆ. ಈ ನಾಟಕದಲ್ಲಿ ಭಾರತಾಂಬೆಯನ್ನು ಸರ್ವಬಂಧನಗಳಿಂದ ಮುಕ್ತಗೊಳಿಸಿ, ಸ್ವತಂತ್ರಗೊಳಿಸುವ ಆಶಯವಿದೆ. ಬೇಂದ್ರೆಯವರ 'ಕಣಸಿನೊಳಗೊಂದು ಕಣಸು' ಪದ್ಯವನ್ನು ನೆನಪಿಗೆ ತರುವ ಈ ನಾಟಕವು ಸೊಗಸಾದ ದೃಶ್ಯ ರೂಪಕ.

*ಗಾಂಧಿಯೆಂಬಾ ಪೆಸರೆ ನಾಂದಿಯಾಗಲಿ ನಮ್ಮ*
*ಸ್ವಾತಂತ್ರ್ಯ ಸಂಭ್ರಮಕೆ, ಹಾಡು, ಪಕ್ಷಿ* (ಬಲಿದಾನ ಪು. ೨೯)

ಎಂಬ ಮಾತುಗಳಲ್ಲಿ ಗಾಂಧಿವಿಚಾರಧಾರೆಗಳೊಂದಿಗೆ ಅವರನ್ನು ಒಪ್ಪಿಕೊಂಡಿರುವುದು ಸ್ಪಷ್ಟವಾಗಿದೆ. ನವೋದಯದ ಎಲ್ಲಾ ಲೇಖಕರಂತೆ ಕುವೆಂಪು ಅವರಿಗೂ ಕೂಡ ಗಾಂಧಿ ಯಾವುದೇ ದ್ವಂದ್ವಗಳಿಲ್ಲದೆ ಒಪ್ಪಿತವಾಗಿಬಿಡುತ್ತಾರೆ. ಏಕೆಂದರೆ, ಸ್ವಾತಂತ್ರ್ಯ ಚಳುವಳಿಯ ತೀವ್ರತೆಯಲ್ಲಿ ಬರೆಯುತ್ತಿದ್ದ ಅವರಿಗೆ ಇದು ಸಹಜವೂ ಕೂಡ.

ಕುವೆಂಪು ರಚಿಸಿದ ಮಕ್ಕಳ ನಾಟಕಗಳೆಂದರೆ, ಮೋಡಣ್ಣನ ತಮ್ಮ (೧೯೨೬), ನನ್ನ ಗೋಪಾಲ (೧೯೩೦). ಮುಗ್ಧ ಮಗುವೊಂದು ಮೋಡವನ್ನು ಅಣ್ಣ ಎಂದು ಸಂಬೋಧಿಸಿ ನಿನ್ನೆಡೆಗೆ ಕರೆದುಕೋ ಎಂದು ಮೊರೆಯಿಡುವುದು ನಾಟಕದ ವಸ್ತು. ಪುಟ್ಟ ಬಾಲಕನ ಮತ್ತು ಮೋಡಣ್ಣನ ಕಲ್ಪನೆಯೇ ಸೊಗಸಾದುದು. ಸಂತಸದಿ ತೇಲುವ, ಬಳಲದೆ ಆಡುವ, ಮಿಂಚಿನ ಬಳ್ಳಿ, ಮಿಂಚಿನ ಬಳೆ, ಗುಡುಗಿನ ಸಂಗಡ ಗುಡುಗಾಟ, ದೂರದ ಗಿರಿ ಏರುವ, ನೋಡುವ ಪರಿ – ಮುಂತಾದವು ಕುವೆಂಪು ತಮ್ಮ ಬಾಲ್ಯದಲ್ಲಿ ಕಂಡ ಸಂಗತಿಗಳನ್ನೆಲ್ಲ ಕಲಾಕೃತಿಗಳ ಮೂಲಕ ಹಿಡಿದಿಡುವ ಪ್ರಯತ್ನವೇ ನಾಟಕದ ಜೀವಾಳ.

ನನ್ನ ಗೋಪಾಲ (೧೯೩೦) ನಾಟಕವು ನಿಷ್ಕಲ್ಮಷ ಹೃದಯದಲ್ಲಿನ ದೇವರ ಕಲ್ಪನೆ ಕುರಿತದ್ದಾಗಿದೆ. ತಾಯಿ ವಾತ್ಸಲ್ಯ, ಮಗುವಿನ ಮುಗ್ಧತೆ, ಗುರುಭಕ್ತಿ, ಜೀವನ ಪ್ರೀತಿ, ಪುಟ್ಟಮಕ್ಕಳ ಕನಸು, ಬಡತನ, ವೈಧವ್ಯವನ್ನು ಮರೆತು ಧನ್ಯಳಾದ ಹೆತ್ತತಾಯಿ, ತಾಯಿ ಪ್ರೇಮ, – ಇಡೀ ಜಗತ್ತಿನ ಆನಂದಕ್ಕೆ ಕಾರಣವಾಗುವ ಬಗೆ, ಎಲ್ಲವೂ ನಾಟಕದಲ್ಲಿ ಚಿತ್ರಿತವಾಗಿವೆ.

**ಐತಿಹಾಸಿಕ ನಾಟಕಗಳು :** ಕುವೆಂಪು ಅವರು ಶುದ್ಧ ಚಾರಿತ್ರಿಕ ಎನ್ನಬಹುದಾದ ನಾಟಕಗಳನ್ನು ರಚಿಸಿಲ್ಲವೆಂದೇ ಹೇಳಬಹುದು. ಪಾಶ್ಚಾತ್ಯ ವಿಚಾರಧಾರೆ ಮತ್ತು ಪ್ರಜಾಪ್ರಭುತ್ವದ ಬಗೆಗಿನ ಒಲವು ಮತ್ತು ನಂಬುಗೆಯನ್ನು ಇರಿಸಿಕೊಂಡಿದ್ದ ಕುವೆಂಪು ಪ್ರಭುತ್ವದ ವೈಭವೀಕರಣವನ್ನು ನಿರಾಕರಿಸಿದ್ದರ ಫಲವಾಗಿ ಸಂಸ ಮೊದಲಾದ ನಾಟಕಕಾರರಂತೆ ಐತಿಹಾಸಿಕ ನಾಟಕಗಳೆಡೆ ಹೆಚ್ಚಿನ ಒಲವು ತೋರಿಸಲಿಲ್ಲ. ಷೇಕ್ಸ್‌ಪಿಯರ್‌ನ ಟೆಂಪೆಸ್ಟ್, ಹ್ಯಾಮ್ಲೆಟ್‌ನಂತಹ ನಾಟಕಗಳನ್ನು ಕನ್ನಡೀಕರಿಸುವಾಗ ಸ್ಥಳೀಯ ಕತೆಗಳ ಹೊದಿಕೆ ನೀಡುವಷ್ಟರ ಮಟ್ಟಿಗೆ ಕುವೆಂಪು ಅವರಲ್ಲಿ ಕನ್ನಡಪ್ರಜ್ಞೆ ಜಾಗೃತವಾಗಿತ್ತು. ಆದರೆ ಕುವೆಂಪು ಅವರಿಗೆ ಆಧ್ಯಾತ್ಮಿಕತೆಯತ್ತ ಒಂದೇ ಒಲವಿತ್ತು ಎಂಬ ಕಾರಣದಿಂದ ಅವರಿಗೆ ಐತಿಹಾಸಿಕ ನಾಟಕಗಳು ಹೆಚ್ಚು ಪ್ರಿಯವಾಗಲಿಲ್ಲ ಎಂಬುದು ಅಷ್ಟೊಂದು ಸಮಂಜಸವಾಗಲಾರದು. ಈ ನಿಟ್ಟಿನಲ್ಲಿ ಮಹಾರಾತ್ರಿ, ರಕ್ತಾಕ್ಷಿ ಮತ್ತು ಬಿರುಗಾಳಿ ನಾಟಕಗಳನ್ನು ನೋಡಬಹುದು.

ಮಹಾರಾತ್ರಿ (೧೯೩೧): ಸಿದ್ಧಾರ್ಥನ ಮನಃಪರಿವರ್ತನೆಯಾಗುವ ಆ ರಾತ್ರಿಯೇ ಮಹಾರಾತ್ರಿ. ಮುದುಕ, ರೋಗಿ ಮತ್ತು ಶವವನ್ನು ಕಂಡ ಆ ಪುಣ್ಯದಿನವೇ ಆತನಿಗೆ ಬುದ್ಧನಾಗಬೇಕೆಂಬ ಹಂಬಲವುಂಟಾಗುತ್ತದೆ. ಆ ರಾತ್ರಿ ಅರಮನೆಯ ಉದ್ಯಾನವನದಲ್ಲಿ ಸುತ್ತಾಡುತ್ತಿರುವ ಸಿದ್ಧಾರ್ಥನಿಗೆ ಎಂದಿಲ್ಲದ ತಳಮಳ. ಇನ್ನಿಲ್ಲಿ ಇರಲಾಗದೆಂಬ ದೃಢ ನಿರ್ಧಾರ, ''ಎನಗಿನ್ನು ಗತಿಯಿಲ್ಲ, ನಾಳೆ ನಾಳೆ ಎಂದು ವರ್ಷಗಳ ಕಳೆದಾಯ್ತು! ನಾಳೆ ಎಂದಿಗೂ ನಾಳೆ! ಇಂದಿದೆ!'' (ಪು. ೯) ಎಂದು ಯೋಚಿಸುತ್ತಿರುವಾಗಲೇ ಪುತ್ರ ಜನನದ ಸುದ್ದಿ ತಿಳಿಯುತ್ತದೆ. ಅಂತರ್ಮುಖಿಯಾದ ಸಿದ್ಧಾರ್ಥನಿಗೆ ''ಮತ್ತೊಂದು ಪಾಶ; ಕಬ್ಬಿಣದ ಸರಪಣಿಯ ಬಂಧನ!'' (ಪು. ೧೦). ಆದರೂ ಮುಕ್ತಿಶ್ರೀಯನ್ನು ಹುಡುಕಿ ಹೊರಟ ಸಿದ್ಧಾರ್ಥ ತನ್ನ ಸುಖಕ್ಕಿಂತ ಲೋಕದ ಸುಖದ ಬಗ್ಗೆ ಚಿಂತಿಸಿದ ದಾರ್ಶನಿಕ. ಸಿದ್ಧಾರ್ಥನು ತನ್ನ ಗುರಿಯನ್ನು ನಿಶ್ಚಿತಗೊಳಿಸಿದ ಆ ರಾತ್ರಿಯೇ ಮಹಾರಾತ್ರಿ.

ಬಿದನೂರು ಸಂಸ್ಥಾನದ ಚನ್ನಬಸವಯ್ಯನ ದುರಂತ ಕತೆ ರಕ್ತಾಕ್ಷಿ (೧೯೩೨) ನಾಟಕದ ವಸ್ತು. ದತ್ತುಪುತ್ರನಾದ ಈತನಿಗೆ ಮಲತಾಯಿ ವೀರಮ್ಮಾಜಿ ಮತ್ತು ಸೇನಾಧಿಕಾರಿ ನಿಂಬಯ್ಯನ ನಡುವಿನ ಸಂಬಂಧ ತಿಳಿದುಬರುತ್ತದೆ. ಇದನ್ನು ಪ್ರಶ್ನಿಸಿದ್ದಕ್ಕೆ ವೀರಮ್ಮಾಜಿ ಅವನನ್ನೇ ಕೊಲ್ಲಿಸಿ, ಮತ್ತೊಬ್ಬನನ್ನು ದತ್ತು ತೆಗೆದುಕೊಂಡು ರಾಜ್ಯಭಾರ ನಡೆಸುತ್ತಾಳೆ. ಬಿದನೂರು ಸಂಸ್ಥಾನವನ್ನು ಮುತ್ತಿಗೆ ಹಾಕಲು ಬಂದ ಹೈದರನಿಗೆ ಕಪ್ಪಕಾಣಿಕೆಗಳನ್ನು ನೀಡುವುದಾಗಿ ಹೇಳಿ ಕಳುಹಿಸಿದರೂ ಅದಕ್ಕೆ ಆತ ಒಪ್ಪುವುದಿಲ್ಲ. ಮಂತ್ರಿ ಲಿಂಗಣ್ಣನು ಗುಪ್ತಮಾರ್ಗದಿಂದ ಬಿದನೂರಿನ ಕೋಟೆ ಪ್ರವೇಶಿಸಲು ನೆರವಾಗುತ್ತಾನೆ. ಬಿದನೂರು ಹೈದರನ ವಶವಾಗುತ್ತದೆ. ಕಪ್ಪ ಕಾಣಿಕೆಗಳನ್ನು ನೀಡಿ ಶರಣಾಗಲು ಮುಂದಾದ ವೀರಮ್ಮಾಜಿಯ ಕೋರಿಕೆಯನ್ನು ತಿರಸ್ಕರಿಸಿದ ಹೈದರ್ ಆಕೆಯನ್ನು ಸೆರೆಹಿಡಿಯುತ್ತಾನೆ. ಕೆಳದಿ ಸಂಸ್ಥಾನ ಮೈಸೂರು ಸಾಮ್ರಾಜ್ಯದೊಂದಿಗೆ ವಿಲೀನವಾಗುತ್ತದೆ. ಇದಿಷ್ಟು ಮೂಲಕತೆಯನ್ನು ಆಧರಿಸಿದಂತೆ ಪಾತ್ರ ಸನ್ನಿವೇಶಗಳಲ್ಲಿ ಷೇಕ್ಸ್‌ಪಿಯರ್‌ನ ಹ್ಯಾಮ್ಲೆಟ್ ನಾಟಕದೊಟ್ಟಿಗೆ ಕೆಲವು ಸಾಮ್ಯಗಳನ್ನು ಗುರುತಿಸಬಹುದು. ಉದಾಹರಣೆಗೆ, ಬಸವಯ್ಯ – ಹ್ಯಾಮ್ಲೆಟ್, ಹೊನ್ನಯ್ಯ – ಹೊರೇಷಿಯೊ, ಲಿಂಗಣ್ಣ-ಪಲೋನಿಯಸ್, ರುದ್ರಾಂಬೆ-ಒಫೀಲಿಯಾ ಪಾತ್ರಗಳಲ್ಲಿ ಸಾಮ್ಯತೆ ಕಂಡುಬರುವುದೇ ಹೊರತು ಒಟ್ಟಾರೆ ಪಾತ್ರಗಳ ಬೆಳವಣಿಗೆಯನ್ನು ಗಮನಿಸಿದರೆ ರಕ್ತಾಕ್ಷಿ ನಾಟಕವು ವಿಭಿನ್ನ ನೆಲೆಯನ್ನು ತಲುಪುತ್ತದೆ.

ಬಿರುಗಾಳಿ (೧೯೩೦) ಷೇಕ್ಸ್‌ಪಿಯರ್‌ನ 'ದಿ ಟೆಂಪೆಸ್ಟ್' ನಾಟಕದ ರೂಪಾಂತರ. ನೇಪಲ್ಸ್ ರಾಜನ ಕತೆಯನ್ನು ಕನ್ನಡದ ರಾಜಮನೆತನದ ಕತೆಯನ್ನಾಗಿ ಮಾರ್ಪಡಿಸಿದ್ದರೂ, ಉಳಿದಂತೆ ಹೆಚ್ಚು ಕಡಿಮೆ ಅದೊಂದು ರೂಪಾಂತರ ಎನಿಸಿದೆ. ಪ್ರೀತಿ, ಪ್ರೇಮ, ಒಳಸಂಚು ಮತ್ತು ಮಾನವೀಯ ಅಂಶಗಳ ಚಿತ್ರಣವನ್ನು ಈ ನಾಟಕದಲ್ಲಿ ಕಾಣಬಹುದಾಗಿದೆ. ಕೊನೆಯ ಟಿಪ್ಪಣಿಕೆಯಲ್ಲಿ ನಾಟಕ ರಚನೆಯ ಉದ್ದೇಶವನ್ನು ಕುರಿತು ಹೀಗೆ ಬರೆಯುತ್ತಾರೆ : ''ವೈವಿಧ್ಯಮಯ ಜೀವನವನ್ನು ಬಾಳಿ, ಬದುಕಿನ ಸಿಹಿ ಕಹಿಗಳನ್ನುಂಡು, ಬಾಳಿನ ಗುಟ್ಟನ್ನೂ ಬೆಲೆಯನ್ನೂ ಅರಿತ ಪರಿಪಕ್ವಾನುಭವದ ಸಮಗ್ರದೃಷ್ಟಿಯ ಪರಿಣತ ವಯಸ್ಸಿನ ನಾಟಕಕಾರನ ಪರಿಣತಿ ಕೃತಿ ಅದು ಎಂಬುದು ನಿರ್ವಿವಾದ ಸಂಗತಿ. ವೈರ ವೈರಕ್ಕೆ ಮದ್ದಲ್ಲ; ಸೇಡು ಸೇಡನ್ನೇ ಹೆರುತ್ತದೆ ; ಪ್ರೇಮ, ಔದಾರ್ಯ, ಕ್ಷಮೆ, ಸಹನೆ ಮಾನವನನ್ನು ಪುನೀತಗೊಳಿಸುವ ಭೂಮಿಗೆ ನಾಕವನ್ನೆಳೆದು ತರುವ ದೈವೀಗುಣಗಳು ; ಇವೆಲ್ಲಾ ಪ್ರಾರ್ಥನೆ, ಪೂಜೆ, ಧ್ಯಾನ, ತಪಸ್ಸುಗಳಿಂದ ಮಾತ್ರ ಒದಗುವಂಥವು – ಎಂಬಿವೇ ವಿಶ್ವತತ್ವಗಳು ಈ ನಾಟಕದಲ್ಲಿ ಪ್ರತಿಮಿತವಾಗಿವೆ'' (ಪು. ೯೭). ಈ ಮಾತುಗಳಲ್ಲಿ ಕುವೆಂಪು ಸಾಹಿತ್ಯಕ ನಿಲುವು ಮತ್ತು ನಾಟಕ ರಚನೆಯ ಹಿಂದಿನ ಅಭೀಪ್ಸೆಯನ್ನು ಬಹಳ ಸ್ಪಷ್ಟವಾಗಿ ಗುರುತಿಸಬಹುದು.

ವಸ್ತು ವಿನ್ಯಾಸದ ದೃಷ್ಟಿಯಿಂದ ಕುವೆಂಪು ನಾಟಕಗಳು ವಿಶಿಷ್ಟವಾಗಿವೆ. ಐತಿಹಾಸಿಕ, ಸಾಮಾಜಿಕ ಮತ್ತು ಪೌರಾಣಿಕ ಕತೆಗಳನ್ನು ಸಮಕಾಲೀನ ಸಾಮಾಜಿಕ ಸನ್ನಿವೇಶಕ್ಕೆ ಅನುಗುಣವಾಗಿ ವಿನ್ಯಾಸಗೊಳಿಸುವ ರೀತಿ ವಿನೂತನವಾದುದು. ಈ ವಿನ್ಯಾಸವು ಲೌಕಿಕ-ಅಲೌಕಿಕ, ಪಶ್ಚಿಮ-ಸನಾತನ ವಿಚಾರ, ಸಾಂಪ್ರದಾಯಿಕ-ಕ್ರಾಂತಿಕಾರಿ, ವಿಜ್ಞಾನ-ಅಧ್ಯಾತ್ಮ ಇಂತಹ ದ್ವಂದ್ವ ವಿಚಾರಧಾರೆಗಳ ಸಂಗಮಕ್ಕೆ ಕಾರಣವಾಗಿದೆ ಎಂದು ಹೇಳಬಹುದು. ಬೆರಳ್‌ಗೆ ಕೊರಳ್ ನಾಟಕವು ಸಾಂಪ್ರದಾಯಿಕ ನೆಲೆಯಿಂದಲೇ ಕ್ರಾಂತಿಕಾರಕವಾಗಿ ಚಿಂತನೆ ನಡೆಸುವುದನ್ನು ಕಾಣಬಹುದು. ಗುರುವಿನ ಮಹತ್ವವನ್ನು ಒಪ್ಪಿ, ಗುರು ಮಾಡಿದ ತಪ್ಪನ್ನು ಗುರುತಿಸಿ ಆತನಿಗೆ ಅದರ ಅರಿವು ಮೂಡಿಸುತ್ತಾರೆ. ಶೂದ್ರ ವಿದ್ಯೆ ಕಲಿಯಲು ಅನರ್ಹನೆಂಬುದನ್ನು ಅಳಿಸಿಹಾಕುತ್ತಾರೆ. ಜೊತೆಗೆ ಗುರು ಶಿಷ್ಯರಿಬ್ಬರನ್ನೂ, ಎತ್ತರಕ್ಕೇರಿಸಿಯೂ ಬೆರಳಿಗೆ ಕೊರಳು ನಿಶ್ಚಿತ ಎಂಬ ವಿನ್ಯಾಸ ಕ್ರಮವೇ ಕುವೆಂಪು ನಾಟಕದ ಕಲಾತ್ಮಕ ಸಿದ್ಧಿ. ಶೂದ್ರತಪಸ್ವಿ ನಾಟಕದಲ್ಲಿ ಶೂದ್ರನಾದವನು ತಪಸ್ಸಿಗೆ ಅನರ್ಹನೆಂಬ ವರ್ಣ ಸಮಸ್ಯೆಯನ್ನು ನಿವಾರಿಸಿ 'ಶೂದ್ರನಪ್ಪೊಡಂ ತಪಂ ಶಕ್ತಿದಾಯಕಂ' ಎಂದು ವಿನ್ಯಾಸಗೊಳಿಸುವಂತಹದ್ದು ಕುವೆಂಪು ಅವರ ಶೂದ್ರ ಪ್ರಜ್ಞೆಗೆ ಉತ್ತಮ ನಿದರ್ಶನ. ಕಾನೀನ ನಾಟಕವು ಕರ್ಣ, ಪರಶುರಾಮ, ಭೀಷ್ಮರ ಕಳಂಕ ನಿವಾರಣೆಯಾಗಿ 'ಪಾಪಿಗುದ್ಧಾರಮಿಹುದೌ ಸೃಷ್ಟಿಯ ಮಹದ್‌ವ್ಯೂಹ ರಚನೆಯಲಿ' ಎಂಬ ತತ್ವ ವಿಜೃಂಭಿಸುತ್ತದೆ. ಅಲ್ಲದೆ, ಕರ್ಣ ಬ್ರಾಹ್ಮಣನೆಂದು ಸುಳ್ಳುಹೇಳಿ ವಿದ್ಯೆ ಕಲಿತನೆಂಬ ಕಳಂಕವನ್ನು ನಿವಾರಿಸಿ ಆ ಪಾತ್ರವನ್ನು ಮತ್ತಷ್ಟು ಬಲಗೊಳಿಸುವಲ್ಲೇ ನಾಟಕದ ಸತ್ವ ಅಡಗಿದೆ. ಶ್ಮಶಾನ ಕುರುಕ್ಷೇತ್ರದಲ್ಲಿ ದುರ್ಯೋಧನನನ್ನು ಮೆಚ್ಚಿಕೊಂಡು ಅಲ್ಲಿನ ಧರ್ಮ, ಅಧರ್ಮವನ್ನು ನಿಕಷಕ್ಕೆ ಒಡ್ಡುವ ರೀತಿಯಿಂದಾಗಿ ನಾಟಕ ಪ್ರಸ್ತುತವೆನಿಸುತ್ತದೆ. ವರ್ಣ ವ್ಯವಸ್ಥೆ, ಮೌಢ್ಯಗಳ ವಿರೋಧವನ್ನು ಧ್ವನಿಸುವ ಜಲಗಾರ ನಾಟಕವು ಬಹಳ ಮುಖ್ಯ. ಜಲಗಾರನೊಬ್ಬ ಕರ್ಮಯೋಗಿಯಾಗಿ ಚಿತ್ರಿತವಾಗಿರುವ ಕಾರಣಕ್ಕೆ ಕರ್ಮಾರಾಧನೆಯನ್ನು ಮಹತ್ತಿಗೇರಿಸಿ, ಅಲ್ಲಿ ಶಿವನನ್ನು ಕಾಣುವ ಬಗೆಯು ವಚನಕಾರರ 'ಕಾಯಕವೇ ಕೈಲಾಸ' ಎಂಬ ತತ್ವವನ್ನು ನೆನಪಿಗೆ ತರುತ್ತದೆ. 'ಬಲಿದಾನ' ದಂತಹ ನಾಟಕವು ಬೇಂದ್ರೆಯವರ 'ಗಂಡಸಾದರೆ ನಿನ್ನ ಬಲಿಯ ಕೊಡುವೆಯೋ?' ಎಂಬ ಕವಿತೆಯ ಸಾಲುಗಳಂತೆ

ಉತ್ಕರ್ಷಕ್ಕೇರಿದ ರಾಷ್ಟ್ರೀಯತೆಯಿಂದ ಕೂಡಿದೆ. ಇನ್ನು ಮಕ್ಕಳ ನಾಟಕಗಳಲ್ಲಿ 'ಮೋಡಣ್ಣನ ತಮ್ಮ' ನಾಟಕವು ಮುಗ್ಧ ಮಗುವೊಂದು ಮೋಡವನ್ನು ಅಣ್ಣ ಎಂದು ಕಲ್ಪಿಸುವ ಬಗೆಯಲ್ಲಿ, ನನ್ನ ಗೋಪಾಲ ನಾಟಕದಲ್ಲಿ ಮುಗ್ಧ ಮಗು ದೇವರನ್ನು ಕಲ್ಪಿಸಿಕೊಳ್ಳುವ ರೀತಿಯಿಂದಾಗಿ ಇಂತಹ ನಾಟಕಗಳು ವಿನೂತನವೆನಿಸಿಬಿಡುತ್ತವೆ.

ಸನ್ನಿವೇಶ ನಿರ್ಮಾಣದ ದೃಷ್ಟಿಯಿಂದ ನೋಡಿದಾಗ, ಕುವೆಂಪು ಅವರ ನಾಟಕಗಳಲ್ಲಿ ಪೌರಾಣಿಕ ಆವರಣವು ಕಳಚಿ ಸಾಮಾಜಿಕ ಆವರಣವನ್ನು ಪಡೆಯುವ ಮೂಲಕ ಸಮಕಾಲೀನ ಬದುಕಿನ ಚಿತ್ರಣಗಳಾಗಿಬಿಡುತ್ತವೆ. ಬೆರಳ್‌ಗೆ ಕೊರಳ್ ನಾಟಕದಲ್ಲಿ ಅಬ್ಬೆ-ಏಕಲವ್ಯ, ಚಂದ್ರಹಾಸದ ಮುದುಕಿ-ಚಂದ್ರಹಾಸ, ಕಾನೀನ ನಾಟಕದ ರಾಧೆ-ಕರ್ಣ, ನನ್ನ ಗೋಪಾಲ ನಾಟಕದ ಗೋಪಾಲ-ತಾಯಿ ಮುಂತಾದೆಡೆ ಪರಿಶುದ್ಧ ತಾಯ್ತನವನ್ನು ಬಿಂಬಿಸುವ ಸೊಗಸಾದ ಸನ್ನಿವೇಶಗಳು ಮೂಡಿಬಂದಿವೆ. ಶ್ಮಶಾನ ಕುರುಕ್ಷೇತ್ರದಲ್ಲಿನ ಮರುಳ್ಗಳ ಸನ್ನಿವೇಶ, ವಾಲ್ಮೀಕಿ ಭಾಗ್ಯದಲ್ಲಿನ ಲಕ್ಷ್ಮಣ-ಸೀತೆ ಪ್ರಯಾಣದ ಸನ್ನಿವೇಶ, ಮಹಾರಾತ್ರಿ ನಾಟಕದಲ್ಲಿನ ಸಿದ್ಧಾರ್ಥ ಅಂತರ್ಮುಖನಾಗುವ ಸನ್ನಿವೇಶ ಮೊದಲಾದೆಡೆ ವಿನೂತನ 'ಸನ್ನಿವೇಶ ನಿರ್ಮಾಣ'ಗಳಿಂದ ಕೂಡಿರುವುದನ್ನು ಕಾಣಬಹುದು.

ರಂಗಸಾಧ್ಯತೆಗಳನ್ನು ಕುರಿತಂತೆ ಎರಡು ತೆರನಾಗಿ ಚರ್ಚಿಸಬಹುದು : (೧) ರಂಗಭೂಮಿಗೆ ಚೈತನ್ಯ ನೀಡುವಲ್ಲಿ ನಾಟಕಕಾರ ನಡೆಸಿದ ಪ್ರಯತ್ನ. (೨) ಕುವೆಂಪು ನಾಟಕಗಳ ರಂಗಸಾಧ್ಯತೆ. ಕುವೆಂಪು ಅವರು ನಾಟಕ ರಚಿಸುವ ಕಾಲಕ್ಕೆ ರಂಗಭೂಮಿಗೆ ಹೊಸ ಚೈತನ್ಯದ ಅಗತ್ಯವಿತ್ತು. ಆದರೆ ಕುವೆಂಪು ಅವರ ಬೃಹತ್ತಾದ ಕಾವ್ಯ ಕಲ್ಪನೆಯಲ್ಲಿ ರಂಗಪ್ರಯೋಗ ನಿಷ್ಪ್ರಯೋಜಕ. '...ಹೊರಗಡೆಯ ಅಲ್ಪವೇದಿಕೆಯ ಮೇಲೆ ಕೃತಕಾಭಿನಯದಿಂದ ಪ್ರದರ್ಶಿಸುವುದೂ ಅಸಾಧ್ಯ' (ಶೂ.ತ. ಮುನ್ನುಡಿ, ಪು. ೬) ಎಂದೂ 'ಮನೋವೇದಿಕೆಯ ಸಜೀವತೆಯ ಮತ್ತು ಶ್ರೀಮಂತತೆಯ ಮುಂದೆ ಹೊರಗಡೆಯ ನಾಟಕಶಾಲೆ ಒಂದು ದರಿದ್ರ ಪ್ರಯತ್ನವೆಂದು ಪ್ರತಿಭಾಪ್ರಭುಗಳೆಲ್ಲರಿಗೂ ನಿತ್ಯಾನುಭವವೇದ್ಯ' (ಅದೇ ಪು. ೭) ಎಂದು ಬರೆಯುವ ಕುವೆಂಪು ಅವರ ದೃಷ್ಟಿಯಲ್ಲಿ ನಾಟಕವೂ ಒಂದು ಬೃಹತ್ತಾದ ಕಾವ್ಯಕಲ್ಪನೆ. ಸಾಮಾಜಿಕ ಬದಲಾವಣೆಯ ಬಗ್ಗೆ ಅದಮ್ಯ ಉತ್ಸಾಹ ಹೊಂದಿದ್ದ ಕುವೆಂಪು ನಾಟಕ ಪ್ರಯೋಗ ಕುರಿತು ಇಂತಹ ತೀರ್ಮಾನಕ್ಕೆ ಬರಲು ಕಾರಣ ಅವರು ಒಬ್ಬ ಏಕಾಂಗಿಯಾದ ಹೋರಾಟಗಾರ ಎಂಬುದು ಸುಸ್ಪಷ್ಟ. ತನ್ನ ಮನೋಮಂದಿರ ಮತ್ತು ಕಾವ್ಯ ಕಲ್ಪನೆಯಲ್ಲೇ ಎಲ್ಲವೂ ಸಾಧ್ಯ ಎಂದು ಭಾವಿಸಿದಂತೆ ಕಾಣುತ್ತದೆ. ಹೀಗಾಗಿ ರಂಗಭೂಮಿಗೆ ಹೊಸ ಆಯಾಮವನ್ನು ತಂದು ಕ್ರಾಂತಿಕಾರಿ ಬದಲಾವಣೆ ಮಾಡಬಹುದಾಗಿದ್ದ ಒಂದು ಒಳ್ಳೆಯ ಕೆಲಸ ಅವರಿಂದ ಸಾಧ್ಯವಾಗಲಿಲ್ಲ. ಇಂತಹದ್ದನ್ನೆಲ್ಲಾ ಮೀರಿ ನಿಂತು ಕಾವ್ಯ, ನಾಟಕ ರಚಿಸುತ್ತಿದ್ದ ಕುವೆಂಪು ಅವರಿಂದ ಇದನ್ನು ನಿರೀಕ್ಷಿಸಲಾಗದು.

ಎರಡನೆಯದಾಗಿ, ಕುವೆಂಪು ನಾಟಕಗಳು ರಂಗಭೂಮಿಗೆ ಅಳವಡಿಸುವ ಕುರಿತಂತೆ ಹೇಳುವುದಾದರೆ, ರಂಗಪ್ರಯೋಗದ ಸಾಧ್ಯತೆಗಳನ್ನು ಗಮನಿಸದೆ ನಾಟಕ ರಚಿಸಿದ್ದರೂ ಕುವೆಂಪು ಅವರ ೧೩ ನಾಟಕಗಳನ್ನು ೧೯೯೪ರಲ್ಲಿ ಬೆಂಗಳೂರಿನ 'ರಂಗಮಂಟಪ'ದ ಆಶ್ರಯದಲ್ಲಿ ವಿವಿಧ ವಿಲಾಸಿ ನಾಟಕ ತಂಡಗಳು ಅಭಿನಯಿಸಿ ಕುವೆಂಪು ಅವರ ಮಾತನ್ನು ಹುಸಿಗೊಳಿಸಿದವು (ಎಚ್. ಕೆ. ರಂಗನಾಥ್ ಪು. ೩೩೪). ಕೆಲವೊಂದು ಮಿತಿಗಳ ನಡುವೆಯೂ ಕುವೆಂಪು ಅವರ ವಿಚಾರಗಳನ್ನು ಜನಸಾಮಾನ್ಯರಿಗೆ ತಲುಪಿಸುವ ಜವಾಬ್ದಾರಿಯುತ ಕೆಲಸ ಇಂದಿನವರೆಗೂ ನಡೆಯುತ್ತಲೇ ಇದೆ. ಕುವೆಂಪು ಅವರ ನಾಟಕಗಳಲ್ಲಿನ ದೀರ್ಘ ಸಂಭಾಷಣೆ, ಕೆಲವೆಡೆಯ ಅಸಂಕೀರ್ಣತೆ, ಪ್ರೌಢವೂ ಗಂಭೀರವೂ ಆದ ಭಾಷಾಬಳಕೆಯ ತೊಡಕುಗಳಿಂದಾಗಿ ರಂಗದಮೇಲೆ ತರುವುದು ತುಸು ಕಷ್ಟಸಾಧ್ಯವೆನಿಸುತ್ತದೆ. ಆದರೆ, ಅವರ ಬಹುತೇಕ ನಾಟಕಗಳು ಸಮರ್ಥ ಅಭಿನಯ ತಂಡ ಮತ್ತು ನಿರ್ದೇಶನದಿಂದಾಗಿ ಅಸಂಖ್ಯಾತ ಯಶಸ್ವಿ ಪ್ರಯೋಗಗಳು ನಡೆದಿವೆ ಎಂಬುದು ಈಗ ಇತಿಹಾಸ.

ಕುವೆಂಪು ಅವರ ನಾಟಕಗಳನ್ನು ಅವರ ಇತರ ಸಾಹಿತ್ಯ ಪ್ರಕಾರಗಳೊಂದಿಗೆ ಹೋಲಿಸಿದಾಗ ಒಟ್ಟಾರೆ ಸಾಹಿತ್ಯಕ ನಿಲುವಿನಲ್ಲಿ ಅಂತಹ ವ್ಯತ್ಯಾಸ ಕಾಣಸಿಗುವುದಿಲ್ಲ. ಆದರೆ, ಅವರ ಬಹುತೇಕ ವಿಚಾರಧಾರೆಗಳ ಬೀಜಾಂಕುರವನ್ನು ನಾಟಕಗಳಲ್ಲೇ ಕಾಣಬಹುದು. ಕತೆ, ಕಾವ್ಯ, ಕಾದಂಬರಿ, ನಾಟಕಗಳಲ್ಲಿ ಪ್ರೌಢಭಾಷೆ, ಕಾವ್ಯಾಂಶ, ಗದ್ಯದಸೊಗಸು – ಮುಂತಾದವು ಕುವೆಂಪು ಅವರ ಬರವಣಿಗೆ ಎಂದು ಗುರುತಿಸಿ ಹೇಳುವಷ್ಟರ ಮಟ್ಟಿಗೆ ಸಾಕಷ್ಟು ಸಾಮ್ಯತೆಗಳಿರುವುದನ್ನು ಕಾಣಬಹುದು.




ತಾ. ೧೨-೧೧-೨೦೦೫ರಂದು ನವಕರ್ನಾಟಕದ ಆರು ಪುಸ್ತಕಗಳ ಲೋಕಾರ್ಪಣೆ ಕಾರ್ಯಕ್ರಮ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಆವರಣದಲ್ಲಿ ನಡೆಯಿತು. ಪ್ರೊ|| ಸಿ. ವಿ. ವಿಶ್ವೇಶ್ವರ ಅಧ್ಯಕ್ಷತೆ ವಹಿಸಿದ್ದರು. ಫಿಸಿಕ್ಸ್ ಮತ್ತು ಐನ್‌ಸ್ಟೈನ್, ನೆನಪಿನ ಅಲೆಗಳು, ಹೆಜ್ಜೆ ಗುರುತು, ಬಹಿಷ್ಕೃತ, ಜೀವಜಗತ್ತಿನ ಕೌತುಕಗಳು – ಪ್ರೀತಿ ಪ್ರಣಯ ಮತ್ತು ಲಾಲನೆ ಪಾಲನೆ – ಈ ಕೃತಿಗಳನ್ನು ಡಾ|| ಎಚ್. ಆರ್. ಕೃಷ್ಣಮೂರ್ತಿ ಅನಾವರಣಗೊಳಿಸಿದರು. ಶ್ರೀ ನಾಗೇಶ ಹೆಗಡೆ ಮತ್ತು ಡಾ|| ವಿಜಯಾ ಪುಸ್ತಕಗಳ ಪರಿಚಯ ಮಾಡಿಕೊಟ್ಟರು. ಮೇಲಿನ ಕೃತಿಗಳ ಲೇಖಕರು, ಬಹಿಷ್ಕೃತ ಕೃತಿಯ ಅನುವಾದಕಿ ಸುಮಾ ದ್ವಾರಕಾನಾಥ್ ಹಾಗೂ ಹೆಚ್ಚಿನ ಸಂಖ್ಯೆಯ ಪುಸ್ತಕಾಸಕ್ತರು ಉಪಸ್ಥಿತರಿದ್ದರು. ಶ್ರೀ ರಮೇಶ ಉಡುಪ ಸ್ವಾಗತ ಕೋರಿದರು. ಡಾ|| ಪಿ. ಎಸ್. ಗೀತಾ ಕಾರ್ಯಕ್ರಮ ನಿರ್ವಹಿಸಿದರು.

ಕೊನೆಯಲ್ಲಿ, ಕುವೆಂಪು ನಾಟಕಗಳಲ್ಲಿನ ಸೈದ್ಧಾಂತಿಕ ನೆಲೆಗಳನ್ನು ಗುರುತಿಸಬಹುದು. ''ಸೃಷ್ಟಿಶೀಲ ಬರಹಗಾರನ ಸೃಜನಶೀಲ ಸಾಧ್ಯತೆಗಳು ಅವನ ಸೈದ್ಧಾಂತಿಕ ನೆಲೆಗಳನ್ನು ಅವಲಂಬಿಸಿರುತ್ತದೆ. ಹೀಗಾಗಿ ಲೇಖಕನ ಅನುಭವದ ಅಭಿವ್ಯಕ್ತಿಯನ್ನು ರೂಪಿಸಿ ತಾತ್ವಿಕ ನೆಲೆಗಟ್ಟನ್ನು ನೀಡಿದ ಸಂಗತಿಗಳು ಮುಖ್ಯವೆನಿಸುತ್ತವೆ'' (ಪು. ೧೮೯). ಕುವೆಂಪು ಅವರ ಸೈದ್ಧಾಂತಿಕ ನೆಲೆಗಳನ್ನು ರೂಪಿಸಿದ ವಿಚಾರಧಾರೆಗಳೆಂದರೆ : ರಮ್ಯವಾದ, ಉದಾರ ಮಾನವತಾವಾದ, ರಾಮಕೃಷ್ಣ ಪರಮಹಂಸ-ವಿವೇಕಾನಂದರ ವಿಚಾರಧಾರೆ, ಪಶ್ಚಿಮದ ವಿಚಾರಧಾರೆ, ರಾಷ್ಟ್ರೀಯತೆ, ಉಪನಿಷತ್ (ಪೂರ್ಣದೃಷ್ಟಿ) ವಿನೋಬಾ (ಸರ್ವೋದಯ) ವಿಚಾರಧಾರೆ – ಇನ್ನೂ ಅನೇಕ ವಿಚಾರಧಾರೆಗಳಿಂದ ಪ್ರಭಾವಿತಗೊಂಡ ಕುವೆಂಪು ಅವರ ಸೈದ್ಧಾಂತಿಕ ನೆಲೆಗಳು ಸಾಹಿತ್ಯ ಸಿದ್ಧಿಯನ್ನು ಹೇಗೆ ತಂದುಕೊಟ್ಟಿವೆಯೋ ಹಾಗೇ ದ್ವಂದ್ವಗಳ ಮಿತಿಯುಳ್ಳದ್ದೂ ಆಗಿದೆ.

ಮುಖ್ಯವಾಗಿ ವೈಚಾರಿಕತೆ ಮತ್ತು ವೈಜ್ಞಾನಿಕ ದೃಷ್ಟಿಕೋನದಿಂದ ನೋಡಿದಾಗ ಕುವೆಂಪು ಅವರ ನಾಟಕಗಳು ತುಂಬಾ ಪ್ರಸ್ತುತವೆನಿಸುತ್ತವೆ. ಕುವೆಂಪು ವೈಚಾರಿಕತೆಯ ಸ್ವರೂಪವನ್ನು ಎರಡು ನೆಲೆಗಳಲ್ಲಿ ಗುರುತಿಸಬಹುದು : (೧) ಪಶ್ಚಿಮದ ವಿಚಾರವಾದವೂ ಒಳಗೊಂಡಂತೆ ಪ್ರಜಾಪ್ರಭುತ್ವ ತತ್ವಗಳು, ಮಾನವತಾವಾದ ಮುಂತಾದವು. (೨) ಭಾರತೀಯ ತತ್ವಶಾಸ್ತ್ರ, ಉಪನಿಷತ್ತು, ರಾಮಕೃಷ್ಣ ಪರಮಹಂಸ, ವಿವೇಕಾನಂದ, ವಿನೋಬಾ, ಗಾಂಧಿ ಮುಂತಾದ ದಾರ್ಶನಿಕರ ವಿಚಾರಧಾರೆಗಳಿಂದ ರೂಪಿತವಾದ ಚಿಂತನಾಕ್ರಮ.

ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳ ಮೇಲೆ ಅಪಾರ ಹಿಡಿತ ಸಾಧಿಸಿದ್ದ ಕುವೆಂಪು ಅವರ ಓದಿನ ಹರವು ವಿಸ್ತೃತವಾದುದು. ಮುಖ್ಯವಾಗಿ ಅವರನ್ನು ಆಕರ್ಷಿಸಿದ್ದು ಪಶ್ಚಿಮದ ವಿಚಾರಧಾರೆ. ವೈಜ್ಞಾನಿಕ ಮನೋಧರ್ಮ ಮತ್ತು ಪ್ರಜಾಪ್ರಭುತ್ವ ವಿಚಾರಗಳು ಕುವೆಂಪು ಅವರ ಚಿಂತನೆಗೆ ತಾತ್ತ್ವಿಕ ನೆಲೆಯನ್ನು ಒದಗಿಸಿದವು. ಒಂದೆಡೆ, ಪಶ್ಚಿಮದ ವಿಚಾರಧಾರೆಯಿಂದ ಪ್ರೇರಿತಗೊಂಡ ಪ್ರಗತಿಪರ ಆಲೋಚನೆಗಳೊಂದಿಗೆ ಬರೆಯುತ್ತಿದ್ದ ಕುವೆಂಪು ಮತ್ತೊಂದೆಡೆ,

ವಸಾಹತುಶಾಹಿಯು ತಂದೊಡ್ಡಿದ ಎಲ್ಲಾ ಬಗೆಯ ಸವಾಲುಗಳಿಗೆ ಆಧ್ಯಾತ್ಮಿಕ ನೆಲೆಯ ಮಾನವತಾವಾದದ ಮೂಲಕ ಉತ್ತರಿಸಲು ಪ್ರಯತ್ನಿಸುತ್ತಾರೆ. ಇದು ಅವರ ಬೆರಳ್‌ಗೆ ಕೊರಳ್, ಶೂದ್ರತಪಸ್ವಿ, ಜಲಗಾರ, ಕಾನೀನ ಮತ್ತು ಬಲಿದಾನ ನಾಟಕಗಳಲ್ಲಿ ಢಾಳಾಗಿ ಗೋಚರಿಸುತ್ತದೆ.

ಇಲ್ಲಿ ಕುವೆಂಪು ಎತ್ತುವ ಪ್ರಶ್ನೆಗಳಲ್ಲಿ ವರ್ಣ ಮತ್ತು ವರ್ಗಸಂಘರ್ಷವೂ ಒಂದು. ಭಾರತೀಯ ಸಮಾಜದಲ್ಲಿನ ಜಾತಿ ವ್ಯವಸ್ಥೆಯ ಕರಾಳಮುಖಗಳನ್ನು ನೋಡಲಾಗಲಿಲ್ಲ, ಅವರಿಗೆ ಕಡುವಿರೋಧಿಯಾಗಿ ಕಂಡದ್ದು ವರ್ಣವ್ಯವಸ್ಥೆಯಲ್ಲಿ ಮೊದಲಸ್ಥಾನದಲ್ಲಿದ್ದ ಬ್ರಾಹ್ಮಣ ವರ್ಗ. ಹಿಂದೂ ಸಾಮಾಜಿಕವ್ಯವಸ್ಥೆಯ ಜಾತಿಪದ್ಧತಿಯಲ್ಲಿನ ಅಮಾನವೀಯ ಪ್ರಸಂಗಗಳನ್ನು ಪ್ರತಿಭಟಿಸಲು ಸಾಧ್ಯವಾಗದಿರೋದಕ್ಕೆ ಮುಖ್ಯವಾಗಿ ರಾಷ್ಟ್ರೀಯ ಚಳುವಳಿ ಮತ್ತು ಸನಾತನಮೌಲ್ಯಗಳನ್ನು ಪುನರ್ ಸ್ಥಾಪಿಸುವ ನಿಲುವು ಕಾರಣ ಎಂಬುದು ಸ್ಪಷ್ಟ. ಜೊತೆಗೆ, ಪಶ್ಚಿಮದ ವಿಚಾರಧಾರೆಯಿಂದ ಪ್ರಭಾವಿತಗೊಂಡಿದ್ದರೂ ವಸಾಹತುಶಾಹಿಗೆ ಪ್ರತಿಕ್ರಿಯಿಸಲು ಆಯ್ಕೆಮಾಡಿಕೊಂಡದ್ದು ಸನಾತನ ಮೌಲ್ಯಗಳಿಂದ ಕೂಡಿದ ಆಧ್ಯಾತ್ಮಿಕತೆ ಎಂಬುದನ್ನು ಗಮನಿಸಬೇಕು. ಇಂತಹ ದ್ವಂದ್ವಗಳನ್ನು ಸೃಷ್ಟಿಸಿಕೊಂಡ ಪ್ರತಿಭಟನಾ ಮನೋಧರ್ಮದ ಲೇಖಕ ಅವಿಘಟಿತ ಸಂಘರ್ಷವನ್ನು ಜತನ ಮಾಡುತ್ತಾರೆ. ಅಲ್ಲದೆ, ''ವರ್ಗ ಸಂಘರ್ಷದ ವಾಸ್ತವ ಸ್ವರೂಪದಲ್ಲಿ ಆಸಕ್ತಿಯಿಲ್ಲ. ಬದಲಾಗಿ ಒಂದು ವಿಕಾಸದ ಕಥನ ; ಸರ್ವೋದಯದ, ಆಧ್ಯಾತ್ಮಿಕ ಮಾನವೀಯತೆಯ ವಿಕಾಸದ ಕಥನ ; ಈ ಸಾರ್ವತ್ರಿಕ ಮಾನವೀಯತೆಯ ದೃಷ್ಟಿಕೋನ ಯಾವಾಗಲೂ ವರ್ಗಸಂಬಂಧಗಳ ನಿಜ ಸ್ವರೂಪವನ್ನು ಅದರಾಳದ ಘರ್ಷಣೆಯನ್ನು ಮಸುಕಾಗಿಸುತ್ತದೆ'' (ಡಿ. ಆರ್. ನಾಗರಾಜ್, ಪು. ೨೨) ಎಂಬ ಅಭಿಪ್ರಾಯ ಸರಿಯೆನಿಸುತ್ತದೆ.

ಅಲ್ಲದೆ ವಿದ್ಯೆ-ಅವಿದ್ಯೆ, ಗುರು-ಶಿಷ್ಯ, ಬ್ರಾಹ್ಮಣ-ಶೂದ್ರ, ಧರ್ಮ-ಅಧರ್ಮ, ಪ್ರೇಮ-ದ್ವೇಷ, ಸಾವು-ಬದುಕು, ಪೂರ್ವ-ಪಶ್ಚಿಮ, ಸೋಲು-ಗೆಲುವು ಹೀಗೆ ಪರಸ್ಪರ ವಿರುದ್ಧವಾದ ಸಂಗತಿಗಳನ್ನು ಅವಿಘಟಿತ ಸಂಘರ್ಷ ಮತ್ತು ಆಧ್ಯಾತ್ಮಿಕವಾಗಿ ವಿನ್ಯಾಸಗೊಳಿಸುವಲ್ಲಿ ಕುವೆಂಪು ಅವರ ಸೈದ್ಧಾಂತಿಕನೆಲೆಯ ಮಹತ್ತು ಮತ್ತು ಮಿತಿಗಳೆರಡನ್ನು ಕಾಣಬಹುದು. ಇದರಾಚೆಯೂ ಕುವೆಂಪು ಆಧುನಿಕ ಕನ್ನಡ ಸಾಹಿತ್ಯದ ಮೊಟ್ಟಮೊದಲ ಬಂಡಾಯಗಾರ. ವರ್ತಮಾನದ ಸವಾಲುಗಳಿಗೆ ಮುಖಮಾಡಿನಿಂತ ಒಂಟಿ ಸಲಗ. ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ಗುರುತಿಸಬಹುದಾದ ಬಹು ದೊಡ್ಡ ಬರಹಗಾರ.

*(೨೧, ೨೨ ಫೆಬ್ರವರಿ ೨೦೦೮ರಂದು ಹೊಸದುರ್ಗದಲ್ಲಿ ನಡೆದ ಚಿತ್ರದುರ್ಗ ಜಿಲ್ಲಾ ಒಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧ)*

**ಡಾ|| ಕೆ. ಶಿವಾನಂದಯ್ಯ**
ಹಿರಿಯ ಶ್ರೇಣಿ ಕನ್ನಡ ಉಪನ್ಯಾಸಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸದುರ್ಗ - ೫೭೭ ೫೨೭

## ಮರು ಓದು

**ಈ** ಪುಟ್ಟ ಟಿಪ್ಪಣಿಯಲ್ಲಿ ಎರಡು ಪದ್ಯಗಳ ಮರು ಓದು ಅಥವಾ ಹೊಸ ಓದನ್ನು ಗಮನಿಸಬಹುದು. ಅರ್ಥವಾಗದೆಯೋ, ಮೀರಿದ ಕಾಲ ಸಂದರ್ಭಗಳಿಂದಲೋ, ತಪ್ಪು ಓದುಗಳಿಂದಲೋ ಕೆಲವು ಪದ್ಯಗಳು ತಮ್ಮೊಳಗಿನ ಪಿಸುನುಡಿಯಿಂದ ಇಲ್ಲವೇ ನೇರ ನುಡಿಯಿಂದ ವಂಚಿತವಾಗುತ್ತವೆ. ಅಂತಹ ಒಂದು ನುಡಿಯ ಗುರುತಿಸುವ ಪ್ರಯತ್ನವಿದು.

ಮೊದಲಿಗೆ ಈ ಜನಪ್ರಿಯ ತ್ರಿಪದಿಯನ್ನು ನೋಡಬಹುದು :

ಬಾಲಕರಿಲ್ಲದ ಬಾಲೀದ್ಯಾತರ ಜನ್ಮ
ಬಾಡಿಗೆ ಎತ್ತು ದುಡಿದಂಗ
ಬಾಳೆಲೆಯ ಹಾಸುಂಡು ಬೀಸಿ ಒಗೆದಂಗ.

ಸಾಮಾನ್ಯವಾಗಿ ಇಲ್ಲಿಯವರೆಗಿನ ಅನೇಕ ಲೇಖನ, ಭಾಷಣಗಳಲ್ಲಿ ಅವು ಸಂಶೋಧನೆ, ಜಾನಪದ ವಿಶ್ಲೇಷಣೆ ಇತ್ಯಾದಿ ಏನೇ ಇರಲಿ, ಅವುಗಳಲ್ಲೆಲ್ಲಾ 'ಬಂಜೆ'ಯ ಬಾಳಿನ ಸಂಕೇತವಾಗಿ 'ಬಂಜೆ'ಯ 'ಗತಿ'ಯ ರೂಪಕವಾಗಿ ಈ ಪದ್ಯ ನಿಲ್ಲುತ್ತದೆ ಎಂದೇ ಅರ್ಥ ನೀಡಲಾಗಿದೆ. ವಿಶ್ವವಿದ್ಯಾನಿಲಯಗಳ ವಿದ್ವಾಂಸರೂ, ಜಾನಪದ ತಜ್ಞರೂ, ವಿಮರ್ಶಕರೂ ಇದೇ ಅರ್ಥವನ್ನು ಹೇಳಿದ್ದಾರೆ. ಇತ್ತೀಚೆಗೆ ಸ್ತ್ರೀವಾದಿ ಲೇಖಕರೂ ಕೂಡ ಇದೇ ಅರ್ಥ ಹೇಳಿದ್ದಾರೆ. ಇದು ಆಶ್ಚರ್ಯ, ಆಘಾತ ಉಂಟು ಮಾಡುತ್ತದೆ. ಲೇಖಕರಾದರೆ ಸರಿ, ಪರವಾ ಇಲ್ಲ; ಲೇಖಕಿಯರೂ ಇದೇ ತಪ್ಪು ಮಾಡಿರುವುದು ಅಕ್ಷಮ್ಯ. (ನೋಡಿ : ಎಸ್. ವಿ. ಪ್ರಭಾವತಿ, ಸ್ತ್ರೀವಾದದ ಕಾಲ ಮುಗಿಯಿತೇ ? ಪು. ೩೯).

ಆದರೆ ಮೇಲಿನ ತ್ರಿಪದಿಯ ಆಶಯ, ಒಳದನಿ ಅದಲ್ಲ. ಪುರುಷ ಪ್ರಧಾನ ಸಮಾಜದಲ್ಲಿ ಗಂಡುಮಕ್ಕಳಿಗೆ ಎಷ್ಟು ಮಹತ್ವವಿದೆ; ಒಂದು ವೇಳೆ 'ಗಂಡು' ಮಗು ಹೆರದ ಹೆಣ್ಣಿನ ಗತಿ-ಸ್ಥಿತಿ ಎಂತಹುದು ಎಂಬುದು ಇಲ್ಲಿನ ದನಿ. ಆದ್ದರಿಂದ ಇಲ್ಲಿಯವರೆಗೆ ಎಲ್ಲ ವಿದ್ವಾಂಸರೂ (?) 'ಬಾಲಕರಿಲ್ಲದ' ಎಂಬುದನ್ನು 'ಮಕ್ಕಳಿಲ್ಲದ' ಎಂದು ಅರ್ಥೈಸಿದ್ದಾರೆ. ಅದಲ್ಲ; ಈ ಸಾಲು ಹೇಳುವುದು : ಗಂಡು ಹೆರದ ಹೆಣ್ಣಿನ ಸ್ಥಿತಿ ನಿರುಪಯೋಗಿ. ನಾಳೆ ಆಕೆ, ಆಕೆಯ ಕುಟುಂಬದ ಆಸ್ತಿ ಇತ್ಯಾದಿ ಎಲ್ಲವೂ ಅಳಿಯನಿಗೆ, ಅಳಿಯನ ವಂಶಕ್ಕೆ ಸೇರುತ್ತವೆ. ಆದ್ದರಿಂದ ಆಕೆ ಗಂಡ ಎಷ್ಟೇ ದುಡಿದರೂ ಅದು ಕಂಡವರ ಪಾಲು. ಅವರ ಶ್ರಮ ಅನುಭವಿಸಲು 'ಮಗ'ನೆಂಬ 'ಪುಣ್ಯಪುತ್ರ' ಇಲ್ಲ ಎನ್ನುವುದು ಇಲ್ಲಿನ ಅರ್ಥ.

ಎರಡನೆಯದು ಬಸವಣ್ಣನ ಪ್ರಸಿದ್ಧ ವಚನ ''ಕೊಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ...''

ಈ ವಚನವನ್ನು ಶಾಲೆ ಕಾಲೇಜುಗಳಲ್ಲಿ, ಸಭೆ, ಸಮಾರಂಭಗಳಲ್ಲಿ ಭಾಷಣ, ಲೇಖನಗಳಲ್ಲಿ ಹೀಗೆ ಅರ್ಥೈಸಲಾಗುತ್ತದೆ. ''ಪ್ರಾಣಿ ಹಿಂಸೆ ಮಾಡುವವನು ಮಾದಿಗ, ಮಾಂಸ ತಿನ್ನುವವನು ಹೊಲೆಯ'' ಎಂಬ ಸರಳಾರ್ಥ ನೀಡಿ ಅಷ್ಟಕ್ಕೇ ನಿಲ್ಲಿಸಲಾಗುತ್ತದೆ. ನಾನು ಶಾಲೆಯಲ್ಲಿ ಕೇಳಿದ್ದೂ ಇದೇ ಅರ್ಥ. ಆದರೆ ಈ ಅರ್ಥ ಹೇಳಿ ಈ ವಚನವನ್ನು ಸಮರ್ಥಿಸಿದರೆ ಇಡೀ ವಚನ ಚಳುವಳಿಯ ಆಶಯಕ್ಕೆ ವಿರುದ್ಧವಾಗಿ ನಿಂತಂತೆ, ಬಸವಣ್ಣನ ಮೂಲಕ್ರಾಂತಿಗೆ ತಿರುಗಿ ನಿಂತಂತೆ ಆಗುತ್ತದೆ. ಜಾತಿ ಇಲ್ಲ ಎಂದು ಹೇಳಿದ, ಆಯಾ ವೃತ್ತಿ ಕಾಯಕಕ್ಕೆ ಬೆಲೆ ನೀಡಿದ ಬಸವಣ್ಣ ಅಷ್ಟು ಸುಲಭವಾಗಿ ಮಾಂಸಾಹಾರ ಪ್ರಧಾನ ಜನರನ್ನು 'ಹೊಲೆಯ'ರೆನ್ನಲಾರ. ಹಾಗೊಂದು ವೇಳೆ ಅಂದರೆ ಅವನ ಇಡೀ ಪ್ರತಿಭಟನೆ ವ್ಯರ್ಥ ಎನಿಸುತ್ತದೆ. ವೈದಿಕ ಆಚರಣೆ, ಸಂಸ್ಕಾರಗಳನ್ನು ಪ್ರಬಲವಾಗಿ ಖಂಡಿಸಿದ ಬಸವ ಅಂದಿನ ಯಾಗ, ಯಜ್ಞಗಳಲ್ಲಿ 'ಬಲಿ' ಕೊಡುತ್ತಿದ್ದ ಬ್ರಾಹ್ಮಣರು ಅವರ ಪೂಜಾರಿಗಳನ್ನು ಋಷಿಗಳನ್ನು ಕುರಿತು ಈ ಮಾತು ಹೇಳಿರುವ ಸಾಧ್ಯತೆ ಇದೆ. ಅಲ್ಲದೆ ಇಲ್ಲಿ 'ಕೊಲುವವನು' ಎಂದರೆ 'ನರಬಲಿ' ಎಂದು ಅರ್ಥೈಸಿದರೆ ಸೂಕ್ತವೇ ವಿನಾ 'ಪ್ರಾಣಿಬಲಿ'; ಅದೂ ಮಾರಿ ಮೊದಲಾದ ದೇವಿಗಳಿಗೆ ನೀಡುತ್ತಿದ್ದ ಕುರಿ-ಕೋಳಿ ಬಲಿ ಮತ್ತು ಮಾಂಸಾಹಾರ ತಪ್ಪು ಎಂದು ಅರ್ಥೈಸಿದರೆ ಸಮಾಜದ ಬಹುಸಂಖ್ಯಾತರೂ, ಶ್ರಮಜೀವಿಗಳೂ ಆದ, ಶತಶತಮಾನಗಳಿಂದ ಮಾಂಸಾಹಾರ ತಿಂದು ದೃಢದೇಹ ಬೆಳೆಸಿ, ಕರಿಕೆ ಕೀಳುವುದು, ಒಡ್ಡು ಕಟ್ಟುವುದು ಮೊದಲಾದ ಶ್ರಮದ ಕೆಲಸ ಮಾಡುತ್ತಿದ್ದವರನ್ನು ಹೀಯಾಳಿಸಿದಂತೆಯೂ, ಅವರ ಆಹಾರ ಸಂಸ್ಕೃತಿಯನ್ನು ನಾವು ಅಲ್ಲಗಳೆದಂತೆಯೂ ಆಗುತ್ತದೆ. ಆದ್ದರಿಂದ ಈ ಬಗೆಯ ಅರ್ಥ ನೀಡುವುದಕ್ಕಿಂತಲೂ, ನರಬಲಿ ಹಾಕುವವನು ಮಾದಿಗ, ಇನ್ನೊಬ್ಬರ ದುಡ್ಡು (ಲಂಚ) ಆಸ್ತಿ ತಿನ್ನುವವನು 'ಹೊಲೆಯ' ಎನ್ನುವ ಅರ್ಥ ನೀಡಿದಲ್ಲಿ ಈ ವಚನಕ್ಕಿರಬಹುದಾದ ಸಾಮಾಜಿಕ ಆಸ್ಥೆಯನ್ನು ತಿಳಿಸಿದಂತಾಗುತ್ತದೆ.

ಅಲ್ಲದೆ ಬಸವಣ್ಣ ತನ್ನ ಕಾಲ-ಸಂದರ್ಭದಲ್ಲಿದ್ದ ವಾಮಾಚಾರಿಗಳು, ಅಘೋರಿಗಳು ಮೊದಲಾದವರ ಬಗ್ಗೆ ತನ್ನ ಅಭಿಪ್ರಾಯ ವ್ಯಕ್ತಪಡಿಸಿರಬಹುದಾದ ಸಾಧ್ಯತೆಯೂ ಈ ವಚನಕ್ಕಿದೆ.

ಹಾಗಾಗಿ ಇಂತಹ ಸಂದರ್ಭಗಳಲ್ಲಿ ಜನಪ್ರಿಯ ಅರ್ಥ ಪರಂಪರೆಗೆ ಬದಲು ಸೂಕ್ಷ್ಮ ಅವಲೋಕನದ ಅಗತ್ಯವಿದೆ; ಹಾಗಾದಲ್ಲಿ ಪದ್ಯ ಮತ್ತು ವಚನಗಳ ಆಶಯ ಇನ್ನಷ್ಟು ವಿಸ್ತೃತವಾಗಬಹುದು.

**ಡಾ|| ಎಸ್. ಪ್ರಸಾದಸ್ವಾಮಿ**
ನಂ. ೪/ಎ, ನ್ಯೂ ಕಾಲನಿ, ಭದ್ರಾವತಿ

# ಮರದೊಳಗಿನ ಕಿಚ್ಚು



**ಎಚ್. ಎನ್. ಮಂಜುರಾಜ್**

**ನಾ**ನು ಪ್ರಸ್ತಾಪಿಸುತ್ತಿರುವ ಸಂಗತಿ : ಸಂಶೋಧನಾಧ್ಯಯನ ಹಾಗೂ ಈ ಸಂಬಂಧದ ಪದವಿ-ಪುರಸ್ಕಾರ-ಸಾಧನೆಗಳನ್ನು ಆಡಳಿತಾತ್ಮಕ ಅರ್ಹತೆಗಳಿಗೆ ಮಾನದಂಡವನ್ನಾಗಿಸಿಕೊಳ್ಳುವ ಬಗೆಗೆ.

ಯಾವುದೇ ಕ್ಷೇತ್ರವಿರಲಿ, ಸಂಶೋಧನೆಯೇ ಅದರ ಜೀವಧಾತು. ಸಂಶೋಧನಾ ಚಟುವಟಿಕೆಗಳು ಜೀವಂತವಾಗಿದ್ದರೇನೇ ಚೆಂದ. ಇಲ್ಲದಿದ್ದಲ್ಲಿ ಅದು ಜಡ, ನೀರಸ, ಆ ಮಟ್ಟಿಗೆ ನಿರುಪಯುಕ್ತ; ಶವಕ್ಕೆ ಮಾಡಿದ ಸಿಂಗಾರವೇ ಸರಿ.

ಉದ್ಯಮವೊಂದು ತನ್ನ ಗ್ರಾಹಕರನ್ನು ಸದಾ ತನ್ನ ಮುಷ್ಟಿಯಲ್ಲಿರಿಸಿಕೊಳ್ಳಲು, ಸರಕಿನ ವಿನ್ಯಾಸ-ಪ್ಯಾಕಿಂಗ್ ಶೈಲಿ-ಜಾಹಿರಾತುಗಳನ್ನು ಮನಮೋಹಕವಾಗಿ ಬಿಂಬಿಸುವಲ್ಲಿ ಸಂಶೋಧನೆಯ ಪಾತ್ರ ಮನನೀಯ. ಯಂತ್ರ-ತಂತ್ರಜ್ಞಾನದ ಸಂಶೋಧನೆಗಳು ವ್ಯಾಪಾರ-ವಾಣಿಜ್ಯ-ಶಿಕ್ಷಣ-ಮನರಂಜನಾ ಚಹರೆಗಳನ್ನೇ ಬದಲಿಸುತ್ತಿರುವುದು ಮತ್ತು ದೇಶವೊಂದರ ಸ್ವಾವಲಂಬನೆ-ಪ್ರತಿಷ್ಠೆಗಳು ವೈಜ್ಞಾನಿಕ ಸಂಶೋಧನೆಯ ಮತ್ತು ಮಿಲಿಟರಿಯ ನವೀನ ಮಾದರಿ ಶಸ್ತ್ರಾಸ್ತ್ರಗಳ ಮೂಲಕ ನಿರ್ಧಾರಗೊಳ್ಳುತ್ತಿರುವುದು – ಇವೆಲ್ಲ ಒಟ್ಟಂದದಲ್ಲಿ ಅನ್ವೇಷಣೆ, ಶೋಧನೆಗಳ ಆಧಿಪತ್ಯವನ್ನು ಸಂಕೇತಿಸುತ್ತವೆ. ಅದರಲ್ಲೂ ಒಂದು ಕ್ಷೇತ್ರದ ಆವಿಷ್ಕಾರವು ಮತ್ತೊಂದು ಕ್ಷೇತ್ರದ ಮೇಲೆ ಪರಿಣಾಮ ಬೀರಿ, ಮಾನವ ಸಮಾಜದ ಜೀವನಕ್ರಮ-ಆಲೋಚನಾ ಧಾಟಿಗಳನ್ನೇ ಬದಲಿಸುವ/ಪ್ರಶ್ನಿಸುವ/ವಿಮರ್ಶಿಸುವ ಪರಿಸರವು ಈಗ ನಿರ್ಮಾಣವಾಗಿರುವುದು... ಹೀಗೆ ಮನುಕುಲದ ಹಿನ್ನಡೆ-ಮುನ್ನಡೆಗಳು ಬಲವಂತ ಸಂಶೋಧನೆ/ಆಕಸ್ಮಿಕ ಸಂಶೋಧನೆಯನ್ನೇ ಬಲವಾಗಿ ಆತುಕೊಂಡಿವೆ ಎಂದರೆ ತಪ್ಪಾಗಲಾರದು.

ವಿಜ್ಞಾನ-ತಂತ್ರಜ್ಞಾನ, ಭಾಷೆ-ಸಾಹಿತ್ಯ-ಸಂಸ್ಕೃತಿ, ಮಾನವಿಕ-ಜೈವಿಕ ಮೊದಲಾದ ಜ್ಞಾನಶಿಸ್ತುಗಳ ಸಂಶೋಧನಾ ಸ್ವರೂಪಗಳನ್ನು ಕುರಿತು ವ್ಯಾಪಕ ಚರ್ಚೆಯಾಗಿದೆ, ಇಂಥ ಅಕಡೆಮಿಕ್ ಕೆಲಸಗಳ ಫಲಶ್ರುತಿಯು ಸಮುದಾಯಕ್ಕೆಷ್ಟು ಉಪಯೋಗಕಾರಿ ಎಂಬ ಬಗ್ಗೆಯೂ ಭಿನ್ನಾಭಿಪ್ರಾಯಗಳಿವೆ. ಉದಾಹರಣೆಗೆ, ''ಪಂಪನ ಕಾವ್ಯಗಳಲ್ಲಿ ರೇಷ್ಮೆ ಬಟ್ಟೆಯ ಪ್ರಸ್ತಾಪವಿದೆ. ಆಗ ರೇಷ್ಮೆ ಬಟ್ಟೆಯ ಬಳಕೆಯಿತ್ತು ಎಂದಾಯಿತು. ಇದಿರಲಿ, ನಾನು ಕಂಡುಕೊಂಡದ್ದೇನೆಂದರೆ, ಆ ಕಾಲದಲ್ಲಿಯೂ ಜನ ಬಟ್ಟೆ ತೊಟ್ಟುಕೊಳ್ಳುತ್ತಿದ್ದರೆಂಬುದು !'' ಇಂಥ ಹೊಳಹುಗಳನ್ನು ಕಂಡುಕೊಳ್ಳಲೂ ಕೆಲವೊಮ್ಮೆ ಸಂಶೋಧನೆ ನಡೆಸುತ್ತೇವೆ !!

ಸಂಶೋಧನೆ ಎಂಬುದು ವ್ಯಕ್ತಿನಿಷ್ಠ ಅಭಿರುಚಿ. ಸತ್ಯದ ಗುರಿ ಮತ್ತು ದಾರಿಗಳ, ಕೆಲವು ಸಲ ಆತ್ಯಂತಿಕ ಸತ್ಯದ ಅನ್ವೇಷಣೆ; ಚಂದ್ರಬಿಂಬವನ್ನು ಬೊಗಸೆಯಲ್ಲಿ ಹಿಡಿದು ತೋರುವ ಸಾಹಸ. ಸಮುದಾಯದ ಹಿತ ಹಾಗೂ ಪ್ರಗತಿ ಇದರ ಉದ್ದೇಶ; ಜೊತೆಗೆ ನಡೆದುಬಂದ ಹೆಜ್ಜೆಗುರುತುಗಳ ಕುತೂಹಲಕಾರೀ ಅವಲೋಕನವೇ ಇದರ ಚಹರೆ. ಆ ಮುಖೇನ ಮುಂದಿನ ಮಾರ್ಗಕ್ಕೊಂದು ಕೈದೀವಿಗೆ ಕೊಡುವ ಪ್ರಾಮಾಣಿಕ ಪ್ರಯತ್ನ.

ಸಂಶೋಧನೆಯನ್ನು ಶಿಕ್ಷಣಾತ್ಮಕ ಚೌಕಟ್ಟಿಗೆ ತಂದಾಗ ಅದು ಕೆಲವು ರಿಯಾಯಿತಿಗಳನ್ನೂ ವಿನಾಯಿತಿಗಳನ್ನೂ ಬೇಡುತ್ತದೆಂಬುದು ಸರ್ವವಿದಿತ. ನನ್ನ ಅನಿಸಿಕೆ : ಹಲಕೆಲವು ಲೌಕಿಕ ಲಾಭಗಳನ್ನು ಮುಂದೊಡ್ಡಿ, ಸ್ಥಾನಮಾನಗಳ ಆಮಿಷ ತೋರಿದ್ದರಿಂದಲೇ ಸಂಶೋಧನೆಯ ಗುಣಮಟ್ಟ ಕುಸಿದಿದ್ದು; ಆಸ್ಥೆ-ಆಸಕ್ತಿಗಳಿಲ್ಲದಿದ್ದಾಗಲೂ ಸಂಶೋಧನೆ ನಡೆಸಲು ಮುಂದಾಗಿದ್ದು.

ಇದನ್ನು ಅತ್ಯಂತ ಉದಾರವಾಗಿ, ಸಕಾರಾತ್ಮಕವಾಗಿ ನೋಡಿ, ಹೆಚ್ಚು ಹೆಚ್ಚು ಸಂಶೋಧನಾಸಕ್ತಿ ಹುಟ್ಟಿಸಲು, ಅದರಿಂದ ದೊರೆಯುವ ಸೃಷ್ಟ್ಯಾತ್ಮಕ ಪ್ರತಿಭೆ-ಕೌಶಲಗಳನ್ನು ಮನುಕುಲದ ಹಿತಕ್ಕೆ ಬಳಸಿಕೊಳ್ಳಲು ಇಂಥ ಮಾರ್ಗ ಅಗತ್ಯ, ಸಹಕಾರಿ ಎಂದು ಸುಮ್ಮನಾಗಬಹುದು. ಇದರ ಪರಿಣಾಮವೇ ಈಗ ಪಿಎಚ್.ಡಿ. ಪದವಿ ಎಂಬುದು ಉದ್ಯೋಗ ಗಿಟ್ಟಿಸಲು, ಉದ್ಯೋಗದಲ್ಲಿ ಪದೋನ್ನತಿ ಹೊಂದಲು ಕಡ್ಡಾಯ ಎಂಬ ನಿಯಮ ಅಳವಟ್ಟಿರುವುದು. ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಪ್ರಾಯೋಗಿಕವಾಗಿ ನಾಲ್ಕು ವರ್ಷಗಳ 'ಎಂ.ಎ., ಪಿಎಚ್.ಡಿ.' ಸಂಯೋಜಿತ ಸ್ನಾತಕೋತ್ತರ ಪದವಿ ಕೋರ್ಸುಗಳನ್ನು ಆರಂಭಿಸಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಆದರೆ, ತೀರಾ ಸಂಬಂಧವೇ ಇರದ ಎರಡು ಭಿನ್ನ ಮಜಲುಗಳನ್ನು ಇಂಥ ಹಲವು ಕಾರಣರೂಪದ ನೆಪಗಳನ್ನೊಡ್ಡಿ ಮಾರ್ಗಸೂಚಿಯನ್ನು ಅನುಷ್ಠಾನಗೊಳಿಸಿದರೆ ಏನಾಗಬಹುದು ? ಸಂಶೋಧನಾ ಪದವಿಗಳನ್ನು ಆಡಳಿತಾತ್ಮಕ ಹುದ್ದೆಗಳ ನಿರ್ವಹಣೆಗೆ ಮಾನದಂಡವಾಗಿಸಿ, ಇದರ ಕಕ್ಷೆಯಿಂದ ಹೊರಗೆ ನಿಲ್ಲುವ ಬಹುಸಂಖ್ಯಾತ ಅರ್ಹ ಮಂದಿಯನ್ನು ಕಡೆಗಣಿಸುವುದು ಎಷ್ಟು ಉಚಿತ ?

ನೇರವಾಗಿ ಹೇಳುತ್ತೇನೆ : ಇನ್ನು ಮುಂದೆ, ಪದವಿ ಕಾಲೇಜುಗಳ ಪ್ರಿನ್ಸಿಪಾಲರ ಹುದ್ದೆಗೆ ಡಾಕ್ಟರೇಟ್ ಪದವಿ ಕಡ್ಡಾಯ ಎಂದೂ, ಮುಂದೆ ಇಂಥ ಪದವೀಧರರನ್ನೇ ನೇಮಿಸಲಾಗುವುದೆಂಬ – ಅಲ್ಲಲ್ಲಿ ಕೇಳಲ್ಪಟ್ಟ – ಸುದ್ದಿಯನ್ನು ಕುರಿತು ಸಂವಾದಿಸಲು ಇಷ್ಟೆಲ್ಲ ಪೀಠಿಕೆ ಹಾಕುತ್ತಿರುವೆ. ಈ ಸಂಗತಿಯನ್ನು ಚರ್ಚಿಸುವ ವೇದಿಕೆಗೊಂದು ಪ್ರವೇಶ ಎಂದು ಇದನ್ನು ಪರಿಗಣಿಸಿದರೆ ಸಾಕು.

* * *

- ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಪಿಎಚ್.ಡಿ. ಪದವಿ ಹೊಂದಿರುವ ಬೋಧಕರು ಎಷ್ಟು ಮಂದಿ ಲಭ್ಯ ? ಇವರು ಈಗಲೂ ಸಂಶೋಧನಾಧ್ಯಯನ ನಿರತರೇ ?
- ಕಾಲ ಸರಿದಂತೆ, ಹೊಸ ಹೊಸ ನೀತಿನಿಯಮಗಳನ್ನು ಹಳಬರಿಗೆ ಷರತ್ತಾಗಿ ವಿಧಿಸಿ, ಅವಕಾಶವಂಚನೆ ಮಾಡುವುದು ಪ್ರಜಾಸತ್ತಾತ್ಮಕವೆ ?
- ಪದವಿ ಕಾಲೇಜು ಪ್ರಿನ್ಸಿಪಾಲ ಹುದ್ದೆಯ ನಿರ್ವಹಣೆಗೂ, ಎಂದೋ ಯಾವುದೋ ನಿರ್ದಿಷ್ಟ ವಿಷಯವನ್ನು ಕುರಿತು ಸಂಶೋಧನೆ ನಡೆಸಿದ್ದಕ್ಕೂ ಥಳಕು ಹಾಕುವುದು ಎಷ್ಟು ಸರಿ ?

- ಇಷ್ಟಕ್ಕೂ ಸಂಶೋಧನಾ ಚಟುವಟಿಕೆಗಳಲ್ಲಿ ನಿರತರಾದ (ಎಲ್ಲ ಬೋಧಕರೂ ಇದರ ಕಕ್ಷೆಗೆ ಬರಬೇಕೆಂಬುದು ಉನ್ನತ ಶಿಕ್ಷಣ ನೀತಿಯ – ಯುಜಿಸಿ ಪ್ರಣೀತ ನಿಯಮ) ಅಧ್ಯಾಪಕರಿಗೆ ಈ ಆಕರ್ಷಕ – ಅಷ್ಟೇ ಜವಾಬ್ದಾರಿ ಕೇಳುವ ಆಡಳಿತ ನಿಭಾವಣೆ ಯಿಂದ ಹಿನ್ನಡೆಯುಂಟಾಗದೇ? ಕ್ಷೇತ್ರಕಾರ್ಯ, ದತ್ತ ಸಂಗ್ರಹ, ದತ್ತ ಪರಿಷ್ಕಾರ, ಪ್ರಯೋಗ, ಅಧ್ಯಯನ, ಆಲೋಚನ, ಬರಹ, ತಿದ್ದುಪಾಟುಗಳ ಮೇಲೆ!
- ಇನ್ನು ಕೊರತೆ ಬೀಳುವ ಹುದ್ದೆಗಳ ನಿರ್ವಹಣೆ ಹೇಗೆ? ಇನ್ನು ಪ್ರಿನ್ಸಿಪಾಲ ಹುದ್ದೆ ಹೊಂದಲು ಇಚ್ಛಿಸದವರಿಂದ ಉಂಟಾಗುವ ತಾತ್ಕಾಲಿಕ ಹಿನ್ನಡೆ?

## ಕೆ. ಆರ್. ನಾರಾಯಣನ್



೧೯೨೧ - ೨೦೦೫

"ಇಂದು ರಾಷ್ಟ್ರದ ಸಾಮಾಜಿಕ ಕ್ಷೇತ್ರದಲ್ಲಿ ಒಂದು ಬಗೆಯ ಪ್ರತಿಕ್ರಾಂತಿ ಜರುಗುತ್ತಿದೆ... ಒಂದು ಸಮುದಾಯದ ಸದಸ್ಯರಾಗಿ ನಾವುಗಳು ಸುತ್ತಮುತ್ತಲಿನ ಆಗುಹೋಗುಗಳಿಗೆ ಯಾವ ರೀತಿಯ ಕಾಳಜಿಯನ್ನೂ ವ್ಯಕ್ತಪಡಿಸದೆ ನಿರ್ದಯಿಗಳಾಗುತ್ತಿದ್ದೇವೆ."

"ಕೇವಲ ನಿನ್ನೆ ಮೊನ್ನೆ ಶ್ರೀಮಂತರಾದವರು ಯಾವ ಹಿಂಜರಿಕೆಯೂ ಇಲ್ಲದೆ ಮೋಜು ಮಾಡುತ್ತಿರುವುದು ಮತ್ತು ಎಲ್ಲೆಲ್ಲೂ ಎದ್ದುಕಾಣುತ್ತಿರುವ ಕೀಳುಮಟ್ಟದ ಲೋಲುಪತೆ ಹಾಗೂ ಕೊಳ್ಳುಬಾಕತನವು ಈಗಾಗಲೇ ತೀವ್ರ ಕ್ಷೋಭೆಗೊಳಗಾಗಿರುವ ಕೆಳವರ್ಗದ ಜನತೆಯನ್ನು ಮತ್ತಷ್ಟು ಹತಾಶೆಗೆ ಗುರಿಮಾಡುತ್ತಿವೆ. ಸಮಾಜದ ಅರ್ಧ ಭಾಗದಷ್ಟು ಜನರು ತಂಪು ಪಾನೀಯ ಗಳಲ್ಲಿ ಮಿಂದು ಮೀಯುತ್ತಿದ್ದಾರೆ. ಉಳಿದ ಅರ್ಧ ಭಾಗದಷ್ಟು ಜನರು ಅಂಗೈಯಷ್ಟು ರಾಡಿಯಾದ ನೀರಿಗೂ ಪರದಾಡುವಂತಾಗಿದೆ."

"ಕಡು ಬಡತನವನ್ನು ಸಹಿಸಲಾರದ ಜನಸಾಮಾನ್ಯರ ದುಗುಡ ಮತ್ತು ಅತೀವ ಅಸಮಾಧಾನಗಳು ಆಗಾಗ್ಗೆ ಹಿಂಸಾತ್ಮಕ ರೂಪಗಳಲ್ಲಿ ವ್ಯಕ್ತವಾಗುತ್ತಿವೆ..."

"ದಟ್ಟ ದಾರಿದ್ರ್ಯದ ಮಧ್ಯೆಯೇ ನಮ್ಮ ಬೃಹತ್ ಕೈಗಾರಿಕೆಗಳು ಹುಟ್ಟಿ ಕೊಳ್ಳುತ್ತಿವೆ. ಬಡಜನತೆಯ ಜೋಪಡಿಗಳ ನಡುವೆಯೇ ಉಪಗ್ರಹಗಳು ಆಕಾಶಕ್ಕೆ ಚಿಮ್ಮುತ್ತಿವೆ..."

"ಮನ ಕದಡುವ ಮತ್ತು ಗಾಬರಿಗೊಳಿಸುವ ಅಂಶವೆಂದರೆ, ಜವಾಬ್ದಾರಿ ಯುತರೆನಿಸಿರುವ ರಾಜಕೀಯ ಮೂಲಗಳಿಂದಲೇ ಈ ಸಾಮಾಜಿಕ ಪಿಡುಗು ಗಳನ್ನು ಕುರಿತಂತೆ ಗಮನಾರ್ಹವಾದ ಪ್ರತಿಕ್ರಿಯೆಗಳೇ ಕೇಳಿಬರುತ್ತಿಲ್ಲ..."

"ನಮ್ಮ ಮಹಿಳೆಯರ ಶೋಚನೀಯ ಪರಿಸ್ಥಿತಿಯು ಒಂದು ರಾಷ್ಟ್ರೀಯ ನ್ಯೂನತೆಯಾಗಿದೆ. ದಲಿತರ ಸ್ಥಿತಿಗತಿಗಳು ಇಡೀ ರಾಷ್ಟ್ರವೇ ನಾಚಿಕೆಯಿಂದ ತಲೆತಗ್ಗಿಸುವ ಕಳಂಕವಾಗಿವೆ..."

*(ದಿ|| ರಾಷ್ಟ್ರಪತಿ ಕೆ. ಆರ್. ನಾರಾಯಣನ್ ಅವರು ೨೫-೧-೨೦೦೦ರಂದು ಗಣರಾಜ್ಯೋತ್ಸವದ ಸಂದರ್ಭದಲ್ಲಿ ರಾಷ್ಟ್ರವನ್ನುದ್ದೇಶಿಸಿ ಮಾಡಿದ ಭಾಷಣದಿಂದ ಆಯ್ದ ಭಾಗಗಳು)*

ದಿವಂಗತರಿಗೆ 'ಹೊಸತು' ಗೌರವ ಸೂಚಿಸುತ್ತದೆ.

- ಎಷ್ಟು ಕಾಲೇಜುಗಳಿವೆ? ಪಿಎಚ್.ಡಿ. ಪದವೀಧರ ಅಧ್ಯಾಪಕರ ಸಂಖ್ಯೆಯೆಷ್ಟು? ಇವರ ನಡುವಿರುವ ಸೇವಾಜ್ಯೇಷ್ಠತೆಯ ಕತೆಯೇನು? ಹೊಸದಾಗಿ ಡಾಕ್ಟರೇಟ್ ಪಡೆದ ಬೋಧಕರನ್ನು ಪರಿಗಣಿಸಬೇಕೇ? ಬೇಡವೇ? ಇದರಿಂದ ಉದ್ಭವ ವಾಗುವ ತಾಂತ್ರಿಕ ಮತ್ತು ಭಾವನಾತ್ಮಕ ಬಿಕ್ಕಟ್ಟುಗಳನ್ನು ನಿವಾರಿಸಿಕೊಳ್ಳಲು ಅಥವಾ ಕನಿಷ್ಠಪಕ್ಷ ಎದುರಿಸಲು ಯಾವ ಮಾರ್ಗೋಪಾಯಗಳು ನಮ್ಮ ಮುಂದಿವೆ?
- ಪ್ರಿನ್ಸಿಪಾಲರಾಗಲು ಪಿಎಚ್.ಡಿ. ಪದವಿ ಮುಖ್ಯವೋ? ಸೇವಾನುಭವ ಮತ್ತು ಸೇವಾಹಿರಿತನ ಮುಖ್ಯವೋ?
- ತನಗಿಂತ ಹಿರಿಯರಾದ ಬೋಧಕವೃಂದವನ್ನು ಪ್ರಿನ್ಸಿಪಾಲರಾದವರು (ಅವರಿಗಿಂತ ಕಿರಿಯರಾಗಿದ್ದರೆ) ಆಡಳಿತ ನಡೆಸುವಾಗ ಎದುರಿಸಬೇಕಾದ ಮುಜುಗರ – ಇದೊಂದರಿಂದ ಉಂಟಾಗುವ ವ್ಯಕ್ತಿವೈಮನಸ್ಯ, ಪ್ರತಿಷ್ಠೆಗಳು ಒಟ್ಟು ಶೈಕ್ಷಣಿಕ ವಲಯದ ಮೇಲೆ ಬೀರುವ ಪರಿಣಾಮ?
- ಶಿಕ್ಷಣ ರಂಗದಲ್ಲಿ ಸಂಶೋಧನೆಗೆ ಒತ್ತು ನೀಡಲು ಇದೇ ಮಾರ್ಗವನ್ನು ಅನುಸರಿಸುವುದು ಅನಿವಾರ್ಯವಾಗಿದೆಯೇ? ಇದರಿಂದಾಗುವ ಸಾಧಕಗಳು, ಬಾಧಕಗಳಿಗಿಂತ ಗಣನೀಯವೇ? ಇಂಥ ತೊಡಕುಗಳನ್ನು ಇನ್ನೂ ಬೆಳೆಸಬಹುದು.

* * *

ನಿಜಸಂಗತಿಯೆಂದರೆ, ಯುಜಿಸಿ ಶಿಫಾರಸ್ಸುಗಳು, ಕಾಲೇಜು ಶಿಕ್ಷಣ ಇಲಾಖೆಯ ನೀತಿ ನಿರ್ದೇಶನಗಳು ಮತ್ತು ಆಯಾ ವಿಶ್ವವಿದ್ಯಾನಿಲಯಗಳ ನಿಯಮಾವಳಿಗಳು – ಈ ಮೂರಕ್ಕೂ ಅಂತರ್‌ಸಂಬಂಧ ಮತ್ತು ಅನುಸಂಧಾನಗಳ ಕೊರತೆಯಿದೆ. ಶೈಕ್ಷಣಿಕ ಕ್ಷೇತ್ರದ ಇಂಥ ದೂರಗಾಮೀ ಸವಲತ್ತುಪೂರ್ವಕ ಸಂಶೋಧನೆಗಳು ಮತ್ತು ಪ್ರಾಧಿಕಾರ ವಿಧಿಸುವ ಷರತ್ತುಗಳು ಒಂದು ರೀತಿಯಲ್ಲಿ ಮೈಮರೆತು, ವಿಸ್ಮೃತಿಗೊಂಡ ಯಂತ್ರವನ್ನು ಚಾಲೂ ಮಾಡಿದಂತೆ. ಈ ಪರಿಯ ಕಾರ್ಯಯೋಜನೆಗಳಿಂದ ಬೋಧಕರಲ್ಲಿ ಹೊಸ ಉತ್ಸಾಹ-ಹುಮ್ಮಸ್ಸು ಬರುವುದೇನೋ ದಿಟ. ಆದರೆ ಇದಕ್ಕೆ ಪೂರಕವಾಗಿ ಆಡಳಿತಾತ್ಮಕ ವ್ಯವಸ್ಥೆ ಎಷ್ಟರಮಟ್ಟಿಗೆ ಸಹಕಾರಿಯಾಗಿ ಬೆನ್‌ಬಲ ನೀಡಿದೆ?

- ಅಧ್ಯಾಪಕರು ಸಂಶೋಧನಾ ಕಾರ್ಯ ನಿರತರಾಗಲು ಅನುಮತಿ ಕೇಳುತ್ತಾ ಕಾಯಬೇಕು.
- ಪಿಎಚ್.ಡಿ.ಯೋತ್ತರ ಸಂಶೋಧನೆ ನಡೆಸಲೆಂದು ಹೊರಟವರಿಗೆ – ಉಳಿದ ಸೌಲಭ್ಯ, ಪ್ರೋತ್ಸಾಹಗಳ ಮಾತಿರಲಿ – ಅನುಮತಿಸಲು ಕೂಡ ವರ್ಷಗಳು ಬೇಕು. ಈ ಪ್ರಕ್ರಿಯೆ ತೀರಾ ವಿಳಂಬಕಾರಿ, ಬಿಡುವಿನ ಅವಧಿಯಲ್ಲಿ ಕಾರ್ಯಮಗ್ನರಾಗು ತ್ತೇವೆಂದು ಪ್ರಮಾಣಿಸಿದರೂ!
- ಪದವಿ ಕಾಲೇಜುಗಳ ಡಾಕ್ಟರೇಟ್ ಬೋಧಕರು ಸಂಶೋಧನಾ ಮಾರ್ಗದರ್ಶಕ ರಾಗುವ ಅರ್ಹತೆಯನ್ನು ಅಕ್ಷರಶಃ ಕಿತ್ತುಕೊಳ್ಳಲಾಗಿದೆ. ಆಸಕ್ತರು ಮಾರ್ಗದರ್ಶಕರ ಕೊರತೆಯಿಂದ ಬಳಲಬೇಕಾಗಿದೆ. ಇನ್ನು ತಮ್ಮ ಪಾಡಿಗೆ ತಾವು ಇಂಥ ಕೆಲಸಗಳನ್ನು ಕೈಗೊಳ್ಳಬೇಕೆಂಬುದು ಗುರು ಮತ್ತು ಗುರಿ – ಎರಡೂ ಇಲ್ಲದ ಬರಿ ನೆರಳು ಅಷ್ಟೇ.

ಇನ್ನು ಪ್ರಿನ್ಸಿಪಾಲರ ಹುದ್ದೆಗೆ ನೇರ ನೇಮಕಾತಿ ವಿಧಾನ ಅನುಸರಿಸುವ ಸಲಹೆಯನ್ನು ಸರ್ಕಾರ ಪರಿಶೀಲಿಸುತ್ತಿದೆಯೆಂಬ ಗಾಳಿಸುದ್ದಿ! ಪ್ರೌಢಶಾಲೆಗಳ ಮುಖ್ಯೋಪಾಧ್ಯಾಯ ಹುದ್ದೆಗೆ ಕೆಇಎಸ್ ಪದವೀಧರರನ್ನು ಪರಿಗಣಿಸಿದ ಮಾದರಿಯಲ್ಲೇ! ಇದೆಷ್ಟು ಸತ್ಯವೋ? ಸಾಧ್ಯವೋ...? ಅಂತೂ ಈ ವಿಚಾರಗಳು ಚರ್ಚೆಗೆ, ಟೀಕೆಗೆ, ವಾದವಿವಾದಗಳಿಗೆ ಸಾಕಷ್ಟು ಗ್ರಾಸ ಒದಗಿಸಿವೆ. (ಪ್ರಸ್ತುತ ತಹಸೀಲ್ದಾರ್ ಹುದ್ದೆಗೆ ಇಂಥ ನೇರ ನೇಮಕಾತಿ ವಿಧಾನ – ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಆಯುವ ಪ್ರಕ್ರಿಯೆ ಚಾಲನೆಯಲ್ಲಿದೆ.)

**ಕೊನೆಯ ಮಾತು**: ಬದಲಾವಣೆ ಜಗದ ನಿಯಮ. ಅದರಲ್ಲೂ ವಿದ್ಯಾಕ್ಷೇತ್ರದಲ್ಲಿ ಇಂತಹ ಮಾರ್ಪಾಡುಗಳು ಜಡತೆಯನ್ನು ಹೋಗಿಸಿ ಹೊಸ ಆಲೋಚನೆ-ಹೊಸ ಸಂವೇದನೆಗಳನ್ನು ಮೈಗೂಡಿಸಿಕೊಳ್ಳಲು ಬೇಕೇಬೇಕು. ಆದರೆ, ಸಾರಾಸಾರ ವಿವೇಚನೆ ಮತ್ತು ದೂರದೃಷ್ಟಿಗಳ ಮುಖೇನ ಅನುಷ್ಠಾನಗೊಳ್ಳಬೇಕಷ್ಟೇ. ಈ ಆಡಳಿತಾತ್ಮಕ ಸಂಗತಿಯ ಅಂತರಂಗವು ಕೋಲಾಹಲ-ಹಾಲಾಹಲಗಳಿಂದ ಕೂಡಿದೆಯೆಂಬುದು ತಂತಾನೇ ಸ್ಪಷ್ಟ. ಯಾರಿಗೂ ನೋವಾಗದಂತೆ, ಮುಜುಗರವಾಗದಂತೆ ಎಚ್ಚರ ಹಾಗೂ ವಿವೇಕಗಳ ಕೈಹಿಡಿದು, ಹೆಜ್ಜೆಯಿಡಬೇಕಿದೆ. ಏಕೆಂದರೆ, ಇದು ಕೇವಲ ಆಡಳಿತಾತ್ಮಕ ವಿಚಾರವಲ್ಲ; ಉನ್ನತ ವಿದ್ಯಾಕ್ಷೇತ್ರದ ಅದರಲ್ಲೂ ಜ್ಞಾನಮೂಲ ಶಿಕ್ಷಣರಂಗದ ಏಳುಬೀಳಿನ ಪ್ರಶ್ನೆ. ಸಿಬ್ಬಂದಿವರ್ಗದ ಮನಃಸ್ಥೈರ್ಯ-ಸೌಹಾರ್ದತೆ-ಸ್ವಂತಿಕೆಗಳಿಗೇ ಸವಾಲು.

ಎಚ್. ಎನ್. ಮಂಜುರಾಜ್
ಕನ್ನಡ ಉಪನ್ಯಾಸಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೃಷ್ಣರಾಜನಗರ - ೫೭೧೬೦೨, ಮೈಸೂರು ಜಿಲ್ಲೆ



ಚಿತ್ರಕೃಪೆ : ಉಷಾಕಿರಣ

# ಕನ್ನಡ ಪರ ಹೋರಾಟ

## ಒಂದು ಚಿಂತನೆ

**ಮನ್ವಂತರದ ಹಾದಿಯಲ್ಲಿರುವ ಕನ್ನಡ ಜನತೆಗೆ, ಜಡಸ್ಥಿತಿ ತಲುಪುತ್ತಿರುವ ಕನ್ನಡ ಸಾಂಸ್ಕೃತಿಕ ಪರಂಪರೆಗೆ, ಕ್ರಮೇಣ ಜನರ ದೈನಂದಿನ ಜೀವನದಿಂದ ಮರೆಯಾಗುತ್ತಿರುವ ಕನ್ನಡಭಾಷೆಗೆ, ಸ್ಥಿತಿಸ್ಥಾಪಕತ್ವವನ್ನು ಕಳೆದುಕೊಳ್ಳುತ್ತಿರುವ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ, ಜಾಗತೀಕರಣದಿಂದ ಹಾನಿಗೊಳಗಾಗಿರುವ ಕರ್ನಾಟಕದ ಸಾಮಾಜಿಕ-ಆರ್ಥಿಕ ಚೌಕಟ್ಟಿಗೆ ಮತ್ತು ದೇಶೀ ಸಂಸ್ಕೃತಿಯಿಂದ ವಿಮುಖರಾಗುತ್ತಿರುವ ಕನ್ನಡ ಯುವಜನತೆಗೆ ಕಾಯಕಲ್ಪ ತೋರಲು ಕನ್ನಡಪರ ಸಂಘಟನೆಗಳು ಮಾತ್ರವಲ್ಲದೆ ಇಡೀ ಕರ್ನಾಟಕದ ಜನತೆ ಸಕ್ರಿಯವಾಗಿ ಭಾಗವಹಿಸಬೇಕಾಗಿದೆ.**

**ನಾ. ದಿವಾಕರ**

ಕನ್ನಡ ಪರ ಹೋರಾಟದ ಬಗ್ಗೆ ಕನ್ನಡಿಗರಲ್ಲಿ ಸಾಕಷ್ಟು ಗೊಂದಲಗಳಿರುವುದು ಇತ್ತೀಚಿನ ದಿನಗಳಲ್ಲಿ ಸ್ಪಷ್ಟವಾಗುತ್ತಿದೆ. ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಈ ಪ್ರಶ್ನೆಗಳು ಉದ್ಭವಿಸುತ್ತಿರುವುದು ಸಹಜವೂ, ಸ್ವಾಭಾವಿಕವೂ ಆಗಿದ್ದು, ಕಳೆದ ೫೦ ವರ್ಷಗಳ ಏಕೀಕೃತ ಕರ್ನಾಟಕದ ಇತಿಹಾಸದಲ್ಲಿ ಕನ್ನಡ ಭಾಷೆ, ಸಂಸ್ಕೃತಿ ಮತ್ತು ಕಲಾ ಸಾಹಿತ್ಯ ಪ್ರಕಾರಗಳಲ್ಲಿ ಉಂಟಾಗಿರುವ ಆಮೂಲಾಗ್ರ ಪರಿವರ್ತನೆ, ಅಭಿವೃದ್ಧಿ ಮತ್ತು ಮುನ್ನಡೆಗಳನ್ನು ಅವಲೋಕಿಸುವ ಸಂದರ್ಭ ಇಂದು ಒದಗಿ ಬಂದಿದೆ ಎನ್ನಬಹುದು. ಈ ಸಂದರ್ಭದಲ್ಲಿ ಸಾರ್ವಜನಿಕರಲ್ಲಿ ಉದ್ಭವಿಸುವ ಮುಖ್ಯ ಪ್ರಶ್ನೆಗಳೆಂದರೆ (೧) ಭಾಷಾ ಪ್ರೇಮ-ಭಾಷಾ ವಿರೋಧ, (೨) ಕನ್ನಡ ಪರ ಸಂಘಟನೆಗಳ ಹೋರಾಟದ ವೈಖರಿ ಮತ್ತು ನಿಲುವುಗಳು, (೩) ಜಾಗತೀಕರಣದ ಸಂದರ್ಭದಲ್ಲಿ ಆಂಗ್ಲ ಭಾಷಾ ಕಲಿಕೆ ಮತ್ತು ಕನ್ನಡ ಭಾಷೆಯ ಸ್ಥಾನಮಾನ, (೪) ಸಿನಿಮಾ ರಂಗ ಮತ್ತು ಕನ್ನಡ ಭಾಷೆಯ ಸೂಕ್ಷ್ಮ ಸಂಬಂಧಗಳು ಮತ್ತು (೫) ರಾಜ್ಯೋತ್ಸವದ ಆಚರಣೆ ಹೇಗಿರಬೇಕು ಎಂಬ ಜಿಜ್ಞಾಸೆ. ಅನೇಕ ಸಾಹಿತ್ಯಪ್ರಕಾರಗಳಲ್ಲಿ ಈ ಪ್ರಶ್ನೆಗಳು ವ್ಯಕ್ತವಾಗಿದ್ದು, ಹಲವಾರು ವಿಭಿನ್ನ ಅಭಿಪ್ರಾಯಗಳೂ ಹೊರಹೊಮ್ಮಿವೆ. ಕರ್ನಾಟಕ ಸರ್ಕಾರವು ಪ್ರಾಥಮಿಕ ಹಂತದಿಂದ ಆಂಗ್ಲಭಾಷಾ ಕಲಿಕೆಯ ಪ್ರಸ್ತಾಪ ಮಾಡಿದ ನಂತರದಲ್ಲಿ ಈ ಕುರಿತ ಚರ್ಚೆಗಳು ಗಂಭೀರ ಸ್ವರೂಪ ತಾಳಿದ್ದು, ಇನ್ನೂ ವಾದ ವಿವಾದಗಳಲ್ಲೇ ಸಿಲುಕಿದೆ. ಇಲ್ಲಿ ಸ್ಪಷ್ಟಪಡಿಸಬೇಕಾದ ಒಂದು ಅಂಶವೆಂದರೆ, ಈ ಚರ್ಚೆಯಲ್ಲಿ ಅಂತಿಮ ಸತ್ಯ ಮೂಡಿಬರಲು ಸಾಧ್ಯವೇ ಇಲ್ಲ. ಆದಾಗ್ಯೂ ವಸ್ತುನಿಷ್ಠವಾಗಿ ವಿಶ್ಲೇಷಿಸಲು ಸಾಧ್ಯವಿದೆ.

ಮೊದಲನೆಯ ಪ್ರಶ್ನೆ, ಭಾಷಾ ಪ್ರೇಮ – ಭಾಷಾ ವಿರೋಧವನ್ನು ಕುರಿತದ್ದಾಗಿದೆ. ಕನ್ನಡ ಭಾಷಾ ಬೆಳವಣಿಗೆಯ ದೃಷ್ಟಿಯಿಂದ ನೋಡಿದರೆ ಆಂಗ್ಲಭಾಷಾ ವಿರೋಧವಾಗಲೀ, ಅನ್ಯಭಾಷಾ ಪ್ರೇಮವಾಗಲೀ ಗಂಭೀರವಾಗಿ ಪರಿಗಣಿಸುವಂತಹ ವಿಷಯಗಳೇ ಅಲ್ಲ. ಈ ಎರಡರಿಂದಲೂ ಕನ್ನಡಕ್ಕೆ ಕಂಟಕವಿಲ್ಲ ಎಂದೇ ನನ್ನ ಅನಿಸಿಕೆ. ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ನೆರೆರಾಜ್ಯದ ಭಾಷೆಗಳನ್ನು ಅವಲಂಬಿಸುವ ಅವಶ್ಯಕತೆ ಕನ್ನಡಭಾಷೆಗೆ ಇಲ್ಲ ಎಂದು ನಿರ್ದಾಕ್ಷಿಣ್ಯವಾಗಿ ಹೇಳಬಹುದು. ಸಾವಿರಾರು ವರ್ಷಗಳ ಭವ್ಯ ಇತಿಹಾಸವಿರುವ ನಮ್ಮ ಭಾಷೆಗೆ ತನ್ನದೇ ಆದ ಸಂಸ್ಕೃತಿ ಹಾಗೂ ಪರಂಪರೆ ಇರುವುದಲ್ಲದೆ, ಅಗಾಧ ಮತ್ತು ಪಾಂಡಿತ್ಯಪೂರ್ಣ ಸಾಹಿತ್ಯದ ಅಡಿಪಾಯವೂ ಇದೆ. ಈ ರೀತಿ ಅನ್ಯ ಭಾಷೆಗಳಿಂದ ಕನ್ನಡಕ್ಕೆ ಕುತ್ತು ಬರುವುದೆಂಬ ಕಲ್ಪನೆಗಳನ್ನು ಜನರ ಮನಸ್ಸಿನಲ್ಲಿ ಬಿತ್ತಿ, ಭೇದ ಭಾವಗಳನ್ನು ಉಂಟುಮಾಡುವುದು ಪ್ರಜಾತಾಂತ್ರಿಕ ದೃಷ್ಟಿಯಿಂದ ಸ್ವಾಗತಾರ್ಹವಲ್ಲ. ಆದರೆ ಈ ರೀತಿಯ ಘೋಷಣೆಗಳನ್ನೇ ಬಂಡವಾಳವನ್ನಾಗಿಸಿಕೊಂಡು ಹೋರಾಟ ನಡೆಸುತ್ತಿರುವವರೇ ಇಂದು ಕನ್ನಡಪರ ಹೋರಾಟದ ಮುಂಚೂಣಿಯಲ್ಲಿ ಹೆಚ್ಚಾಗಿರುವುದರಿಂದ, ಕನ್ನಡಪರ ಹೋರಾಟಗಳು ಭಾಷಾ ಪ್ರೇಮ – ಭಾಷಾ ವಿರೋಧಗಳ ಗುಂಗಿನಲ್ಲೇ ಮುಳುಗಿಹೋಗಿವೆ. ಹಾಗಾಗಿಯೇ ಇಂದು ಕನ್ನಡ ಪರ ಹೋರಾಟಗಳು ನವೆಂಬರ್ ೧ರಂದು ಆಚರಿಸುವ ಉತ್ಸವಗಳಿಗೆ ಮಾತ್ರ ಸೀಮಿತಗೊಂಡಿವೆ. ಈ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಪ್ರಜ್ಞಾವಂತ ಕನ್ನಡಿಗರು ಯೋಚಿಸಬೇಕಾದ ಅಂಶವೆಂದರೆ, ಕನ್ನಡ ಭಾಷೆಯ ಅಳಿವು-ಉಳಿವು ಅಡಗಿರುವುದು, ಮಾತುಗಳಲ್ಲೋ ಅಥವಾ ಕೃತಿಯಲ್ಲೋ ಎಂಬುದಾಗಿದೆ. ಕನ್ನಡ ಭಾಷೆ ಅಳಿಸಿಹೋಗುತ್ತಿದೆ, ವಿಶ್ವದ ನಶಿಸಿ ಹೋಗುತ್ತಿರುವ ಭಾಷೆಗಳಲ್ಲಿ ಒಂದಾಗಿದೆ ಎಂದೆಲ್ಲಾ ಪ್ರಚಾರ ಮಾಡಿದವರಿಗೆ ತಮ್ಮ ಮಾತಿನಲ್ಲಿ ಆಧಾರವಿಲ್ಲ ಎಂದು ಅರಿವಾಗುವ ಹೊತ್ತಿಗಾಗಲೇ ಸಾಕಷ್ಟು ಆತಂಕ ಮೂಡಿಸಿದ್ದುದನ್ನು ನೋಡಿದ್ದೇವೆ. ಇದೇ ರೀತಿ, ಕರ್ನಾಟಕದಲ್ಲಿ ಕನ್ನಡ ಭಾಷೆಗೆ ಉಳಿಗಾಲವಿಲ್ಲ, ಪರಭಾಷಾ ದಾಳಿಯಿಂದ ಕನ್ನಡ ನಲುಗಿಹೋಗುತ್ತಿದೆ ಎಂದು ಹೇಳುವುದೂ ಆಧಾರವಿಲ್ಲದ್ದೆಂದು ಹೇಳಬಹುದು. ರಾಜಧಾನಿ ಬೆಂಗಳೂರಿನಲ್ಲಿ ಕನ್ನಡದ ಬಳಕೆ ಪ್ರಮಾಣ ಕಡಿಮೆಯಾಗಿದೆ ಎಂದಮಾತ್ರಕ್ಕೆ ಇಡೀ ರಾಜ್ಯದಲ್ಲೇ ಕನ್ನಡಕ್ಕೆ ಕುತ್ತು ಬಂದಿದೆ ಎಂದು ಹೇಳುವುದು ಬೆಂಗಳೂರು ಕೇಂದ್ರಿತ ವಾದವಾಗುತ್ತದೆ. ಆಳುವ ಪಕ್ಷಗಳು ತಮ್ಮ ಸಂಪೂರ್ಣ ರಾಜಕಾರಣವನ್ನು ಮತ್ತು ಅಭಿವೃದ್ಧಿ ಯೋಜನೆಗಳನ್ನು ಬೆಂಗಳೂರು ಕೇಂದ್ರಿತ ದೃಷ್ಟಿಕೋನದಿಂದ ನೋಡುವಂತೆ, ಕನ್ನಡ ಭಾಷಾ ಪ್ರಶ್ನೆಯನ್ನು ನೋಡಲಾಗುವುದಿಲ್ಲ. ಮಮ್ಮಿ ಡ್ಯಾಡಿ ಸಂಸ್ಕೃತಿ ರಾಜ್ಯದಾದ್ಯಂತ ಆವರಿಸಿರುವುದು ಚಿಂತೆಗೀಡುಮಾಡುವ ವಿಷಯವಾದರೂ, ಅದು ಬಹುತೇಕವಾಗಿ ಮಧ್ಯಮ ಹಾಗೂ ಮೇಲ್ವರ್ಗಕ್ಕೆ ಸೀಮಿತವಾಗಿರುವುದನ್ನೂ ನಾವು ಕಾಣಬಹುದು. ಬೆಂಗಳೂರಿನಂತಹ ಕಾಸ್ಮೋಪಾಲಿಟನ್ ನಗರಗಳಲ್ಲಿ, ವಲಸಿಗರ ಹಾಗೂ ಉದ್ಯೋಗಾವಕಾಶಗಳಿಗಾಗಿ ದೇಶದ ಮೂಲೆ ಮೂಲೆಗಳಿಂದ ಬಂದು ನೆಲೆಸಿರುವವರ ಜನಸಂಖ್ಯೆ ಹೆಚ್ಚಾಗುತ್ತಿರುವುದರಿಂದ ವಿಭಿನ್ನ ಭಾಷೆಗಳು ಪ್ರಚಲಿತವಾಗಿರುವುದು ಸಹಜವೇ. ದೆಹಲಿ, ಮುಂಬಯಿ, ಹೈದರಾಬಾದ್, ಚೆನ್ನೈ ನಗರಗಳಲ್ಲೂ ಇದೇ ಸಮಸ್ಯೆ ಕಂಡುಬರುತ್ತದೆ. ಸಮಸ್ಯೆಯ ಪ್ರಮಾಣದಲ್ಲಿ ಹೆಚ್ಚು ಕಡಿಮೆ ಇರಬಹುದೇ ಹೊರತು, ಸ್ವರೂಪದಲ್ಲಿಲ್ಲ.

ಆದಾಗ್ಯೂ, ಇತ್ತೀಚಿನ ಸನ್ನಿವೇಶವನ್ನು ಅವಲೋಕಿಸುವಾಗ ಕಂಡುಬರುವ ಒಂದು ಅಂಶವೆಂದರೆ, ಸರ್ಕಾರಗಳ ದಿವ್ಯ ನಿರ್ಲಕ್ಷ್ಯದಿಂದ ಮತ್ತು ಯಾವುದೇ ಒಂದು ಭಾಷಾ ನೀತಿಯನ್ನು ಅನುಸರಿಸದಿರುವುದರಿಂದ ಗ್ರಾಮೀಣ ಪ್ರದೇಶಗಳಲ್ಲೂ ಸಹ ಆಂಗ್ಲಭಾಷಾ ಶಾಲೆಗಳ ಹಾವಳಿ ಹೆಚ್ಚಾಗಿ ಮಮ್ಮಿ ಡ್ಯಾಡಿ ಸಂಸ್ಕೃತಿ ಪಸರಿಸುತ್ತಿದೆ. ಗ್ರಾಮೀಣ ಮಕ್ಕಳು ಅತ್ತ ಕನ್ನಡವನ್ನೂ ಕಲಿಯದೆ ಇತ್ತ ಆಂಗ್ಲ ಭಾಷೆಯನ್ನೂ

ಕಲಿಯದೆ ಎಡಬಿಡಂಗಿಗಳಾಗುತ್ತಿರುವುದು ಆತಂಕಕಾರಿ ಅಂಶವಾಗಿದೆ. ಈ ನಿಟ್ಟಿನಲ್ಲಿ ಮಾತೃಭಾಷಾ ಮಾಧ್ಯಮ ಶಿಕ್ಷಣ ನೀತಿಯನ್ನು ಅನುಷ್ಠಾನಗೊಳಿಸಲು ಸರ್ಕಾರದ ಮೇಲೆ ಒತ್ತಡ ತರುವ ಕೆಲಸವನ್ನು ಕನ್ನಡ ಪರ ಸಂಘಟನೆಗಳು ಮಾಡಬೇಕಾಗಿದೆ. ಆದರೆ ಈ ಬೆಳವಣಿಗೆಗೆ ನಮ್ಮ ಸರ್ಕಾರಗಳ ನೀತಿಗಳು ಕಾರಣವೇ ಹೊರತು ಅನ್ಯಭಾಷೆಗಳಲ್ಲ. ಸಂಪರ್ಕ ಮಾಧ್ಯಮವಾಗಿ ಪರಭಾಷೆ ಉಪಯೋಗಿಸಿದ ಮಾತ್ರಕ್ಕೆ ಅಂಥವರನ್ನು ಕನ್ನಡ ದ್ರೋಹಿಗಳೆಂದು ಪರಿಗಣಿಸುವುದು ತಪ್ಪಾಗುತ್ತದೆ. ಬಹುಮುಖೀ ಸಂಸ್ಕೃತಿಯುಳ್ಳ ಸಮಾಜಗಳಲ್ಲಿ ಇವು ಸಹಜ ಪ್ರಕ್ರಿಯೆಗಳಾಗಿರುತ್ತವೆ. ಹಾಗಾಗಿ ಅತಿಯಾದ ಭಾಷಾಭಿಮಾನ ಅಥವಾ ಅನ್ಯ ಭಾಷಾ ದ್ವೇಷಗಳಿಂದ ನಮ್ಮ ಭಾಷೆಯ ಸ್ವಂತಿಕೆಯನ್ನು ಉಳಿಸಿಕೊಳ್ಳಲಾಗುವುದಿಲ್ಲ. ನೇತ್ಯಾತ್ಮಕ ದೃಷ್ಟಿಕೋನದಿಂದ ಅಥವಾ ಭಾವಾವೇಶದಿಂದ ಈ ಸಮಸ್ಯೆಯನ್ನು ವಿಶ್ಲೇಷಿಸಿದಲ್ಲಿ ಸಾಮಾಜಿಕ ಸೌಹಾರ್ದತೆಗೆ ಕುಂದು ಬರುವ ಸಾಧ್ಯತೆಗಳು ಹೆಚ್ಚಾಗುತ್ತವೆ. ಭಾಷಾ ಬೆಳವಣಿಗೆಗೆ ಭಾಷಾ ಅಧ್ಯಯನವೇ ಮೂಲಮಂತ್ರ ಎಂಬ ಅಂಶವನ್ನು ನಾವಿಂದು ಅರಿಯಬೇಕಾಗಿದೆ. ಕನ್ನಡ ಪರ ಸಂಘಟನೆಗಳು ಜನರಲ್ಲಿ ಸಾಹಿತ್ಯಾಭಿರುಚಿ ಬೆಳೆಸುವುದರ ಬಗ್ಗೆ ಚಿಂತನೆ ನಡೆಸುವುದು ಉತ್ತಮ.

ಎರಡನೆಯ ಅಂಶವೆಂದರೆ, ಪ್ರಸ್ತುತ ರಾಜ್ಯದಲ್ಲಿನ ವಿವಿಧ ಕನ್ನಡ ಪರ ಸಂಘಟನೆಗಳ ನಿಲುವುಗಳು ಮತ್ತು ಹೋರಾಟದ ಮಾರ್ಗಗಳು. ನವೆಂಬರ್ ಸಂಘಟನೆಗಳೆಂದೇ ಹೆಸರಾಗಿರುವ ಅನೇಕ ಸಂಘ ಸಂಸ್ಥೆಗಳು ರಾಜ್ಯೋತ್ಸವದ ಸಂದರ್ಭವನ್ನು ಹೊರತುಪಡಿಸಿ ಉಳಿದ ಸಮಯದಲ್ಲಿ ಯಾವುದೇ ರಚನಾತ್ಮಕವಾದ ಕನ್ನಡಪರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿಲ್ಲ. ಎಪ್ಪತ್ತರ ದಶಕದಲ್ಲಿ ಕನ್ನಡ ಸಂಘಗಳು ಕೈಗೊಳ್ಳುತ್ತಿದ್ದ ಸಾಹಿತ್ಯಕ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಇಂದಿನ ದಿನಗಳಲ್ಲಿ ಕಾಣುವುದೇ ಕಷ್ಟವಾಗಿದೆ. ಭುವನೇಶ್ವರಿಯ ಆರಾಧನೆ, ನಾಮಫಲಕಗಳು, ಬ್ಯಾನರ್‌ಗಳು, ಧ್ವಜಸ್ತಂಭಗಳು, ಪ್ರತಿಮೆಗಳಲ್ಲಿಯೇ ಕನ್ನಡವನ್ನು ಮೆರೆಸುವ ಈ ಪರಿ ಇಂದಿನ ಪರಿಸ್ಥಿತಿಗೆ ಕಾರಣವಾಗಿದೆ. ಭಾಷೆ ಬೆಳೆಯುವುದು ನಾಮ ಫಲಕ-ಧ್ವಜಸ್ತಂಭಗಳಿಂದಲ್ಲ, ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಂದ ಎಂಬ ಅಂಶವನ್ನು ನಾವಿಂದು ಅರಿಯಬೇಕಾಗಿದೆ. ಜಾಗತೀಕರಣದ ವಿಷ ವರ್ತುಲದಲ್ಲಿ ಸಿಲುಕಿ ನಶಿಸಿ ಹೋಗುತ್ತಿರುವ ಸಾಂಸ್ಕೃತಿಕ ನೆಲೆಗಳು, ದೃಶ್ಯ-ಮುದ್ರಣ ಮಾಧ್ಯಮಗಳಿಂದ ಯುವ ಜನತೆಯಲ್ಲಿ ಕ್ಷೀಣಿಸುತ್ತಿರುವ ಓದುವ ಹವ್ಯಾಸ, ನೆನೆಗುದಿಗೆ ಬೀಳುತ್ತಿರುವ ದೇಶೀ ಹಾಗೂ ಜನಪದ ಕಲೆ, ಹಿನ್ನಡೆ ಕಾಣುತ್ತಿರುವ ಸಾಹಿತ್ಯಾಭಿರುಚಿ ಮತ್ತು ಸಾಹಿತ್ಯಾಭಿವೃದ್ಧಿ, ಇವೆಲ್ಲವನ್ನೂ ಗಂಭೀರವಾಗಿ ಪರಿಗಣಿಸದಿದ್ದಲ್ಲಿ ಕನ್ನಡ ಭಾಷೆ ತಂತಾನಾಗಿಯೇ ನಶಿಸಿಹೋಗುವ ಸಾಧ್ಯತೆಗಳಿವೆ. ಈ ದೃಷ್ಟಿಯಿಂದ ಕನ್ನಡಪರ ಹೋರಾಟ ಹಮ್ಮಿಕೊಳ್ಳುವುದು ಸ್ವಾಗತಾರ್ಹವೆನಿಸುತ್ತದೆ. ಇಲ್ಲದಿದ್ದಲ್ಲಿ ಹೋರಾಟಗಳು ಕೇವಲ ಘೋಷಣೆಗಳಾಗಿಯೇ ಉಳಿದುಬಿಡುತ್ತವೆ.

ರಾಜ್ಯೋತ್ಸವದ ಸಂದರ್ಭದಲ್ಲಿ ಕೇವಲ ವೈಭವಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡುವ ಭಾರಿ ವೆಚ್ಚದ ವೇದಿಕೆ, ವಿದ್ಯುತ್ ಅಲಂಕಾರಗಳು, ಮೆರವಣಿಗೆಗಳು ಕಂಡುಬರುತ್ತವೆಯೇ ಹೊರತು ರಚನಾತ್ಮಕವಾದ ಕಾರ್ಯಕ್ರಮಗಳು ಇರುವುದು ಬಹಳ ಅಪರೂಪ. ಈ ಆಡಂಬರಗಳಿಗೆ ಹಣ ಸುರಿಯುವ ಬದಲು ಕನ್ನಡ ಪುಸ್ತಕಗಳನ್ನು ಮನೆಮನೆಗೂ ಹಂಚುವುದು, ಸಾಹಿತ್ಯಾಸಕ್ತಿ ಉಳ್ಳವರಿಗೆ ಉತ್ತಮ ಸಾಹಿತ್ಯ ಕೃತಿಗಳನ್ನು ಅಗ್ಗದ ಬೆಲೆಯಲ್ಲಿ ಒದಗಿಸುವುದು, ಸ್ಥಳೀಯ ಪ್ರತಿಭಾವಂತರಿಗೆ ಸಂಗೀತ, ಕಲೆ, ಸುಗಮ ಸಂಗೀತ, ಹಾಗೂ ಇನ್ನಿತರ ಚಟುವಟಿಕೆಗಳಲ್ಲಿ ತೊಡಗಲು ಅವಕಾಶ ನೀಡುವುದು, ಅನ್ಯ ಭಾಷಿಕರಿಗೆ ಕನ್ನಡ ಭಾಷೆ, ಸಾಹಿತ್ಯ, ಕಲೆ ಮತ್ತು ಸಂಸ್ಕೃತಿಗಳ ಪರಿಚಯ ನೀಡುವಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು, ಹೀಗೆ ಹತ್ತು ಹಲವು ಕಾರ್ಯಕ್ರಮಗಳಲ್ಲಿ ಕನ್ನಡಪರ ಸಂಘಟನೆಗಳು ಸಕ್ರಿಯವಾಗಿ ಪಾಲ್ಗೊಳ್ಳುವುದು, ಕನ್ನಡದ ಸೇವೆಯಾಗುತ್ತದೆ. ಈ ರೀತಿಯ ಕಾರ್ಯಕ್ರಮಗಳಿಗೆ ಸಾಮಾನ್ಯ ಜನರ ಬೆಂಬಲವನ್ನೂ ನಿರೀಕ್ಷಿಸಬಹುದು. ಈ ಮೊದಲೇ ಹೇಳಿದಂತೆ, ಎಪ್ಪತ್ತರ ದಶಕದಲ್ಲಿ ಕ್ರಿಯಾಶೀಲವಾಗಿದ್ದಂತೆ ಕನ್ನಡ ಸಂಘಗಳು ವಾಚನಾಲಯ ಗ್ರಂಥಾಲಯಗಳನ್ನು ಆರಂಭಿಸುವುದರಿಂದ, ಇಂದಿನ ಯುವಕರಲ್ಲಿ ಓದುವ ಹವ್ಯಾಸವನ್ನು ಬೆಳೆಸುವುದೂ ಸಾಧ್ಯವಾಗುತ್ತದೆ. ನವೆಂಬರ್ ತಿಂಗಳಲ್ಲಿ ಎಲ್ಲಾ ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರಗಳನ್ನು ಪ್ರದರ್ಶಿಸುವುದರಿಂದ ಚಿತ್ರ ನಿರ್ಮಾಪಕರಿಗೆ ಲಾಭವಾಗುವುದೇ ಹೊರತು ಕನ್ನಡ ಭಾಷೆ ಬೆಳೆಯುವುದಿಲ್ಲ. ದುರದೃಷ್ಟವಶಾತ್ ಹಲವಾರು ಕನ್ನಡ ಸಂಘಟನೆಗಳ ಬೇಡಿಕೆ ಇದೇ ಆಗಿದೆ. ತಮ್ಮ ವೀರಾವೇಶಗಳನ್ನು ಬದಿಗಿಟ್ಟು, ಭಾವಾತಿರೇಕಗಳನ್ನು ಮರೆತು ಭಾಷಾ ಬೆಳವಣಿಗೆಯ ಬಗ್ಗೆ ಗಮನ ನೀಡುವುದು ಕನ್ನಡಪರ ಸಂಘಟನೆಗಳ ಆದ್ಯತೆಯಾದಲ್ಲಿ ರಾಜ್ಯೋತ್ಸವದ ಆಚರಣೆ ಅರ್ಥಪೂರ್ಣವಾಗಿರುತ್ತದೆ. ಯುವ ಜನಾಂಗದಲ್ಲಿ ಓದುವ ಹವ್ಯಾಸ, ಸಾಹಿತ್ಯಾಭಿರುಚಿ ಬೆಳೆಸದೆಯೇ, ಸಿನೆಮಾ ರಂಗವನ್ನೇ ಕೇಂದ್ರಬಿಂದುವನ್ನಾಗಿಸಿದಲ್ಲಿ, ಭಾಷೆ ಸೊರಗಿಹೋಗಿ ಅದರ ಬೆಳವಣಿಗೆ ಕುಂಠಿತವಾಗುತ್ತದೆ.

ಮೂರನೆಯ ಅಂಶವೆಂದರೆ, ಜಾಗತೀಕರಣದ ಹಿನ್ನೆಲೆಯಲ್ಲಿ ಕನ್ನಡ ಭಾಷೆಯ ಸ್ಥಾನಮಾನ ಮತ್ತು ಆಂಗ್ಲಭಾಷಾ ಕಲಿಕೆ. ಪ್ರಾಥಮಿಕ ಹಂತದಿಂದ ಆಂಗ್ಲಭಾಷೆಯನ್ನು ಒಂದು ಪಠ್ಯವಿಷಯವನ್ನಾಗಿ ಬೋಧಿಸುವ ಕರ್ನಾಟಕ ಸರ್ಕಾರದ ನಿಲುವಿಗೆ ಪರ ವಿರೋಧ ಚರ್ಚೆಗಳು ನಡೆಯುತ್ತಲೇ ಇದ್ದು, ಕನ್ನಡಪರ ಸಂಘಟನೆಗಳು ಸರ್ಕಾರದ ನಿಲುವನ್ನು ತೀವ್ರವಾಗಿ ವಿರೋಧಿಸುತ್ತಿವೆ. ಬುದ್ಧಿಜೀವಿಗಳಲ್ಲೂ ಸಹ ತೀವ್ರ ಭಿನ್ನಾಭಿಪ್ರಾಯ ಏರ್ಪಟ್ಟಿದ್ದು, ಜನಸಾಮಾನ್ಯರ ಅಭಿಪ್ರಾಯಗಳು ನಗಣ್ಯವಾಗುತ್ತಿರುವುದು ಕಂಡು ಬರುತ್ತಿದೆ. ಆದರೆ ಈ ವಿಷಯದಲ್ಲಿ ಕನ್ನಡಪರ ಸಂಘಟನೆಗಳ ನಿಲುವು ಅಸ್ಪಷ್ಟವಾಗಿದ್ದು, ಹಲವಾರು ಸಂದರ್ಭಗಳಲ್ಲಿ ಭಾವನೆಗಳಿಗೆ ಪ್ರಾಮುಖ್ಯತೆ ನೀಡುತ್ತಿರುವುದು ಕಂಡುಬರುತ್ತಿದೆ. ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶವೆಂದರೆ, ಪ್ರಸ್ತುತ ಸನ್ನಿವೇಶದಲ್ಲಿ ಆಂಗ್ಲಭಾಷೆಯನ್ನು ಒಂದು ಪಠ್ಯ ವಿಷಯವನ್ನಾಗಿ ಪ್ರಾಥಮಿಕ ಹಂತದಿಂದ ಬೋಧಿಸುವುದರಿಂದ ಜನಸಾಮಾನ್ಯರಿಗೆ, ಗ್ರಾಮೀಣ ಕ್ಷೇತ್ರದ ಮಕ್ಕಳಿಗೆ ಭವಿಷ್ಯದ ಹಾದಿ ಸುಗಮವಾಗುತ್ತದೆ. ಕೇವಲ ನೌಕರಿ ದೊರೆಯುವ ದೃಷ್ಟಿಯಿಂದ ಈ ವಿವಾದವನ್ನು ವಿಶ್ಲೇಷಿಸಲಾಗುವುದಿಲ್ಲ. ಪ್ರಸ್ತುತ ಪರಿಸ್ಥಿತಿಯಲ್ಲಿ ಆಂಗ್ಲಭಾಷೆಯನ್ನು ಒಂದು ಸಂಪರ್ಕ ಭಾಷೆಯಾಗಿ ಕಲಿಸುವುದರಿಂದ ಕನ್ನಡ ಭಾಷಾ ಬೆಳವಣಿಗೆಗೆ ಯಾವುದೇ ಕುತ್ತು ಬರುವುದಿಲ್ಲ. ನಾವು ಭಾರತೀಯ ಸಂದರ್ಭದಲ್ಲಿ ಯೋಚಿಸುವಾಗ, ಅಮೆರಿಕಾ, ಜಪಾನ್ ಅಥವಾ ಇತರೆ ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಹೋಲಿಸಿಕೊಳ್ಳಲಾಗದು. ಕೊರಿಯಾ, ಜಪಾನ್, ಹಾಂಕಾಂಗ್, ಅಮೆರಿಕಾಗಳಲ್ಲಿ ಕೇವಲ ತಂತ್ರಜ್ಞಾನವನ್ನು ಸೃಷ್ಟಿಸಲಾಗುತ್ತಿದೆಯೇ ಹೊರತು ತಂತ್ರಜ್ಞರನ್ನು ಸೃಷ್ಟಿಸುತ್ತಿಲ್ಲ. ಆದರೆ, ಭಾರತದಂತಹ ತೃತೀಯ ವಿಶ್ವದ ರಾಷ್ಟ್ರಗಳಲ್ಲಿ, ನಿರುದ್ಯೋಗದ ಸಮಸ್ಯೆ ಇದೆ, ತಂತ್ರಜ್ಞಾನವನ್ನು ಕರಗತ ಮಾಡಿಕೊಳ್ಳಬೇಕಾದ ಅವಶ್ಯಕತೆ ಇದೆ. ಕೇವಲ ಕೀಲಿಮಣೆ ನಿರ್ವಹಿಸುವುದನ್ನು ಕಲಿಯುವುದರಿಂದ ಏನೂ ಪ್ರಯೋಜನವಾಗದು. ಶರವೇಗದಲ್ಲಿ ಮುನ್ನುಗ್ಗುತ್ತಿರುವ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಭಾರತ ಗಣನೀಯವಾಗಿ ಸಾಧಿಸಬೇಕಾದರೆ ಇಂದು ಆಂಗ್ಲಭಾಷೆಯ ಆವಶ್ಯಕತೆ ಅನಿವಾರ್ಯ. ಅದರಲ್ಲೂ




''ಅವ್ವ'' ಕುರಿತ ಕವಿಗೋಷ್ಠಿಯಲ್ಲಿ
ಭಾಗವಹಿಸಿದ್ದ ಮಗ ಮನೆಗೆ ಮರಳಿದ್ದ
ಒಂದೇ ಸಮನೆ ಒಟಗುಟ್ಟುತ್ತಿದ್ದ.
''ಅಮ್ಮ'' ನಿನ್ನ ಹಾಲಿನ ಋಣ ತೀರಿಸುವೆ
ಇಂದು ನಿನ್ನ ಹಾಲಿನ ಋಣ ತೀರಿಸೇ ಬಿಡುವೆ
ಎಂದು ಒಂದೇ ಸಮನೆ ಹಲುಬುತ್ತಿದ್ದ ಮಗ.
ತಾಯಿ ಮೆಲ್ಲನೆ ತಗ್ಗಿದ ಧ್ವನಿಯಲ್ಲಿ ಉಲಿದಳು
ಮಗ ನನ್ನ ಹಾಲಿನ ಋಣ ಹಾಗಿರಲಿ
ಮೊದಲು ಹಾಲಿನವನ ಬಿಲ್ಲು ಪಾವತಿಸು.

ಕೆ. ಷರೀಫಾ
ಎ. ಪಿ. ಎಂ. ಸಿ., ಹರಿಹರ - ೫೭೭ ೬೦೧, ದಾವಣಗೆರೆ ಜಿಲ್ಲೆ

ಆಂಗ್ಲಭಾಷಾ ಶಿಕ್ಷಣದಿಂದ ವಂಚಿತರಾಗಿ ಪರದಾಡುತ್ತಿರುವ ಗ್ರಾಮೀಣ ಯುವಜನತೆಗೆ ಇದು ಅತ್ಯವಶ್ಯವಾಗಿದೆ. ಮನ್ವಂತರದ ಹಾದಿಯಲ್ಲಿರುವ ಸಮಾಜಕ್ಕೆ ಈ ಪ್ರಕ್ರಿಯೆ ಸಲಕರಣಾ ವಿಧಾನವಾದರೂ, ಇದರಿಂದ ಕನ್ನಡ ಭಾಷೆಗಾಗಲೀ, ಕನ್ನಡ ಸಂಸ್ಕೃತಿಗಾಗಲೀ ಧಕ್ಕೆ ಉಂಟಾಗುವುದಿಲ್ಲ. ಬದಲಾಗಿ ಕನ್ನಡಿಗರು ಜಾಗತಿಕ ಮಟ್ಟದಲ್ಲಿ ಸಾಧನೆ ಪ್ರದರ್ಶಿಸಲು ಸಾಧ್ಯವಾಗುತ್ತದೆ. ಹಾಗಾಗಿ, ಕನ್ನಡಪರ ಸಂಘಟನೆಗಳು ಈ ನಿಟ್ಟಿನಲ್ಲಿ ತಮ್ಮ ದೃಷ್ಟಿಕೋನವನ್ನು ಬದಲಿಸಿ, ವೈಜ್ಞಾನಿಕ ವಿಧಾನದಲ್ಲಿ ವಿಶ್ಲೇಷಣೆ ಮಾಡುವುದು ಅತ್ಯವಶ್ಯಕ ವಾಗಿದೆ. ಜಾಗತೀಕರಣದ ನೇತ್ಯಾತ್ಮಕ ಪರಿಣಾಮಗಳಿಗೆ ಈ ವಿವಾದವನ್ನು ತುಲನೆ ಮಾಡಿನೋಡುವುದು ''ಮರಗಳಿಗಾಗಿ ಅರಣ್ಯವನ್ನು ಕಳೆದುಕೊಂಡಂತಾಗುತ್ತದೆ.''

ನಾಲ್ಕನೆಯ ಅಂಶವೆಂದರೆ, ಕನ್ನಡ ಸಿನೆಮಾ ರಂಗ ಮತ್ತು ಕನ್ನಡ ಭಾಷಾ ಪ್ರಶ್ನೆ. ಬಹುತೇಕ ಸಂದರ್ಭಗಳಲ್ಲಿ ಈ ಎರಡರ ನಡುವಿನ ಅವಿನಾಭಾವ ಸಂಬಂಧಗಳು ಕರ್ನಾಟಕದ ಭಾಷಾ ರಾಜಕಾರಣವನ್ನು ನಿರ್ಧರಿಸುತ್ತವೆ. ಚಲನಚಿತ್ರರಂಗದ ಆಗುಹೋಗು ಗಳನ್ನೇ ಕನ್ನಡದ ಅಳಿವು ಉಳಿವಿನ ಪ್ರಶ್ನೆ ಎಂಬುದಾಗಿ ಪರಿಗಣಿಸುವ ಕನ್ನಡ ಸಂಘಟನೆಗಳ ಕಾರ್ಯವೈಖರಿಯು ಕನ್ನಡ ಭಾಷಾ ಬೆಳವಣಿಗೆಯ ಕುಂಠಿತಕ್ಕೆ ಕಾರಣವಾಗಿದೆಯೆಂದು ಹೇಳಿದರೆ ತಪ್ಪಾಗಲಾರದು. ಹಾಗೆ ನೋಡಿದರೆ ಕನ್ನಡ ಚಿತ್ರರಂಗವು ಯಾವುದೇ ರೀತಿಯಲ್ಲೂ ಭಾಷಾ ಅಭಿವೃದ್ಧಿಗೆ ಪೂರಕವಾಗಿ ಸ್ಪಂದಿಸಿಲ್ಲ ಅಥವಾ ಇತ್ತೀಚಿನ ದಿನಗಳಲ್ಲಿ ಕನ್ನಡ ಸಾಹಿತ್ಯವನ್ನು ಚಿತ್ರರಂಗದ ಅಭಿವೃದ್ಧಿಗಾಗಿ ಉಪಯೋಗಿಸಿಕೊಂಡಿಲ್ಲ. ಆದರೂ ಇಡೀ ಕನ್ನಡಪರ ಹೋರಾಟವು ಸಿನೆಮಾ ಕೇಂದ್ರಿತವಾಗಿರುವುದು ದುರದೃಷ್ಟಕರ. ಸಮಾಜದ ನೈತಿಕ ಮೌಲ್ಯಗಳನ್ನು ಹಾಳುಗೆಡವುತ್ತಿರುವ ಇತ್ತೀಚಿನ ಸಿನೆಮಾಗಳು ಹಿಂಸೆ, ಅಸಹನೆ, ಅಶ್ಲೀಲತೆ ಮತ್ತು ಪಾಶ್ಚಿಮಾತ್ಯ ಗ್ರಾಹಕ ಸಂಸ್ಕೃತಿಯನ್ನು ಜನಮನದಲ್ಲಿ ಬಿತ್ತುತ್ತಿವೆ. ಇದಕ್ಕೆ ವಿರುದ್ಧವಾಗಿ ಸಾಹಿತ್ಯ, ಕಲೆ, ನಾಟಕ ಮತ್ತಿತರ ಕ್ಷೇತ್ರಗಳಲ್ಲಿ ಜನಪರ ದೇಶೀ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಪ್ರಯತ್ನ ಸ್ವಲ್ಪಮಟ್ಟಿಗಾದರೂ ಜರುಗುತ್ತಿದೆ. ಕನ್ನಡಪರ ಸಂಘಟನೆಗಳು ಈ ಎರಡರ ಪೈಕಿ ಯಾವುದರ ಪರ ಕಾರ್ಯ ನಿರ್ವಹಿಸಬೇಕು ಎಂಬುದನ್ನು ಆಯ್ಕೆ ಮಾಡಿಕೊಳ್ಳಬೇಕು. ಯಾವುದೇ ಉನ್ನತ ಪ್ರಶಸ್ತಿ ಗಳಿಸಿದ ಸಿನೆಮಾ ನಟರಿಗೆ ದೊರಕುವ ಸ್ಥಾನಮಾನ, ಸನ್ಮಾನಗಳು, ಸಾಹಿತ್ಯ-ಕಲೆ-ನಾಟಕ-ಜನಪದ ಕಲಾವಿದರಿಗೆ ಕನ್ನಡ ಸಂಘಟನೆಗಳಿಂದ ದೊರೆಯುವುದಿಲ್ಲ ಎಂಬ ಅಂಶವು ಅರಗಿಸಿಕೊಳ್ಳಲಾಗದ ಕಟು ವಾಸ್ತವ. ರಾಜ್ಯೋತ್ಸವದ ಆಚರಣೆಯ ಸಂದರ್ಭದಲ್ಲಿಯೂ ಇದು ಕಣ್ಣಿಗೆ ರಾಚುವಂತೆ ವ್ಯಕ್ತವಾಗುತ್ತದೆ. ಸನ್ಮಾನ, ಬಿರುದು, ಬಾವಲಿಗಳು, ಪ್ರಶಸ್ತಿ ಕಿರೀಟಗಳು, ಎಲ್ಲವೂ ಬಹುತೇಕವಾಗಿ ಸಿನೆಮಾ ರಂಗದವರಿಗೇ ಮೀಸಲಾಗಿದ್ದು ಇತರ ಕ್ಷೇತ್ರಗಳ ಪ್ರತಿಭಾವಂತರನ್ನು ವ್ಯವಸ್ಥಿತವಾಗಿ ನಿರ್ಲಕ್ಷ್ಯ ಮಾಡುತ್ತಿರುವುದನ್ನು ಗಮನಿಸಬಹುದಾಗಿದೆ. ಉದಾಹರಣೆಗೆ, ಒಬ್ಬ ಸಿನೆಮಾ ನಟ ೫೦ ವರ್ಷಗಳನ್ನು ಪೂರೈಸಿದ ಸಂದರ್ಭದಲ್ಲಿ 'ಸುವರ್ಣ ಸಂಭ್ರಮ' ಆಚರಿಸುವ ಕನ್ನಡಿಗರು, ಕಾವ್ಯ-ಕಾದಂಬರಿ-ನಾಟಕ-ಯಕ್ಷಗಾನ-ಶಿಲ್ಪಕಲೆ-ಜನಪದ-ಸಂಗೀತ ಮುಂತಾದ ಕಲಾಕ್ಷೇತ್ರಗಳಲ್ಲಿ ಇನ್ನೂ ಹೆಚ್ಚು ಕಾಲ ಸೇವೆಗೈದಿರುವ ಅನೇಕಾನೇಕ ಕಲಾವಿದರನ್ನು ಯಾವ ರೀತಿ ಗೌರವಿಸಿದ್ದಾರೆ? ಅಥವಾ ಗುರುತಿಸಿದ್ದಾರೆ ? ಗಂಗೂಬಾಯಿ ಹಾನಗಲ್‌ರವರಿಗೆ ಅವಮಾನವಾಗುವಂತೆ ಕರ್ನಾಟಕ ಸರ್ಕಾರ ವರ್ತಿಸಿದಾಗ ಯಾವ ಕನ್ನಡಪರ ಸಂಘಟನೆಗಳು ಪ್ರತಿಭಟಿಸಿವೆ? ಎಷ್ಟು ರಾಜ್ಯೋತ್ಸವಗಳಲ್ಲಿ ಭೀಮಸೇನ ಜೋಷಿ, ಹಾನಗಲ್, ಕೆರೆಮನೆ ಶಂಭುಹೆಗ್ಡೆ, ಶುಭಾ ಮುದ್ಗಲ್, ಕೆ. ವಿ. ಸುಬ್ಬಣ್ಣ ಮುಂತಾದ ಕಲಾವಿದರಿಗೆ ಸನ್ಮಾನ ಮಾಡಲಾಗಿದೆ ? ಇವರಾರೂ ಕನ್ನಡಿಗರಲ್ಲವೇ ಅಥವಾ ಕನ್ನಡ ಸಂಸ್ಕೃತಿಯನ್ನು ಪ್ರತಿನಿಧಿಸುವುದಿಲ್ಲವೇ? ಹಾಗೆಂದ ಮಾತ್ರಕ್ಕೆ ಸಿನೆಮಾರಂಗದವರನ್ನು ಕಡೆಗಣಿಸಬೇಕೆಂದೇನಲ್ಲ. ಸಾಮುದಾಯಿಕ ಮನರಂಜನಾ ವಸ್ತುವಾಗಿ ತನ್ನದೇ ಆದ ಕೊಡುಗೆ ಸಿನೆಮಾ ರಂಗ ನೀಡಿದೆಯಾದರೂ, ವಾಸ್ತವದಲ್ಲಿ ಶಿಕ್ಷಿತ ಜನರನ್ನೇ ಒಳಗೊಂಡ ಸಂಘಟನೆಗಳೂ ಸಹ ಸಿನೆಮಾರಂಗದವರಿಗೇ ಹೆಚ್ಚು ಆದ್ಯತೆ ನೀಡುವುದನ್ನು ಗಮನಿಸಬಹುದು. ಆದ್ದರಿಂದಲೇ ಇತ್ತೀಚೆಗೆ ಬಂದಿರುವ ಸಿನೆಮಾ ನಟರಿಗೂ ಸಹ ಅಭಿಮಾನಿ ಸಂಘಗಳಿರುತ್ತವೆ.

ಇನ್ನು ರಾಜ್ಯೋತ್ಸವದ ಆಚರಣೆಯು ಹೇಗಿರಬೇಕೆಂಬ ಜಿಜ್ಞಾಸೆ. ಈ ಚರ್ಚೆಯು ಎಂಬತ್ತರ ದಶಕದಿಂದೀಚೆಗೆ ಹೆಚ್ಚು ಪ್ರಸ್ತುತತೆ ಪಡೆದಿದೆ. ಎಪ್ಪತ್ತರ ದಶಕ ಮತ್ತು ಅದಕ್ಕೂ ಮುಂಚಿನ ದಿನಗಳಲ್ಲಿ ನಡೆಯುತ್ತಿದ್ದ ರಾಜ್ಯೋತ್ಸವಕ್ಕೂ ಇಂದು ನಡೆಯುವುದಕ್ಕೂ ಬಹಳಷ್ಟು ಅಂತರವನ್ನು ಗಮನಿಸಬಹುದು. ಇಡೀ ಕನ್ನಡನಾಡಿನ ಜನತೆಯನ್ನು ಪ್ರತಿನಿಧಿಸುವಂತಹ ಒಂದು ನಾಡಹಬ್ಬದಂತೆ ಆಚರಿಸಲಾಗುತ್ತಿದ್ದ ರಾಜ್ಯೋತ್ಸವ ಕ್ರಮೇಣ ಆರಾಧನಾ ಸಂಸ್ಕೃತಿಗೆ ಬಲಿಯಾಗಿ ಹಲವಾರು ಸಮುದಾಯಗಳನ್ನು ದೂರ ಸರಿಸಿದ್ದನ್ನು ನಾವು ಕಾಣಬಹುದು. ಜನಪರ ಕಲೆ, ಸಂಸ್ಕೃತಿ, ಭಾವನೆಗಳಿಗೆ ಬದಲಾಗಿ, ಭುವನೇಶ್ವರಿಯ ವೈಭವೀಕರಣ, ಪೂಜಾ ಸಂಸ್ಕೃತಿ, ಭಾಷೆಗಿಂತಲೂ ಭಾಷಾಭಿಮಾನಕ್ಕೆ ಸಿಕ್ಕ ಮಾನ್ಯತೆ, ಸಾಂಸ್ಕೃತಿಕ ಕಾರ್ಯಕ್ರಮಗಳ ಬದಲು ಮನರಂಜನಾ ಕಾರ್ಯಕ್ರಮಗಳ ಮೇಲುಗೈ, ಪರಂಪರೆಯನ್ನು ಹಿಮ್ಮೆಟ್ಟಿದ ಆಡಂಬರ, ಭಾವಗೀತೆ – ಸುಗಮ ಸಂಗೀತವನ್ನು ಹಿಂದೆ ಸರಿಸಿದ ಕೆಟ್ಟ ಸಿನೆಮಾ ಗೀತೆಗಳು, ಸಾಹಿತಿ ಕಲಾವಿದರನ್ನು ನೇಪಥ್ಯಕ್ಕೆ ಸರಿಸಿದ ಸಿನೆಮಾ ನಟರು, ಹೀಗೆ ಹತ್ತು ಹಲವಾರು ಕಾರಣಗಳಿಂದ ರಾಜ್ಯೋತ್ಸವದ ಆಚರಣೆಯು ಎಪ್ಪತ್ತರ ದಶಕದ ನಂತರ ವಿಭಿನ್ನ ಹಾದಿ ಕ್ರಮಿಸಿದ್ದನ್ನು ಕಾಣಬಹುದು.

ಪ್ರಸ್ತುತ ಸನ್ನಿವೇಶದಲ್ಲಿ ರಾಜ್ಯೋತ್ಸವದ ಆಚರಣೆಯನ್ನು ಹಿಂದಿನಂತಲ್ಲದೆ ಹೆಚ್ಚು ಅರ್ಥಪೂರ್ಣವಾಗಿ ಆಚರಿಸುವುದು ಅತ್ಯವಶ್ಯವಾಗಿದೆ. ಇಂದು ಕನ್ನಡಿಗರು ತಮ್ಮ ನಾಡು ನುಡಿ ನಡೆ ಕಲೆ ಸಂಸ್ಕೃತಿ ಪರಂಪರೆ ಹಾಗೂ ಸಾಮಾಜಿಕ-ಆರ್ಥಿಕ ಸಮತೋಲಗಳನ್ನು ಕಾಪಾಡಿಕೊಳ್ಳುವುದು ಅವಶ್ಯವಾಗಿದೆ. ಜಾಗತೀಕರಣದ ಪರಿಣಾಮದಿಂದ ಮಾಧ್ಯಮಗಳ ಹಾವಳಿಯಿಂದ ಹಾಗೂ ಯುವಜನತೆಯಲ್ಲಿ ದಿನೇ ದಿನೇ ಹೆಚ್ಚಾಗುತ್ತಿರುವ ಹಿಂಸಾತ್ಮಕ ಭಾವನೆಗಳಿಂದ ಕರ್ನಾಟಕದಲ್ಲಿ ಹೊಸ ರೀತಿಯ ರಾಜಕೀಯ ಸಾಮಾಜಿಕ ಬೆಳವಣಿಗೆಗಳನ್ನು ಕಾಣುತ್ತಿದ್ದೇವೆ. ಕನ್ನಡಿಗರ ಹಿತರಕ್ಷಣೆ ಎಂದರೆ ಕೇವಲ ಘೋಷಣೆಗಳಿಂದ ಸಾಧಿಸುವು ದಂತಹುದಲ್ಲ. ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಹಾಗೂ ಭೌತಿಕವಾಗಿ ಜನ ಸಮುದಾಯದ ಅಭಿವೃದ್ಧಿಯಾಗಬೇಕಾಗಿದೆ. ೫೦ ವರ್ಷಗಳ ರಾಜಕಾರಣದಲ್ಲಿ ಅಧಿಕಾರ ದಲ್ಲಿದ್ದ ಯಾವುದೇ ಪಕ್ಷಗಳೂ ಕರ್ನಾಟಕದ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿಲ್ಲ ವೆಂದರೆ ತಪ್ಪಾಗಲಾರದು. ಬೆಂಗಳೂರು ಕೇಂದ್ರಿತಯೋಜನಾ ನೀತಿಗಳಿಂದ ಹೈದರಾಬಾದ್ ಕರ್ನಾಟಕ, ರಾಯಲಸೀಮೆ–ಮುಂಬಯಿ ಕರ್ನಾಟಕದ ಭಾಗಗಳಲ್ಲಿ ಇಂದಿಗೂ ಅಭಿವೃದ್ಧಿ ಕಂಡುಬರುವುದಿಲ್ಲ. ಹಾಗಾಗಿಯೇ ಇತ್ತೀಚಿನ ದಿನಗಳಲ್ಲಿ ಪ್ರತ್ಯೇಕ ರಾಜ್ಯದ ಕೂಗು ತೀವ್ರವಾಗಿ ಕೇಳಿಬರುತ್ತಿದೆ. ಈ ೫೦ ವರ್ಷಗಳಲ್ಲಿ ಒಂದು ನಿರ್ದಿಷ್ಟವಾದ ಮಾತೃಭಾಷಾ ನೀತಿಯನ್ನೂ ಯಾವುದೇ ಸರ್ಕಾರ ಅನುಷ್ಠಾನಗೊಳಿಸದಿರುವುದು ನಾಚಿಕೆಗೇಡಿನ ಸಂಗತಿ. ಜಾಗತೀಕರಣದ ಸಂದರ್ಭದಲ್ಲಿ ಸಮಾಜವು ಮನ್ವಂತರದ ಹಾದಿಯಲ್ಲಿರುವಾಗ ಸರ್ಕಾರ ಮಾತ್ರವಲ್ಲದೆ ಶಿಕ್ಷಣ ತಜ್ಞರೂ ಸಹ ಗೊಂದಲದಲ್ಲಿರುವುದು ದುರಂತವೇ ಸರಿ.

ಈ ಹಿನ್ನೆಲೆಯಲ್ಲಿಯೇ ಕನ್ನಡ ಅವಸಾನ ಹೊಂದುತ್ತಿದೆ ಎಂಬ ಕೂಗು ಕೇಳಿ ಬರುತ್ತಿರುವುದು ಈ ಸುವರ್ಣೋತ್ಸವದ ಸಂದರ್ಭದಲ್ಲಿ ಆತ್ಮಾವಲೋಕನಕ್ಕೆ ದಾರಿಯಾಗ ಬೇಕಾಗಿದೆ. ಒಂದು ಭಾಷೆಯಾಗಿ ಕನ್ನಡ ಜೀವಂತವಾಗಿದೆ. ಕನ್ನಡ ಸಾಹಿತ್ಯ ಇಂದಿಗೂ ತನ್ನ ಹಿರಿಮೆ ಗರಿಮೆಯನ್ನು ಉಳಿಸಿಕೊಂಡುಬಂದಿದೆ. ಹೊಸ ಚಿಂತನೆಗಳು ನಾನಾ ಸಾಹಿತ್ಯ ಪ್ರಕಾರಗಳಲ್ಲಿ ಮೂಡುತ್ತಲೇ ಇವೆ. ಹಿಂದೆಂದಿಗಿಂತಲೂ ಹೆಚ್ಚು ಕಥೆಗಾರರು, ಕವಿಗಳು, ವಿಮರ್ಶಕರು ಹೊರಹೊಮ್ಮಿದ್ದಾರೆ. ವಿಪರ್ಯಾಸವೆಂದರೆ, ಓದುಗರ ಸಂಖ್ಯೆ ಕಡಿಮೆ ಯಾಗಿದೆ ಮತ್ತು ಸಾಹಿತ್ಯಾಸಕ್ತರ ಸಂಖ್ಯೆಯೂ ಇಳಿಮುಖ ಕಾಣುತ್ತಿದೆ. ಕನ್ನಡಪರ ಸಂಘಟನೆಗಳು ಈ ಕ್ಷೇತ್ರದಲ್ಲಿ ಕಾರ್ಯೋನ್ಮುಖವಾಗಿ ಯುವ ಜನತೆಯನ್ನು, ಶಾಲಾ ಮಟ್ಟದಿಂದಲೇ ಓದಲು, ಸಾಹಿತ್ಯಾಭಿರುಚಿ ಬೆಳೆಸಿಕೊಳ್ಳಲು ಪ್ರೇರೇಪಿಸುವ ಯೋಜನೆ ಗಳನ್ನು ಹಮ್ಮಿಕೊಂಡರೆ, ಅದು ಕನ್ನಡದ ನಿಜವಾದ ಸೇವೆಯಾಗುತ್ತದೆ. ಜನತೆ ರಾಜ್ಯೋತ್ಸವದ ಸಂದರ್ಭದಲ್ಲಿ ನೀಡುವ ವಂತಿಗೆ ಹಣವನ್ನು ಅದ್ದೂರಿ ಸಮಾರಂಭಗಳಿಗೆ ಖರ್ಚುಮಾಡುವ ಬದಲು ಈ ರೀತಿಯ ರಚನಾತ್ಮಕ ಕಾರ್ಯಗಳಿಗೆ ವಿನಿಯೋಗಿಸಿದಲ್ಲಿ, ಯುವ ಜನತೆಯನ್ನು, ಇಂಟರ್‌ನೆಟ್ ಚಾಟಿಂಗ್ ಸೆಂಟರ್‌ಗಳಿಂದ ಹೊರತಂದು, ಅವರಿಗೆ ಕನ್ನಡಭಾಷೆ , ಸಂಸ್ಕೃತಿಗಳ ಪರಿಚಯವನ್ನಾದರೂ ಮಾಡಿಸಬಹುದು. ಬಹುತೇಕವಾಗಿ ಕನ್ನಡ ಪುಸ್ತಕಗಳು ಕೈಗೆಟುಕದ ಬೆಲೆ ಹೊಂದಿರುತ್ತವೆ. ಮಧ್ಯಮ ವರ್ಗದವರೂ ಕೊಂಡು ಓದುವುದು ದುಸ್ತರವಾಗಿದೆ. ರಾಜ್ಯೋತ್ಸವದ ಸಂದರ್ಭದಲ್ಲಿ ಕನ್ನಡಪರ ಸಂಘಟನೆಗಳು, ತಾವು ಸಂಗ್ರಹಿಸಿದ ಹಣದಿಂದ ಉತ್ತಮ ಸಾಹಿತ್ಯ ಕೃತಿಗಳನ್ನು ಜನರಿಗೆ ಕಡಿಮೆ ಬೆಲೆಯಲ್ಲಿ ಒದಗಿಸುವಂತಾದಲ್ಲಿ, ಅದು ನಿಜವಾದ ರಾಜ್ಯೋತ್ಸವವಾಗುತ್ತದೆ. ಇನ್ನು ಹಲವಾರು ಉದಯೋನ್ಮುಖ ಸಾಹಿತಿ-ಕವಿ-ಬರಹಗಾರರು ತಮ್ಮ ಕೃತಿಗಳನ್ನು ಪ್ರಕಟಿಸಲು, ಹಣದ ಅಭಾವದಿಂದ ಹೆಣಗಾಡಬೇಕಾಗುತ್ತದೆ. ಇಂತಹವರಲ್ಲಿ, ಉತ್ತಮ ಲೇಖಕರನ್ನು ಗುರುತಿಸಿ, ಅವರಿಗೆ ನೆರವು ನೀಡುವುದು ಕನ್ನಡಪರ ಸಂಘಟನೆಗಳು ಮಾಡಬಹುದಾದ ಒಂದು ಉತ್ತಮ ಕೆಲಸ.

ಕೊನೆಯದಾಗಿ, ಕನ್ನಡ ಪರ ಸಂಘಟನೆಗಳು ಅಪಾರ ಸಂಖ್ಯೆಯಲ್ಲಿದ್ದು, ಎಲ್ಲವೂ ಸಹ ಕನ್ನಡ ಭಾಷೆ-ಸಂಸ್ಕೃತಿಯನ್ನು ಎತ್ತಿ ಹಿಡಿಯುವ ಪಣ ತೊಡುತ್ತವೆ. ಈ ಸಂಘಟನೆಗಳ ಸಾವಿರಾರು ಕಾರ್ಯಕರ್ತರು ಒಂದಾಗಿ ಸೇರಿ, ಪ್ರತಿ ಗ್ರಾಮ-ಪಟ್ಟಣ-ನಗರ ಪ್ರದೇಶಗಳಲ್ಲಿ, ಪ್ರತಿಯೊಂದು ಸರ್ಕಾರಿ ಶಾಲೆಗಳಲ್ಲೂ ವಾಚನಾಲಯಗಳನ್ನು, ಗ್ರಂಥಾಲಯಗಳನ್ನು ತೆರೆಯುವುದರ ಮೂಲಕ ಶಾಲಾ ಮಟ್ಟದಲ್ಲಿಯೇ ಮಕ್ಕಳಲ್ಲಿ ಓದುವ ಹವ್ಯಾಸವನ್ನು

ಬೆಳೆಸಬಹುದು. ಈ ಘನಕಾರ್ಯಕ್ಕೆ ಪ್ರಜ್ಞಾವಂತ ಜನರ ಮುಕ್ತ ಬೆಂಬಲವೂ ದೊರೆಯುವುದರಲ್ಲಿ ಸಂದೇಹವೇ ಇಲ್ಲ. ಯುವ ಜನಾಂಗದಲ್ಲಿ ಸಾಹಿತ್ಯಾಸಕ್ತಿ ಬೆಳೆಸದಿದ್ದಲ್ಲಿ, ಬಹುಶಃ ಮುಂಬರುವ ದಿನಗಳಲ್ಲಿ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಧಕ್ಕೆಯುಂಟಾಗಬಹುದು. ಆಂಗ್ಲಭಾಷೆಯ ನಾಮಫಲಕಗಳನ್ನು ಕಿತ್ತೆಸೆಯುವ ಬದಲು ಜನರ ಹೃದಯಗಳಲ್ಲಿ ಕನ್ನಡ ಭಾಷೆಯನ್ನು ನೆಲೆಸುವಂತೆ ಮಾಡುವುದು ಕನ್ನಡಪರ ಸಂಘಟನೆಗಳ ಕರ್ತವ್ಯವಾಗಬೇಕಾಗಿದೆ. ನಾಮಫಲಕಗಳು, ಸರ್ಕಲ್‌ಗಳು, ರಸ್ತೆಗಳು, ಕನ್ನಡಮಯವಾಗಿದ್ದಲ್ಲಿ ಅದು ಕೇವಲ ಜಾಹೀರಾತು ಮೌಲ್ಯವನ್ನು ಹೊಂದಿರುತ್ತದೆ. ರಾಜ್ಯಾದ್ಯಂತ ಎಲ್ಲೆಡೆ ಕನ್ನಡ ನಾಮಫಲಕಗಳೇ ರಾರಾಜಿಸಿದಲ್ಲಿ, ಕನ್ನಡ ಭಾಷೆಯ ರಕ್ಷಣೆಯಾಗುವುದಿಲ್ಲ ಎಂಬ ಅಂಶವನ್ನು ಕನ್ನಡಪರ ಸಂಘಟನೆಗಳು ಅರಿಯಬೇಕಾಗಿದೆ. ಈ ರೀತಿಯ ಹೋರಾಟಗಳು ಕೇವಲ ಸಾಂಕೇತಿಕ ಪ್ರದರ್ಶನವಾಗುತ್ತವೆ.

ಆದರೆ ಜಾಗತೀಕರಣ ಯುಗದಲ್ಲಿ ಯಾವುದೇ ಪ್ರಾದೇಶಿಕ ಭಾಷೆಗೆ, ಸಂಸ್ಕೃತಿಗೆ ಧಕ್ಕೆ ಉಂಟಾಗುತ್ತಿರುವುದು ನವ ಸಾಮ್ರಾಜ್ಯಶಾಹಿಯ, ನವ-ವಸಾಹತೀಕರಣದಿಂದ ಎಂಬ ಅಂಶವನ್ನು ಕನ್ನಡಿಗರು ಮಾತ್ರವಲ್ಲದೆ ಇಡೀ ಭಾರತೀಯರೇ ಯೋಚಿಸಬೇಕಾಗಿದೆ. ಜಾಗತೀಕರಣದ ಪ್ರಭಾವದಿಂದ ಉಂಟಾಗಿರುವ ಆರ್ಥಿಕ ಅಸಮತೋಲನ, ಕೃಷಿ ಬಿಕ್ಕಟ್ಟು, ಕೈಗಾರಿಕಾ ಹಿನ್ನಡೆ, ಶೈಕ್ಷಣಿಕ ಸಮಸ್ಯೆಗಳು, ಮಾಹಿತಿ ತಂತ್ರಜ್ಞಾನದಿಂದ ಸಾಮಾನ್ಯ ಜನರಲ್ಲಿ ಉಂಟಾಗಿರುವ ನಿರುದ್ಯೋಗ ಸಮಸ್ಯೆ, ದಿನೇ ದಿನೇ ಹೆಚ್ಚುತ್ತಿರುವ ಕೋಮುವಾದ-ಹಿಂಸಾತ್ಮಕ ಪ್ರವೃತ್ತಿ, ಇವೆಲ್ಲವೂ ಕನ್ನಡಿಗರ ಸಮಸ್ಯೆಗಳೇ, ಅಲ್ಲವೇ ? ಈ ಗಂಭೀರ ಸಮಸ್ಯೆಗಳನ್ನು ದೂರವಿರಿಸಿ, ಕನ್ನಡಿಗರ ರಕ್ಷಣೆಗೆ ಹೋರಾಡುವುದೆಂದರೆ, ಅಡಿಗರು ಹೇಳಿದಂತೆ, ''ಇರುವುದೆಲ್ಲವ ಬಿಟ್ಟು ಇಲ್ಲದುದರ ಹಿಂದೆ ನಡೆವುದೇ ಜೀವನ'' ಎಂಬಂತಾಗುತ್ತದೆ.

ಮನ್ವಂತರದ ಹಾದಿಯಲ್ಲಿರುವ ಕನ್ನಡ ಜನತೆಗೆ, ಜಡಸ್ಥಿತಿ ತಲುಪುತ್ತಿರುವ ಕನ್ನಡ ಸಾಂಸ್ಕೃತಿಕ ಪರಂಪರೆಗೆ, ಕ್ರಮೇಣ ಜನರ ದೈನಂದಿನ ಜೀವನದಿಂದ ಮರೆಯಾಗುತ್ತಿರುವ ಕನ್ನಡಭಾಷೆಗೆ, ಸ್ಥಿತಿಸ್ಥಾಪಕತ್ವವನ್ನು ಕಳೆದುಕೊಳ್ಳುತ್ತಿರುವ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಜಾಗತೀಕರಣದಿಂದ ಹಾನಿಗೊಳಗಾಗಿರುವ ಕರ್ನಾಟಕದ ಸಾಮಾಜಿಕ-ಆರ್ಥಿಕ ಚೌಕಟ್ಟಿಗೆ ಮತ್ತು ದೇಶೀ ಸಂಸ್ಕೃತಿಯಿಂದ ವಿಮುಖರಾಗುತ್ತಿರುವ ಕನ್ನಡ ಯುವಜನತೆಗೆ ಕಾಯಕಲ್ಪ ತೋರಲು ಕನ್ನಡಪರ ಸಂಘಟನೆಗಳು ಮಾತ್ರವಲ್ಲದೆ ಇಡೀ ಕರ್ನಾಟಕದ ಜನತೆ ಸಕ್ರಿಯವಾಗಿ ಭಾಗವಹಿಸಬೇಕಾಗಿದೆ. ವಿಜಯನಗರದ ಹೆಬ್ಬಾಗಿಲುಗಳನ್ನು ಊರೂರುಗಳಲ್ಲಿ ಸ್ಥಾಪಿಸುವುದರಿಂದ, ಗಲ್ಲಿ ಗಲ್ಲಿಗಳಲ್ಲಿ ಕರ್ನಾಟಕದ ಧ್ವಜವನ್ನು ಹಾರಿಸುವುದರಿಂದ, ತಾಯಿ ಭುವನೇಶ್ವರಿಯನ್ನು ಭಾವಾವೇಶದಿಂದ ಪೂಜಿಸುವುದರಿಂದ ಒಂದು ರೀತಿಯ ಸಾಂಕೇತಿಕ ಚಳುವಳಿಯನ್ನು ರೂಪಿಸಬಹುದಷ್ಟೆ. ''*ಹಚ್ಚೇವು ಕನ್ನಡದ ದೀಪ*'' ''*ಬಾರಿಸು ಕನ್ನಡ ಡಿಂಡಿಮವ*'' ''*ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು*'' ''*ಎಳ್ ಕನ್ನಡ ತಾಯ್ ಬಾಳ್ ಕನ್ನಡ ತಾಯ್ ಆಳ್ ಕನ್ನಡ ತಾಯ್*'' ''*ಸಿರಿಗನ್ನಡಂ ಗೆಲ್ಗೆ ಸಿರಿಗನ್ನಡಂ ಬಾಳ್ಗೆ*'', ಈ ಕವಿವಾಣಿಗಳು ಕೇವಲ ರಂಜನೀಯ ಘೋಷಣೆಗಳಲ್ಲ. ಅವು ಕನ್ನಡದ ಉಜ್ವಲ ಭವಿಷ್ಯಕ್ಕಾಗಿ ನಮ್ಮ ಮಹಾನ್ ಕವಿವರ್ಯರು ಝೇಂಕರಿಸಿದ ಅಣಿಮುತ್ತುಗಳು. ಈ ಕವಿವರ್ಯರ ಕನಸನ್ನು ಪೂರೈಸಬೇಕಾದರೆ ಕನ್ನಡ, ಕನ್ನಡ ಸಂಸ್ಕೃತಿ, ಕನ್ನಡ ಪರಂಪರೆ, ಕನ್ನಡ ಸಾಹಿತ್ಯ-ಕಲೆ, ಕನ್ನಡ ಜನತೆಯ ಸಾಮಾಜಿಕ, ಆರ್ಥಿಕ ಜೀವನ ಇವೆಲ್ಲವೂ ಸುಧಾರಣೆಯಾಗಬೇಕಾಗಿದೆ. ಈ ನಿಟ್ಟಿನಲ್ಲಿ ಯೋಜನೆಗಳನ್ನು ಹಮ್ಮಿಕೊಂಡು ಬ್ಯಾನರ್‌ಗಳನ್ನು, ಘೋಷಣೆಗಳನ್ನು, ಅದ್ದೂರಿ ಆಚರಣೆ ಆಡಂಬರಗಳನ್ನು ಬದಿಗಿಟ್ಟು ಹೋರಾಟ ನಡೆಸಿದಲ್ಲಿ, ಅದು ಸುವರ್ಣ ರಾಜ್ಯೋತ್ಸವಕ್ಕೆ ಕನ್ನಡ ಜನತೆಯು ನೀಡಬಹುದಾದ ಅಮೂಲ್ಯ ಕೊಡುಗೆಯಾಗಬಹುದು.

ನಾ. ದಿವಾಕರ
ಮನೆ ಸಂಖ್ಯೆ ೫೦೪, ೧೩ನೆಯ ಅಡ್ಡರಸ್ತೆ, ಶ್ರೀರಾಂಪುರ ೨ನೆಯ ಹಂತ, ಮೈಸೂರು - ೨೩

# ಕಾಡದಿರಿ ನೆನಪುಗಳೇ



ನನ್ನೆದೆಯ ಅಡವಿಯೊಳು ಅಡಗಿರುವ ನೆನಪುಗಳೇ
ಕಾಡದಿರಿ, ಕಾಡಿ ನೋವ ನೀಡದಿರಿ

ಚಿಂತೆಯ ಚಿಲುಮೆಯ ತೋಡಿ
ಈ ದೇಹವನದಕೆ ದೂಡಿ
ಜೀವಂತ ಹೆಣವ ಮಾಡದಿರಿ

ಕಂಡು ಕೇಳರಿಯದ ವೇದನೆ ನೀಡಿ
ಮನದ ಮುದವ ಛಿದ್ರಗೊಳಿಸಿ
ನನ್ನ ಮರುಳ ಮಾಡದಿರಿ

ನನ್ನ ಏಕಾಂತದೊಳು ಹೊಕ್ಕು
ನನ್ನ ಹೃದಯವ ಕದ್ದು
ಖಾಲಿಯಮಾಡಿ ಗೋಳನು ನೀಡದಿರಿ

ನೆನಪಿನಾ ಚೂಪುಬಾಣಕೆ
ತತ್ತರಿಸಿ ನಡುಗುತಿದೆ ನನ್ನೆದೆ
ಚುಚ್ಚಿ ಚುಚ್ಚಿ ರಕ್ತ ಸುರಿಯುತಿದೆ
ಕಾಡದಿರಿ, ಕಾಡಿ ನೋವ ನೀಡದಿರಿ

ಹೊದ್ದು ಮಲಗಿದಲ್ಲಿ ಬಂದು
ಕದ್ದು ಮನವನು ಕಲಕಿ
ನಿದ್ದೆಭಂಗವಗೊಳಿಸಿ ವಿಲಿವಿಲಿ ಒದ್ದಾಡಿಸಿ
ಎದ್ದೋಡಿಸುವ ಪರಿಯ ನೀಡದಿರಿ
ನೀಡಿ ಸಂತಸವ ಪಡದಿರಿ

ನನ್ನೆದೆಯ ಗೂಡಿನಲಿ
ಬಸಿರುಗಟ್ಟಿದ ನೆನಪುಗಳೇ
ಪ್ರಸವ ದಿನವನು ಕಾದು ಕುಳಿತಿರುವಿರಾ ?
ಹಸಿರಾದ ಮನದ ಪಸೆಯ ಹೀರಲು
ಪಣತೊಟ್ಟು ಕುಳಿತಿರುವಿರಾ ?
ಬೇಡಿ ದಯವಿಟ್ಟು ಬೇಡಿ
ಕಾಡದಿರಿ ಕಾಡಿ ನೋವ ನೀಡದಿರಿ ನೆನಪುಗಳೇ !

ಡಾ|| ಸಮತಾ ಬಿ. ದೇಶಮಾನೆ
ಉಪನ್ಯಾಸಕರು, ಸಮಾಜಶಾಸ್ತ್ರ ವಿಭಾಗ,
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು - ೫೬೦ ೦೫೬

# ನಭೋವಲೋಕನಕ್ಕೊಂದು ಹೊಸ ಆಯಾಮ

**ಸಂ**ಜೆ 'ವಾಕಿಂಗ್' ಎಂದು ಓಡಾಡುವ ಜನ ಅಥವಾ ಬೆಳಗಿನ ಜಾವ ಬೇಗ ಎದ್ದು 'ವಾಕಿಂಗ್' ಹೊರಡುವವರು ಸಾಮಾನ್ಯವಾಗಿ ಕಾಣುವ ಒಂದು ದೃಶ್ಯ – ಓಡುವ ನಕ್ಷತ್ರಗಳದ್ದು. ಯಾವುದೇ ಮೂಲೆಯಿಂದ ಇನ್ಯಾವುದೋ ಮೂಲೆಗೆ ಓಡುವ ಇವು ಅನೇಕರನ್ನು ಆಕರ್ಷಿಸಿವೆ. ಇವನ್ನು ಹಾರುವ ತಟ್ಟೆ ಎಂದು ಭ್ರಮಿಸಿದವರೂ ಉಂಟು. ಇವು ಆಕಾಶಕಾಯಗಳೇ ಹೌದೇ ? ಎಂಬ ಪ್ರಶ್ನೆಯು ಏಳುತ್ತದೆ.

ವಿಮಾನಗಳನ್ನು ಆಕಾಶಕಾಯ ಎಂದು ಕರೆಯಬಹುದೇ? ಇಲ್ಲ. ಹಾಗಾದರೆ ಯಾವುದನ್ನು ಆಕಾಶಕಾಯ ಎನ್ನೋಣ? ನಿಧಾನವಾಗಿ ಆಲೋಚಿಸಿದಾಗ ಇದರ ಉತ್ತರ ಹೊಳೆಯುತ್ತದೆ. ಭೂಮಿಯ ೨೪ ಗಂಟೆಯ ಆವರ್ತನೆಯಲ್ಲಿ ಪಾಲ್ಗೊಳ್ಳುವ ಕಾಯಗಳು ಭೂಮಿಗೇ ಸೇರಿದವು – ವಿಮಾನ, ಹಕ್ಕಿ, ಹೆಲಿಕಾಪ್ಟರ್ ಇವೆಲ್ಲಾ ಉದಾಹರಣೆಗಳು. ದೂರದ ಚಂದ್ರ ಅದಕ್ಕೂ ದೂರದ ಗ್ರಹ, ಕ್ಷುದ್ರ ಗ್ರಹ, ನಕ್ಷತ್ರ ಇವು ಆವರ್ತನದಲ್ಲಿ ಪಾಲ್ಗೊಳ್ಳದೇ ಇರುವುದರಿಂದ ಪೂರ್ವದಲ್ಲಿ ಉದಯಿಸಿ ಪಶ್ಚಿಮದಲ್ಲಿ ಅಸ್ತಮಿಸುತ್ತವೆ. ಇವನ್ನು ಆಕಾಶಕಾಯಗಳು ಎನ್ನಬಹುದು.

ಹಾಗಾದರೆ ಈ ಓಡುವ ನಕ್ಷತ್ರಗಳೇನು ? ಇವು ತ್ರಿಶಂಕುಗಳು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲದವರು. ಇವನ್ನು ಸೃಷ್ಟಿಸಿದ ವಿಶ್ವಾಮಿತ್ರರು ನಾವೇ – ಮಾನವರು. ೧೯೫೭ರ ಅಕ್ಟೋಬರ್ ೪ರಂದು ರಷ್ಯಾದ ಗಗನನೌಕೆ ಸ್ಪುಟ್ನಿಕ್-೧ ಹಾರಿದಂದಿನಿಂದ ನಾವು ಈ ವಿಶ್ವಾಮಿತ್ರ ಪಟ್ಟ ಗಳಿಸಿಕೊಂಡೆವು. ಅಂದಿನಿಂದ ಇಂದಿನವರೆಗೆ ಹಾರಿದ ನೌಕೆಗಳು ಮಾತ್ರವಲ್ಲದೆ ಅವುಗಳನ್ನು ಕರೆದೊಯ್ದ ವಾಹನಗಳು, ಇಂಧನದ ಸಿಲಿಂಡರ್‌ಗಳು ಮುಂತಾದ ಅನೇಕ ತ್ಯಾಜ್ಯವಸ್ತುಗಳೂ ಭೂಮಿಯನ್ನು ಸುತ್ತುತ್ತಿವೆ. ಬಾಹ್ಯಾಕಾಶ ತಂತ್ರಜ್ಞಾನ ಮುಂದುವರೆದಂತೆ ವಿಚಿತ್ರ ಪ್ರಯೋಗಗಳೂ ನಡೆದವು. ಸಾವಿರಗಟ್ಟಲೆ ಸೂಜಿಗಳನ್ನು ಆಕಾಶದಲ್ಲಿ ಎಸೆಯಲಾಯಿತು. ಅವುಗಳ ಪ್ರತಿಫಲನವನ್ನು ಅಭ್ಯಸಿಸುವುದು ಇದರ ಉದ್ದೇಶ. ಸುಮಾರು ೧೪ ಸಾವಿರ ಜನರ ಅಸ್ಥಿಗಳನ್ನು ಗಗನ ನೌಕೆಯಲ್ಲಿ ಒಯ್ದು ಚೆಲ್ಲುವುದು – ಇಂತಹ ಇನ್ನೊಂದು ಪ್ರಯೋಗ. ಅವುಗಳಿಗೆ ಚಿನ್ನದ ಲೇಪ – ಹಾಗಾಗಿ ಅವು ಫಳಫಳನೆ ಹೊಳೆಯುತ್ತಿದ್ದವು. ಪ್ರತಿದಿನ ಅವು ನೆತ್ತಿಯ ಮೇಲೆ ಹಾದುಹೋದಾಗ ಮಕ್ಕಳು, ಮೊಮ್ಮಕ್ಕಳು 'ದರ್ಶನ' ಮಾಡಬಹುದಾಗಿತ್ತು. ಜಾಹಿರಾತನ್ನು ಹಾಕುವ ಉದ್ದೇಶವೂ ಇತ್ತು. ಸುಮಾರು ೬೫ ಅಡಿ ಕನ್ನಡಿಯೊಂದು ಆರ್ಕ್ಟಿಕ್‌ನ ಕತ್ತಲು ಕಳೆಯಲು ಪ್ರಯತ್ನಿಸಿತ್ತು.

ಇಂಥ ಎಲ್ಲ ವಸ್ತುಗಳು ಮೇಲೆ ತೇಲಾಡುತ್ತಿವೆ. ಈ 'ಕಸ'ದ ನಿಖರವಾದ ಲೆಕ್ಕವೂ ಇದೆ ಎಂಬುದೇ ಸ್ವಾರಸ್ಯಕರವಾದ ಅಂಶ. 'ಕಸ'ದ ನಿರ್ವಹಣೆ ನಡೆಸಲು ಕಾವಲು ಸಂಸ್ಥೆಗಳೂ ಇವೆ. ಯಾವ ನೌಕೆಯ ಯಾವ ತುಂಡು ಎಲ್ಲಿ ಸುತ್ತುತ್ತಿದೆ ಎಂಬುದನ್ನು ಇವು ವರದಿಮಾಡುತ್ತಲೇ ಇರುತ್ತವೆ.

ನಮ್ಮ ಸಂಪರ್ಕ ಸಾಧನೆಗೆ ಅತ್ಯಮೂಲ್ಯ ತಳಹದಿ ಒದಗಿಸಿರುವ ಇನ್‌ಸ್ಯಾಟ್ (INSAT) ಸರಣಿಯ ಉಪಗ್ರಹಗಳು ಭೂಸ್ಥಾಯೀ ಕಕ್ಷೆಯಲ್ಲಿವೆ. ಅಂದರೆ ನಾವು ಸುತ್ತಿದಂತೆಯೇ, ಅದೇ ವೇಗದಲ್ಲಿ ಅವೂ ಸುತ್ತುತ್ತವೆ. ಆದರೆ ಅವು ಅತಿ ದೂರದಲ್ಲಿವೆ. ಬರಿಗಣ್ಣಿಗೆ ಕಾಣಲಾರವು. ಆದರೆ ದೂರದರ್ಶಕವೊಂದು ಅದೇ ದಿಕ್ಕಿನಲ್ಲಿ ಯಾವುದಾದರೂ ನೆಬ್ಯುಲವನ್ನೋ ಅಥವಾ ಗ್ಯಾಲಕ್ಸಿಯನ್ನೋ ಚಿತ್ರೀಕರಿಸುತ್ತಿದ್ದರೆ ಇದೂ ಒಂದು ಹೊಸ ಚುಕ್ಕೆಯಾಗಿ ಮೂಡಿ ಖಗೋಳಜ್ಞರನ್ನು ತಬ್ಬಿಬ್ಬು ಮಾಡುತ್ತದೆ. ಓಡುವ ನಕ್ಷತ್ರಗಳು ಗೆರೆಯಂತೆ ಮೂಡಿ ಖಗೋಳಜ್ಞರ ಶಾಪಕ್ಕೆ ತುತ್ತಾಗುತ್ತವೆ. ಇಂತಹ ಸಂದರ್ಭಗಳಲ್ಲಿ, ಆ ದಿಕ್ಕಿನಲ್ಲಿ ಹಾದುಹೋಗಬಹುದಾದ ತುಣುಕು ಇದೆಯೇ ಎಂದು ಮೊದಲೇ ತಿಳಿಯಬಹುದಾಗಿದೆ.

೧೯೭೫ರಲ್ಲಿ ಹಾರಿದ ಭಾರತದ ಮೊದಲ ಉಪಗ್ರಹ ಆರ್ಯಭಟ ಆರೇ ತಿಂಗಳಲ್ಲಿ ಕಾರ್ಯನಿರ್ವಹಣೆ ಮುಗಿಸಿ 'ರಿಟೈರ್' ಆಯಿತು. ಆದರೆ ಅದು ಭೂಮಿಯನ್ನು ಸುತ್ತುವುದಂತೂ ಮುಂದುವರೆಸಿತ್ತು. ಈ ನಿರುಪಯುಕ್ತ 'ಹೆಣ'ವನ್ನು ಕಾವಲು ಸಂಸ್ಥೆ ಚಾಚೂ ತಪ್ಪದೆ ಗಮನಿಸುತ್ತಲೇ ಇತ್ತು. ಕೊನೆಗೊಮ್ಮೆ ೧೪ ವರ್ಷಗಳ ನಂತರ ವಾತಾವರಣದೊಳಕ್ಕೆ ನುಗ್ಗಿ ಘರ್ಷಣೆಯಿಂದ ಉರಿದುಹೋದಾಗ ಅದರ 'ಶವಸಂಸ್ಕಾರ' ಪೂರ್ಣವಾಯಿತು.

ಈ ಎಲ್ಲ ತುಣುಕುಗಳನ್ನು ಆಕಾಶದಲ್ಲಿ ನೋಡುವುದು ಚೆನ್ನ. ಏಕೆಂದರೆ, ಬರಿಗಣ್ಣಿಗೆ ಅವು ಓಡುವ ನಕ್ಷತ್ರಗಳಂತೆ ಕಾಣುತ್ತವೆ, ಅಷ್ಟೆ. ಯಾವುದೇ ಸಂಜೆ ಅಥವಾ ಬೆಳಗಿನ ಜಾವ ಅರ್ಧಗಂಟೆಯಲ್ಲಿ ಏಳೆಂಟು ಉಪಗ್ರಹಗಳನ್ನಾದರೂ ನೋಡ ಬಹುದು (ಆಕಾಶ ಶುಭ್ರವಾಗಿದ್ದರೆ). ಕೆಳಸ್ತರದಲ್ಲಿ ಸುತ್ತುತ್ತಿರುವ ಇಂಟರ್‌ನ್ಯಾಷನಲ್ ಸ್ಪೇಸ್ ಸ್ಟೇಷನ್ ಮತ್ತು ಹಬಲ್ ದೂರದರ್ಶಕಗಳನ್ನಂತೂ ದಿನಕ್ಕೊಮ್ಮೆಯಾದರೂ ನೋಡಬಹುದು. ಈ ಬಗೆಯ ವಿವರಣೆಗಳು ಇಂಟರ್‌ನೆಟ್‌ನಲ್ಲಿ ದೊರಕುತ್ತವೆ. ಆದರೆ ಇವು ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತವೆ. ಬೆಂಗಳೂರಿಗೆಂದು ಲೆಕ್ಕಹಾಕಿದ ಸಮಯ ಮತ್ತು ದಿಕ್ಕುಗಳು ಮೈಸೂರು, ಕೋಲಾರಗಳಿಗೂ ಅನ್ವಯವಾಗುವುದಿಲ್ಲ. ಆದ್ದರಿಂದ ಇವನ್ನು ನಭೋವಲೋಕನದಲ್ಲಿ ಅಳವಡಿಸಲು ಸಾಧ್ಯವಾಗುವುದಿಲ್ಲ.

ಈಚಿನ ದಿನಗಳಲ್ಲಿ ಯಾವುದಾದರೂ ಕ್ಷುದ್ರಗ್ರಹ ಭೂಮಿಗೆ ಅಪ್ಪಳಿಸಬಹುದೆಂದು ಆತಂಕ ಹೆಚ್ಚಾಗಿದೆ. ಇದಕ್ಕೆ ಕಾರಣವಿಲ್ಲದಿಲ್ಲ. ಕ್ಷುದ್ರಗ್ರಹಗಳ ಪಟ್ಟಿ (ಮಂಗಳ ಮತ್ತು ಗುರು ಕಕ್ಷೆಗಳ ನಡುವಿನದು) ಬಿಟ್ಟು ಹೊರಬೀಳುತ್ತಿರುವ 'ತಂಟೆಕೋರ' ಕ್ಷುದ್ರ ಗ್ರಹಗಳ ಪಟ್ಟಿ ಬೆಳೆಯುತ್ತಲೇ ಇದೆ. ಅವು ಭೂಮಿಗೆ ಸಮೀಪ ಬರುವ ಸಾಧ್ಯತೆಯೂ ಇಲ್ಲದಿಲ್ಲ. ಆದ್ದರಿಂದ ಅವನ್ನೂ ಗಮನಿಸಬೇಕಾದುದು ಅವಶ್ಯಕವಾಗಿದೆ. ಇವು ತೀರಾ ಸಣ್ಣ ಕಾಯಗಳು. ಆದ್ದರಿಂದ ಇವು ಪತ್ತೆಯಾಗುವಾಗಲೇ ಸುಮಾರು ಒಂದು ಮಿಲಿಯನ್ ಕಿ.ಮೀ. ದೂರದಲ್ಲಿರುತ್ತವೆ. (ಚಂದ್ರನ ದೂರದ ಮೂರು ಪಟ್ಟು). ಇದನ್ನು 'ಹತ್ತಿರ' ಎಂದೇ ಪರಿಗಣಿಸಲಾಗುವುದು. ಕೆಲವೊಮ್ಮೆ ಇವು ಚಂದ್ರನಷ್ಟು ಸಮೀಪ ಬಂದಾಗ ದೂರದರ್ಶಕಗಳ ನೋಟಕ್ಕೆ ನಿಲುಕುತ್ತವೆ. ಪತ್ತೆಯಾದ ಕೇವಲ ಇಪ್ಪತ್ತನಾಲ್ಕು ಗಂಟೆಗಳೊಳಗಾಗಿ ಅವನ್ನು ಗಮನಿಸುವ ಕಾರ್ಯ ನಡೆಸಬೇಕಾಗುತ್ತದೆ. ಇದಕ್ಕೆಂದು ವಿಶೇಷ ವ್ಯವಸ್ಥೆ ಇದೆ.

೧೯೭೨ರ ಅಕ್ಟೋಬರ್‌ನಲ್ಲಿ ಹೀಗೊಂದು ಕ್ಷುದ್ರಗ್ರಹ ಭೂಮಿಯ ಮೇಲೆ ಅಪ್ಪಳಿಸಿತು. ಅದು ಅಪ್ಪಳಿಸುತ್ತದೆ ಎಂದು ಮೊದಲೇ ಗೊತ್ತಿದ್ದರಿಂದ ಜನ ವೀಡಿಯೋ ಕ್ಯಾಮರಾ ಹಿಡಿದು ಸಜ್ಜಾಗಿದ್ದರು. ಉರಿಯುತ್ತಾ ಬಿದ್ದ ಅದು ನ್ಯೂಯಾರ್ಕ್ ಸಮೀಪದ ಪೀಕ್‌ಸ್ಕಿಲ್ ಎಂಬಲ್ಲಿ ಕಾರೊಂದರ ಮೇಲೆ ಬಿದ್ದು ಘಾಸಿಮಾಡಿತು. ೨೦೦೦ದಲ್ಲಿ ರಷ್ಯಾದ ಮೀರ್ ಎಂಬ ಅಂತರಿಕ್ಷ ಪ್ರಯೋಗಶಾಲೆಯೂ ಹೀಗೆ ಪೆಸಿಫಿಕ್ ಸಾಗರದಲ್ಲಿ ಬಿದ್ದುದನ್ನು ಫಿಲಿಪೈನ್ಸ್‌ನ ನಿವಾಸಿಗಳು ಕಂಡರು. ಇದರ ಕೊನೆಯ ಎರಡು-ಮೂರು ಸುತ್ತುಗಳಲ್ಲಿ ಅದು ಸಾಕಷ್ಟು ಕೆಳಗೆ ಬಂದಿದ್ದುದರಿಂದ ಬರಿಗಣ್ಣಿನಿಂದಲೇ ಅದರ ಭಾಗಗಳನ್ನು ಸ್ಫುಟವಾಗಿ ಕಾಣಬಹುದಾಗಿತ್ತು. ಇಂಟರ್‌ನ್ಯಾಷನಲ್ ಸ್ಪೇಸ್ ಸ್ಟೇಷನ್‌ನ ಓಟವನ್ನು ಗಮನಿಸಿ, ಅದರ ವೇಗವನ್ನು ಲೆಕ್ಕಹಾಕಿ ತನ್ಮೂಲಕ ಅದರ ಎತ್ತರದ ಅಂದಾಜು ಮಾಡುವ ಲೆಕ್ಕ ವಿದ್ಯಾರ್ಥಿಗಳಿಗೆ ಉತ್ತಮ ಚಟುವಟಿಕೆಯಾಗುತ್ತದೆ.

'ಭೂಮಿಗೊಂದು ಹೊಸ ಉಪಗ್ರಹ' ಎಂಬ ಸುದ್ದಿ ೨೦೦೩ರಲ್ಲಿ ಹರಡಿತ್ತು. ಭೂಮಿಯನ್ನು ಸುತ್ತುತ್ತಿದ್ದ ಈ ತುಣುಕು ಏನು ಎಂಬುದನ್ನು ಪತ್ತೆಮಾಡಿದಾಗ ಸ್ವಾರಸ್ಯಕರವಾದ ಅಂಶ ಹೊರಬಿತ್ತು. ನಾಲ್ಕು ದಶಕಗಳ ಹಿಂದೆ ಚಂದ್ರನತ್ತ ಹಾರಿಬಿಟ್ಟ ನೌಕೆಯೊಂದು ದಾರಿತಪ್ಪಿ ದೂರ ಹಾರಿಹೋಗಿತ್ತು. ಆದರೆ ಭೂಮಿಯ ಹಿಡಿತಕ್ಕೆ ಒಳಪಟ್ಟು ದೀರ್ಘವೃತ್ತ ಕಕ್ಷೆಯಲ್ಲಿ ಸುತ್ತತೊಡಗಿತ್ತು. ಅದು ಹತ್ತಿರ ಬಂದಾಗ ಕಾವಲು ಪಡೆಯ ಗೃಧ್ರದೃಷ್ಟಿಗೆ ಸಿಕ್ಕಿ ಹೊಸ ಉಪಗ್ರಹ ಎಂಬ ಗುಲ್ಲು ಎದ್ದಿತ್ತು.

ಇತ್ತೀಚೆಗೆ ಹಾರಿದ ಪಿಎಸ್‌ಎಲ್‌ವಿ-೬ (ಆರನೇ ಮೇ ೨೦೦೫) ಎಂಬುದರ ಉಡಾವಣೆಯ ಕಾಲವನ್ನು ಕೊನೆಯ ಕ್ಷಣದಲ್ಲಿ ಮುಂದಕ್ಕೆ ಹಾಕಬೇಕಾಗಿ ಬಂದದ್ದಕ್ಕೆ ಯಾವುದೋ ಒಂದು ನಿರುಪಯುಕ್ತ ತುಣುಕೇ ಕಾರಣ.

ನಮ್ಮ ಪೂರ್ವಜರು ನೋಡುತ್ತಿದ್ದ ನಕ್ಷತ್ರ-ಗ್ರಹಗಳನ್ನೇ ನಾವು ನೋಡುತ್ತಿದ್ದೇವೆ ಯಾದರೂ ಕಳೆದ ನಾಲ್ಕೂವರೆ ದಶಕಗಳಲ್ಲಿ ಹತ್ತುಸಾವಿರಕ್ಕೂ ಹೆಚ್ಚು 'ಕಸ'ವನ್ನು ಅಲ್ಲಿ ತುರುಕಿ, ಕೃತಕ ನಕ್ಷತ್ರಗಳನ್ನು ನಿರ್ಮಿಸಿದ್ದೇವೆ. ಸದ್ಯಕ್ಕೆ ಇವು ನಭೋವಲೋಕನಕ್ಕೆ ಅಡ್ಡಿ ಮಾಡದಿದ್ದರೂ ಮುಂದೊಂದು ದಿನ ಸ್ಥಿರನಕ್ಷತ್ರಗಳಿಗಿಂತ ಓಡುವ ನಕ್ಷತ್ರಗಳೇ ಹೆಚ್ಚಾಗಿ ಕಾಣತೊಡಗಬಹುದು.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧



# ಹೊಸ ಹುರುಪು

ಡಾ|| ಬಿ. ಎಸ್. ಶೈಲಜಾ

ವರುಣನ ಆರ್ಭಟ ಕಳೆದು ನೀಲಿ ಆಕಾಶದ ದರ್ಶನವಾಗುತ್ತಿರುವಂತೆ ನಭಾಸಕ್ತರು ಚುರುಕಾಗುತ್ತಾರೆ. ಅವರಿಗಾಗಿ ಹೊಸ ಹೊಸ ಅಂಕಣಗಳನ್ನು ತೆರೆದಿಟ್ಟ ಆಕಾಶ ಹೊಸ ಹುರುಪನ್ನೇ ಮೂಡಿಸಲಿದೆ – ಈ ತಿಂಗಳಲ್ಲಿ.

ಮಾಸಾನಾಂ ಮಾಗಶೀರ್ಷೋಹಂ ಎಂದುದೇಕೆ? ಇದರ ಉತ್ತರ ಪಡೆಯಲು ಕತ್ತೆತ್ತಿ ನೋಡಿದರೆ ಸಾಕು. ಪಶ್ಚಿಮ ಆಕಾಶವೇಕೋ ಖಾಲಿ ಎನ್ನಲು ನಿರಾಕರಿಸುವಂತೆ ಶುಕ್ರ ಫಳಗುಟ್ಟುತ್ತಿರುತ್ತದೆ. ಇದರೊಡನೆ ಸ್ಪರ್ಧೆಗಿಳಿದ ಇನ್ನೊಂದು ಕಿತ್ತಲೆಬಣ್ಣದ ಚುಕ್ಕೆ ಮಂಗಳ ನೆತ್ತಿಗೆ ಸಮೀಪವಾಗಿಯೇ ಇದೆ. ಪೂರ್ವದಂಚಿಗೆ ಚಿತ್ತಾರಗಳು ಅನೇಕ. ವೃಷಭ, ಒರೈಯನ್ (ಮಹಾವ್ಯಾಧ), ಆರಿಗಾ (ವಿಜಯ ಸಾರಥಿ) ಇವುಗಳೇ ಮುಖ್ಯ ಆಕರ್ಷಣೆ. ಉತ್ತರದಲ್ಲಿ ಕಾಸಿಯೋಪಿಯಾ (ಕುಂತಿ), ಸಿಫಿಯುಸ್ (ಯುಧಿಷ್ಠಿರ), ಪರ್ಸಿಯುಸ್ (ಪಾರ್ಥ) ಇವರ ರಂಗಮಂದಿರವೂ ಸಜ್ಜಾಗಿದೆ. ದಕ್ಷಿಣದಲ್ಲೊಂದು ಪ್ರಕಾಶಮಾನ ನಕ್ಷತ್ರ ಮೀನಾಕ್ಷಿ(ಫಾಮಲ್‌ಹೌಟ್).

ಚಂದ್ರನಿಲ್ಲದಾಗ ಆಕಾಶಗಂಗೆಯ ಹರಿವನ್ನು ಗುರುತಿಸಲು ಪ್ರಯತ್ನಿಸಬಹುದು. ಪಶ್ಚಿಮದಂಚಿನಲ್ಲಿ ಮರೆಯಾಗುತ್ತಿರುವ ಬೇಸಿಗೆ ತ್ರಿಕೋಣದ ಮೂಲಕ ಹರಿದುಬರುವ ಗಂಗೆಯನ್ನು ಗುರುತಿಸುವುದು ಕಷ್ಟ. ಕುಂತಿ ಪುಂಜದಲ್ಲಿ ತಿರುಗಿದಂತೆ ಕಾಣುವ ನದಿ ಮುನ್ನಡೆಯುವ ಮಾರ್ಗವನ್ನು ಪತ್ತೆಹಚ್ಚಬಹುದು. ಕುಂತಿಯಿಂದ ಪಾರ್ಥ, ಮುಂದೆ ವಿಜಯಸಾರಥಿ, ಆ ಮುಂದೆ ಮಿಥುನ, ಮಹಾವ್ಯಾಧ – ಇವುಗಳ ನಡುವೆ ಹರಿದುಹೋಗುತ್ತದೆ ಈ ಗಂಗೆ.

ಅತಿ ಪ್ರಕಾಶಮಾನವಾದ ಶುಕ್ರ ಧನುರಾಶಿಯಿಂದ ಮಕರಕ್ಕೆ ಚಲಿಸುತ್ತದೆ. ಚಲನೆ ನಿಧಾನವಾದಂತೆ ಕಾಣುತ್ತದೆ. ೨೪ರಂದು ತಟಸ್ಥವಾಗಿ ಹಿಮ್ಮುಖ ಚಲನೆ ಆರಂಭವಾಗುತ್ತದೆ. ಆದರೆ ಈ ಚಲನೆಯನ್ನು ಸ್ಫುಟವಾಗಿ ಗುರುತಿಸಲು ಹಿನ್ನೆಲೆಯಲ್ಲಿ ಪ್ರಕಾಶವಾದ ನಕ್ಷತ್ರಗಳಿಲ್ಲ ಎಂಬುದೇ ಕೊರತೆ.

ಕಳೆದ ತಿಂಗಳು ಅತಿ ಸಮೀಪವಾಗಿದ್ದ ಮಂಗಳಗ್ರಹ ಈಗ ದೂರ ಸರಿಯುತ್ತಿದೆ. 'ವಿಯುತಿ' ಎಂಬ ಈ ಘಟನೆಯ ಅಂತ್ಯವನ್ನು ಸೂಚಿಸಲು ಮಂಗಳ ೧೦ರಂದು ತಟಸ್ಥವಾಗುವುದು. ಆ ಮುಂದೆ ಅದು ತನ್ನ ನೇರ ಚಲನೆಯನ್ನು ಅನುಸರಿಸಿಕೊಂಡು ಪುನಃ ಮೇಷದಿಂದ ವೃಷಭದ ದಿಕ್ಕಿಗೆ ಚಲಿಸತೊಡಗುವುದು. ದುರ್ಬೀನಿನಿಂದ ಮಂಗಳದ ಹಿನ್ನೆಲೆಯ ನಕ್ಷತ್ರಗಳನ್ನು ಗಮನಿಸುತ್ತಿದ್ದರೆ ಈ ಅಂಶ ಸ್ಪಷ್ಟವಾಗುವುದು.




ರಾತ್ರಿ ೧೦-೧೧ ಗಂಟೆಯ ಹೊತ್ತಿಗೆ ಪೂರ್ವದ ಅಂಚಿನಲ್ಲಿ ಕಾಣುವ ಇನ್ನೊಂದು ಚುಕ್ಕೆಯೇ ಶನಿ. ಇದರ ವಿಯುತಿ ಸನ್ನಿಹಿತವಾಗಿದೆ. ತಿಂಗಳ ಕೊನೆಗೆ ರಾತ್ರಿ ೯ಕ್ಕೆ ಉದಯಿಸುವ ಇದು ಕಟಕ ರಾಶಿಯ ಸುಂದರ ಗುಚ್ಛ ಪ್ರೆಸಿಪಿಯ ಆಸುಪಾಸಿನಲ್ಲೇ ಇದೆ. ದುರ್ಬೀನಿನಲ್ಲಿ ನೋಡಿದಾಗ ಎರಡೂ ಒಟ್ಟಿಗೇ ಕಾಣುತ್ತವೆ. ಆದರೆ ಪ್ರೆಸಿಪಿ ಕ್ಷೀಣ; ಶನಿ ಪ್ರಕಾಶವಾದದ್ದು. ಆದ್ದರಿಂದ ದುರ್ಬೀನಿನಲ್ಲಿ 'ದೆವ್ವ' ಮೂಡಬಹುದು. ದೆವ್ವ ಎಂದರೇನು ಎಂದು ನೆನಪಿರಬೇಕಲ್ಲಾ? ದುರ್ಬೀನು, ಕ್ಯಾಮರಾಗಳಲ್ಲಿ ಮಾತ್ರ ಮೂಡುವ ಒಂದು ಕ್ಷೀಣ ಬಿಂಬ. ಅತಿ ಪ್ರಕಾಶಮಾನವಾದ ಚುಕ್ಕೆಯನ್ನು ನೋಡಿದಾಗ ಇಂತಹ ದೆವ್ವಗಳು ಉಂಟಾಗುತ್ತವೆ. ಇವುಗಳ ಕಾರಣ ಅಕ್ಕಪಕ್ಕದ ಕ್ಷೀಣ ಕಾಯಗಳು ಕಾಣದಂತಾಗುತ್ತವೆ.

ಗುರುಗ್ರಹ ಬೆಳಗಿನ ಜಾವ ಸೂರ್ಯೋದಯಕ್ಕೆ ಮುಂಚೆ ಪೂರ್ವದಲ್ಲಿ ಕಾಣುತ್ತದೆ. ತಿಂಗಳ ಮಧ್ಯದಲ್ಲಿ ಬುಧಗ್ರಹವೂ ಪೂರ್ವದಂಚಿನಲ್ಲಿ ಇದೇ ಹೊತ್ತಿನಲ್ಲಿ ಕಾಣುತ್ತದೆ.

ಮಾರ್ಗದರ್ಶಿ ಚಂದ್ರ ತಿಂಗಳುದ್ದಕ್ಕೂ ಗ್ರಹ, ನಕ್ಷತ್ರಗಳೊಡನೆ ಆಡುತ್ತಾ ಮುಂದುವರೆಯುತ್ತಾನಷ್ಟೇ. ಆಗ ಒದಗುವ ಮನೋಹರ ನೋಟಗಳು ಛಾಯಾಗ್ರಾಹಕರಿಗೆ ಒಳ್ಳೆಯ ಅವಕಾಶ. ಆದರೆ ಎಲ್ಲಕ್ಕಿಂತ ಮುಖ್ಯವಾದೊಂದು ಅವಕಾಶ ೨೯ರ ಬೆಳಗಿನ ಜಾವಕ್ಕೆ ಸಜ್ಜಾಗಿದೆ. ಬೆಳಗಿನ ಜಾವ ವೃಶ್ಚಿಕ ರಾಶಿಯನ್ನು ಪೂರ್ವದಂಚಿನಲ್ಲಿ ಗುರುತಿಸಿ ಪ್ರತಿದಿನವೂ ಗಮನಿಸುತ್ತಾ ಬನ್ನಿ. ಮುಂಜಾವಿನ ತಿಳಿಗೆಂಪಿನಲ್ಲಿ ಸ್ಫುಟವಾಗಿ ಕಾಣುವ ಕೆಂಪು ನಕ್ಷತ್ರ ಜ್ಯೇಷ್ಠಾ. ೨೮ರ ಬೆಳಿಗ್ಗೆ ಬಾಲಚಂದ್ರನ ಕೆಳಗೆ ಈ ಕೆಂಪು ಚುಕ್ಕೆ; ಮೇಲೆ ಗುರುಗ್ರಹ. ೨೯ರ ಬೆಳಿಗ್ಗೆ ನೋಡಿ – ಗುರು ಯಥಾಸ್ಥಾನದಲ್ಲಿ. ಚಂದ್ರ ಇನ್ನೂ ಕೆಳಕ್ಕೆ ಜಾರಿದೆ. ಕೆಂಪುಚುಕ್ಕೆ ನಾಪತ್ತೆ. ಇದೇ ಆಚ್ಛಾದನೆ. (ಈ ಕೆಂಪು ಚುಕ್ಕೆಯ ಬದಲು ಅಲ್ಲಿ ಸೂರ್ಯ ಇದ್ದಿದ್ದರೆ ಸೂರ್ಯಗ್ರಹಣ ಎನಿಸಿಕೊಳ್ಳುತ್ತಿತ್ತು.) ಚಂದ್ರೋದಯಕ್ಕೆ ಮೊದಲೇ ಜ್ಯೇಷ್ಠಾ ಮುಚ್ಚಿಹೋಗಿರುತ್ತದೆ. ಘಟನೆ ಮುಗಿದು ಜ್ಯೇಷ್ಠಾ ಕಾಣತೊಡಗುವಾಗ ನಮಗಿಲ್ಲಿ ಸೂರ್ಯೋದಯ ಆಗಿಹೋಗಿರುತ್ತದೆ. ಆದ್ದರಿಂದ ಈ ಘಟನೆ ಜನಸಾಮಾನ್ಯರಿಗೆ ವಿಶೇಷ ಎನ್ನಿಸದಿದ್ದರೂ ನಿನ್ನೆ ಇದ್ದ ನಕ್ಷತ್ರ ಇಂದು ''ಕಳೆದುಹೋಗಿದೆ'' ಎಂದು ಗುರುತಿಸಬಲ್ಲವರಿಗೆ ಸವಾಲಾಗುತ್ತದೆ.

ಚಿತ್ರಾ ನಕ್ಷತ್ರ ಕೂಡ ೨೫ರಂದು ಹೀಗೆಯೇ ಚಂದ್ರನ ಹಿಂದೆ ಮರೆಯಾಗಲಿದೆ. ಆದರೆ ಆ ಘಟನೆ ನಮಗೆ ಕಾಣುವುದಿಲ್ಲ. ಮಂಗಳಗ್ರಹದ ಆಚ್ಛಾದನೆ ೧೨ರಂದು. ಅದೂ ನಮಗೆ ಕಾಣುವುದಿಲ್ಲ.

೨೨ರ ಬೆಳಿಗ್ಗೆ ಉತ್ತರಾಯಣ. ಅಂದು ಸೂರ್ಯ ದಕ್ಷಿಣದ ಗರಿಷ್ಠ ಬಿಂದುವನ್ನು ತಲುಪುವುದರಿಂದ ಆ ಮುಂದಿನ ಚಲನೆ ಉತ್ತರಕ್ಕೆ. ಭೂಮಿಯ ಕಕ್ಷೆಯಲ್ಲಿನ ಒಂದು ಮುಖ್ಯ ಘಟ್ಟ ಇದು.



೧೨ನೆಯ ತಾರೀಖಿನ ಸಂಜೆ ಪೂರ್ವ ದಿಕ್ಕಿನಲ್ಲಿ ಮಂಗಳ ಚಂದ್ರ ಜೋಡಿ



೧೨ನೆಯ ತಾರೀಖಿನ ಬೆಳಗಿನ ಜಾವ ಪೂರ್ವ ದಿಕ್ಕಿನಲ್ಲಿ ಬುಧ ಮತ್ತು ಗುರು ಜೋಡಿ

೧೩ನೆಯ ತಾರೀಖಿನ ಬೆಳಗಿನ ಜಾವ ಜೆಮಿನಿಡ್ಸ್ ಹೆಸರಿನ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ ಇದೆ. ಆದರೆ ಪೂರ್ಣಚಂದ್ರನ ಬೆಳಕೇ ಇದರ ವೀಕ್ಷಣೆಗೆ ಅಡಚಣೆಯಾಗುವುದು.

ಅಮಾವಾಸ್ಯೆಯಿಂದ ಆರಂಭವಾಗುವ ತಿಂಗಳು ಅಮಾವಾಸ್ಯೆಗೇ ಮುಗಿಯುವುದು. ಇದು ಮಹತ್ವದ ಸಂಗತಿಯೇನಲ್ಲ. ಆದರೆ ಪಾಡ್ಯ ೨ನೇ ತಾರೀಖು ಬಿದಿಗೆ ೩ನೇ ತಾರೀಖು – ಹೀಗೆ ನೆನಪಿನಲ್ಲಿಟ್ಟುಕೊಳ್ಳಲು ಸುಲಭ. ಅಷ್ಟೇ.

## ಖಗೋಳ ದಿನಚರಿ

೧ ಅಮಾವಾಸ್ಯೆ ೨೦ : ೩೧ಕ್ಕೆ
೪ ಶುಕ್ರ-ಚಂದ್ರ ಮೂರು ಡಿಗ್ರಿ ಕೋನದಲ್ಲಿ *
೫ ಚಂದ್ರ-ಭೂಮಿ ದೂರ ಕನಿಷ್ಠ
೮ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೧೦ ಮಂಗಳದ ಹಿಮ್ಮುಖ ಚಲನೆ ಮುಕ್ತಾಯ
೧೨ ಮಂಗಳ-ಚಂದ್ರ ನಡುವೆ ೧ ೧/೨ ಡಿಗ್ರಿ ಕೋನ *
(ಆಚ್ಛಾದನೆ ಕಾಣುವುದಿಲ್ಲ) ಗುರು-ಬುಧ ಜೋಡಿ *
೧೩ ಜೆಮಿನಿಡ್ಸ್ ಉಲ್ಕಾವೃಷ್ಟಿ
೧೫ ಹುಣ್ಣಿಮೆ ೨೧ : ೪೫ಕ್ಕೆ
ಚಂದ್ರನ ಪಕ್ಕ ಇರುವ ನಕ್ಷತ್ರವೇ ಮೃಗಶಿರಾ
೧೯ ಶನಿ-ಚಂದ್ರ ನಡುವೆ ನಾಲ್ಕು ಡಿಗ್ರಿ ಅಂತರ *
೨೧ ಭೂಮಿ-ಚಂದ್ರ ದೂರ ಗರಿಷ್ಠ
೨೨ ಬೆಳಿಗ್ಗೆ ೦೦ : ೦೫ಕ್ಕೆ ಉತ್ತರಾಯಣ
೨೩ ಶುಕ್ರದ ಹಿಮ್ಮುಖ ಚಲನೆ ಆರಂಭ
ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೨೫ ಚಿತ್ರಾ-ಚಂದ್ರ ನಡುವೆ ಕನಿಷ್ಠಕೋನ * (ಆಚ್ಛಾದನೆ ಕಾಣುವುದಿಲ್ಲ)
೨೬ ಚಂದ್ರ-ಗುರು ನಡುವೆ ನಾಲ್ಕು ಡಿಗ್ರಿ ಕೋನ *
೨೯ ಜ್ಯೇಷ್ಠಾ ನಕ್ಷತ್ರ ಚಂದ್ರನ ಹಿಂದೆ ಅಡಗಿರುತ್ತದೆ.
ಚಂದ್ರ-ಬುಧ ನಡುವೆ ಐದು ಡಿಗ್ರಿಕೋನ *
೩೧ ಅಮಾವಾಸ್ಯೆ ೮ : ೪೨ಕ್ಕೆ
(* ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ)

ಡಾ। ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

## ಬೆಣ್ಣೆರೊಟ್ಟಿ ಕೆಂಪು ಖಾರಾ



ಬೆಣ್ಣೆ ರೊಟ್ಟಿ ಕೆಂಪು ಖಾರಾ
ಹೊಟ್ಟೆ ತುಂಬ ಉಣ್ಣ ಬಾ
ಪುಂಡಿಪಲ್ಲೆ ಡೊಣ್ಣಗಾಯಿ
ಕುಸುಬಿ ಎಣ್ಣೆ ಸವಿಯ ಬಾ

ಎರೆ ಹೊಲದ ಕರೆ ಹೆಣ್ಣಿನ
ಕುರಿ ಕೂದಲ ಎಣಿಸಬಾ
ಎದಿ ತುಂಬ ಹಾಲು ಹೈನಾ
ಖಾಸ ಮಾತು ಕೇಳ ಬಾ

ಚಳಿಯು ಬೆಚ್ಚಗ ಬಿಸಿಲು ತಣ್ಣಗ
ಕನಸು ನುಣ್ಣಗ ಕಾಣಬಾ
ಹೊಟ್ಟಿ ಹಸಿವು ರೊಟ್ಟಿ ರುಚಿಯು
ರಟ್ಟಿ ಮುರಿದು ದುಡಿಯ ಬಾ

ಗಾಳಿಯೊಳಗೆ ಗೂಳಿಯಾಗಿ
ನೂರು ವರುಸಾ ದುಡಿಯ ಬಾ
ಹಲ್ಲು ಗಟ್ಟಿ ಕಣ್ಣು ಜಿಟ್ಟಿ
ಹತ್ತು ರೊಟ್ಟಿ ತಿನ್ನ ಬಾ

ಭೂಮಿ ತಾಯಿಗೆ ಶರಣು ಶರಣೊ
ಕಣದ ಹಬ್ಬಾ ಮಾಡ ಬಾ
ಡೊಣಗ ಮಕ್ಕಳು ಚಿರ್ಚ ಹೆಂಡತಿ
ರಾಸಿ ಪೂಜೆಯ ಮಾಡ ಬಾ.

ಪ್ರೊ॥ ಜಿ. ಎಚ್. ಹನ್ನೆರಡುಮಠ
'ಮಾವು ಮಲ್ಲಿಗೆ', ಯೋಗ ಭವನ : ಇಂದ್ರಪ್ರಸ್ಥ
ನ್ಯಾಷನಲ್ ಪಾರ್ಕ್ ರಸ್ತೆ, ಗೊಟ್ಟಿಗೆರೆ ಅಂಚೆ, ಬೆಂಗಳೂರು - ೫೬೦ ೦೮೩




# ಇರಾನಿನ ಮೇಲೆ ಆಕ್ರಮಣ ನಡೆಸಲು ಅಮೆರಿಕಾದ ಸನ್ನಾಹ

**ಸಾ**ಮೂಹಿಕ ವಿನಾಶಕಾರಿ ಅಸ್ತ್ರಗಳ ದಾಸ್ತಾನನ್ನು ಇರಿಸಿಕೊಂಡಿದೆ ಎಂದು ಸುಳ್ಳು ಆಪಾದನೆ ಹೊರಿಸಿ ಇರಾಕಿನ ಮೇಲೆ ದುರಾಕ್ರಮಣ ನಡೆಸಿದ ಅಮೆರಿಕ ಈಗ ಇರಾನಿನ ಮೇಲೆ ಹರಿಹಾಯಲು ಸನ್ನದ್ಧವಾಗುತ್ತಿದೆ. ಇದಕ್ಕಾಗಿ ಅದು ಬಳಸುತ್ತಿರುವ ತಂತ್ರವೂ ಕೂಡ ಅದೇ ಮಾದರಿಯದೆ. ಇರಾನ್ ಪರಮಾಣು ಅಸ್ತ್ರ ತಯಾರಿಕೆಯಲ್ಲಿ ತೊಡಗಿದೆ ಎನ್ನುವುದು ಅಮೆರಿಕದ ಆರೋಪ. ಇರಾಕಿನ ಮೇಲೆ ಆಕ್ರಮಣ ಎಸಗಲು ವಿಶ್ವಸಂಸ್ಥೆಯ ವೀಕ್ಷಕ ಹ್ಯಾನ್ಸ್ ಬ್ಲಿಕ್ಸ್‌ನನ್ನು ಉಪಯೋಗಿಸಿಕೊಂಡಂತೆ, ಇರಾನಿನ ವಿಷಯದಲ್ಲಿ ಅಂತರರಾಷ್ಟ್ರೀಯ ಪರಮಾಣು ಶಕ್ತಿ ಸಂಸ್ಥೆಯ ಮುಖ್ಯಸ್ಥ ಮಹಮ್ಮದ್ ಅಲ್ ಬರಾದಿಯನ್ನು ಉಪಯೋಗಿಸಿಕೊಳ್ಳುತ್ತಿದೆ. ಅಣ್ವಸ್ತ್ರ ಪ್ರಸರಣ ನಿಷೇಧ ಒಪ್ಪಂದಕ್ಕೆ ಸಹಿ ಹಾಕಿರುವ ಇರಾನ್ ಇದುವರೆಗೆ ಅದರ ನಿಬಂಧನೆಗಳನ್ನು ಕರಾರುವಾಕ್ಕಾಗಿ ಪಾಲಿಸುತ್ತ ಬಂದಿದೆ ಮತ್ತು ಅಣ್ವಸ್ತ್ರ ತಯಾರಿಕೆಯಲ್ಲಿ ತೊಡಗಿರುವ ಸುಳಿವೂ ಇಲ್ಲ ಎಂದು ಹೇಳುತ್ತಿದ್ದ ಮಹಮ್ಮದ್ ಅಲ್ ಬರಾದಿ ಈಗ ರಾಗ ಬದಲಿಸಿದ್ದಾರೆ; ಸಂದೇಹ ವ್ಯಕ್ತಪಡಿಸಿದ್ದಾರೆ. ಇವರಿಗೆ ಈ ವರ್ಷದ ನೊಬೆಲ್ ಶಾಂತಿ ಪಾರಿತೋಷಕ ದೊರೆಯಿತು ಎಂಬುದನ್ನು ಗಮನಿಸಬೇಕು. ಅಂತಾರಾಷ್ಟ್ರೀಯ ಪರಮಾಣು ಶಕ್ತಿ ಸಂಸ್ಥೆಯ ಕಳೆದ ಸಭೆಯಲ್ಲಿ ಅಮೆರಿಕದ ಕುಮ್ಮಕ್ಕಿನಿಂದ ಯೂರೋಪಿನ ತ್ರಿಕೂಟ ಇರಾನಿನ ಮೇಲೆ ಕ್ರಮ ಕೈಗೊಳ್ಳುವಂತೆ ವಿಶ್ವಸಂಸ್ಥೆಯ ಭದ್ರತಾ ಮಂಡಳಿಗೆ ಶಿಫಾರಸು ಮಾಡುವ ನಿರ್ಣಯ ಅನುಮೋದನೆ ಪಡೆದಿದೆ. ಈ ವಿಚಾರದಲ್ಲಿ ಭಾರತ ಅಮೆರಿಕದ ಒತ್ತಡಕ್ಕೆ ಮಣಿದು ನಿರ್ಣಯದ ಪರ ಮತ ನೀಡಿದ್ದು ಶೋಚನೀಯ, ಖಂಡನೀಯ. ಸರಕಾರದ ಈ ಕ್ರಮಕ್ಕೆ ದೇಶದಲ್ಲಿ ಸಾಕಷ್ಟು ಪ್ರತಿಭಟನೆ ಬಂದಿದೆ. ಮುಂದೆ ಸರಕಾರ ತನ್ನ ತಪ್ಪನ್ನು ತಿದ್ದಿಕೊಳ್ಳಬೇಕು, ಇಲ್ಲದಿದ್ದಲ್ಲಿ ಪರಿಣಾಮ ಎದುರಿಸಬೇಕಾದೀತು ಎಂದು ಎಡಪಕ್ಷಗಳು ಸರಕಾರಕ್ಕೆ ಸ್ಪಷ್ಟವಾದ ಎಚ್ಚರಿಕೆ ನೀಡಿವೆ. ಇದು ಹಾಗಿರಲಿ, ಅಮೆರಿಕ ಮಾತ್ರ ತನ್ನ ದುರಾಕ್ರಮಣ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಎಲ್ಲ ತಯಾರಿ ನಡೆಸಿದೆ, ಕಾಲಗಣನೆ ಪ್ರಾರಂಭವಾಗಿದೆ.

ಇರಾನಿನ ಮೇಲೆ ಅಮೆರಿಕದ ಹಗೆತನ ಹಲವು ವರ್ಷಗಳ ಹಿಂದಿನಿಂದ ಬೆಳೆದುಬಂದಿದೆ. ಇರಾನ್ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯಲ್ಲಿ ತೊಡಗಿದೆ ಎಂದು ಆ ರಾಷ್ಟ್ರ ವಾದಿಸುತ್ತಲೇ ಬಂದಿದೆ. ಭಯೋತ್ಪಾದನೆಯ ವಿರುದ್ಧ ಸಮರ ಸಾರಿದಾಗಲೇ ಅಮೆರಿಕವು ಇರಾಕ್, ಉತ್ತರ ಕೊರಿಯ, ಇರಾನ್‌ಗಳನ್ನು 'ದುಷ್ಟಕೂಟ' ಎಂದು ಕರೆದಿತ್ತು. ಮಧ್ಯ ಪ್ರಾಚ್ಯದ ತೈಲ ಸಂಪತ್ತಿನ ಮೇಲೆ ಸಂಪೂರ್ಣ ನಿಯಂತ್ರಣ ಸಾಧಿಸಲು ಅಡ್ಡಿಯಾಗಿರುವ ದೇಶಗಳನ್ನು ಒಂದೊಂದಾಗಿ ನುಂಗುವುದು ಅಮೆರಿಕದ ಗುರಿ. ಜಗತ್ತಿನ ಮೇಲೆ ತನ್ನ ಅಧಿನಾಯಕತ್ವ ಹೊರಿಸಲು ಇದು ಅದಕ್ಕೆ ಅತ್ಯಗತ್ಯ. ಈ ಪ್ರದೇಶದಲ್ಲಿ ಅಮೆರಿಕಾದ ಬಲೆಗೆ ಬೀಳದೆ ಉಳಿದಿರುವುದು ಇರಾನ್, ಸಿರಿಯ ಎರಡೇ. ಇರಾಕಿನ ಆಕ್ರಮಣವಾದ ನಂತರ ಇರಾನನ್ನು ಮಣಿಸಲು ಈಗ ಕಾಲ ಕೂಡಿಬಂದಿದೆ ಎನ್ನುವುದು ಜಾರ್ಜ್ ಬುಷ್ ಕಂಪೆನಿಯ ಲೆಕ್ಕಾಚಾರ. ಮುಂದಿನ ಸರದಿ ಸಿರಿಯ. ಎರಡನೇ ಮಹಾಯುದ್ಧದ ನಂತರ ಬಲಿಷ್ಠ ರಾಷ್ಟ್ರವಾಗಿ ಹೊಮ್ಮಿದ ಅಮೆರಿಕಾಗೆ ಮಧ್ಯಪ್ರಾಚ್ಯದ ಮೇಲೆ ಸ್ವಾಮ್ಯ ಸ್ಥಾಪಿಸುವ ಹೆಬ್ಬಯಕೆ. ೧೯೪೮ರಲ್ಲಿ ಸ್ಥಾಪನೆಗೊಂಡ ಇಸ್ರೇಲ್ ಅಮೆರಿಕಾದ ಪಿತೂರಿಗಳಿಗೆ ಪ್ರಶಸ್ತ ನೆಲೆ. ಸೋವಿಯೆತ್ ಒಕ್ಕೂಟ ಅಸ್ತಿತ್ವದಲ್ಲಿದ್ದಾಗ ಈ ಪ್ರದೇಶದಲ್ಲಿ ಅಮೆರಿಕಾದ ಮುನ್ನಡೆ ಕ್ಲಿಷ್ಟವಾಗಿತ್ತು. ಆನಂತರ ಅಮೆರಿಕ ಒಂದಾದ ಮೇಲೊಂದರಂತೆ ಈ ಪ್ರದೇಶದ ದೇಶಗಳ ಮೇಲೆ ಹಿಡಿತ ಸಾಧಿಸಿದೆ. ಯೂರೋಪಿನ ವಸಾಹತುಶಾಹಿಗಳಂತೆ ವಸಾಹತು ನಿರ್ಮಾಣ ಅಮೆರಿಕದ ನೀತಿಯಲ್ಲ; ಬದಲು ಪರೋಕ್ಷವಾಗಿ ಕೈವಾಡ ನಡೆಸುವುದು ಸುಲಭವೆಂದು ಆ ರಾಷ್ಟ್ರ ಪರಿಗಣಿಸುತ್ತದೆ. ಹೊಣೆಗಾರಿಕೆ ಇಲ್ಲ ಅದರ ಮಟ್ಟಿಗೆ. ಅದಕ್ಕಾಗಿಯೇ ಕೈಗೊಂಬೆ ಸರಕಾರಗಳ ಸ್ಥಾಪನೆ. ಎಲ್ಲ ನಡೆಸುವುದು ಪ್ರಜಾಪ್ರಭುತ್ವ ಸ್ಥಾಪನೆಯ ಮಂತ್ರ ಜಪಿಸಿ, ಈ ತಂತ್ರವನ್ನು ಜೀರ್ಣಿಸಿಕೊಳ್ಳುವುದು ಅದಕ್ಕೆ ಸುಲಭವೇನಲ್ಲ. ಇರಾಕ್ ಇನ್ನೂ ನುಂಗಲಾರದ ತುತ್ತು.

ಮಧ್ಯ ಪ್ರಾಚ್ಯದಲ್ಲಿ ಆಯಕಟ್ಟಿನ ಪ್ರದೇಶದಲ್ಲಿರುವ ಇರಾನಿನ ಮೇಲೆ ಅಮೆರಿಕ ಯಾವಾತ್ತೂ ನಿಗಾ ಇರಿಸಿದೆ. ಐವತ್ತು ವರ್ಷಗಳಿಗೂ ಹಿಂದೆ ಇರಾನಿನಲ್ಲಿ ಪ್ರಜಾಪ್ರಭುತ್ವಕ್ಕಾಗಿ ನಡೆದ ಆಂದೋಳನ ಯಶಸ್ವಿಯಾಯಿತು. ೧೯೨೫ರಿಂದ ನಿರಂಕುಶ ಆಡಳಿತ ನಡೆಸುತ್ತಿದ್ದ ಅಮೆರಿಕಕ್ಕೆ ಆಪ್ತವಾಗಿದ್ದ ಷಾ ಪಹ್ಲವಿ ವಂಶದ ಆಳ್ವಿಕೆ ಅಂತ್ಯಗೊಂಡಿತು. ಷಾ ಅಮೆರಿಕಾಗೆ ಓಡಿಹೋದ. ೧೯೫೩ರಲ್ಲಿ ಹೊಸದಾಗಿ ಅಧಿಕಾರಕ್ಕೆ ಬಂದ ಪ್ರಜಾಪ್ರಭುತ್ವ ಸರಕಾರ ದೇಶದ ಹಿತದೃಷ್ಟಿಯಿಂದ ತೈಲೋದ್ಯಮವನ್ನು ರಾಷ್ಟ್ರೀಕರಣ ಮಾಡಲು ಕೈಗೊಂಡ ಕ್ರಮಗಳು, ಅನುಸರಿಸಿದ ಸ್ವತಂತ್ರ ವಿದೇಶಿ ನೀತಿ ಅಮೆರಿಕದ ಆಡಳಿತಗಾರರಿಗೆ ಅಪ್ರಿಯವಾಗಿತ್ತು. ತನ್ನ ಕುಖ್ಯಾತ ಗೂಢಚರ್ಯೆ ಸಂಸ್ಥೆ ಸಿಐಎ ಕಾರ್ಯಾಚರಣೆಯಿಂದ ಆ ಸರಕಾರವನ್ನು ಉರುಳಿಸಿ ಮತ್ತೆ ಷಾ ಪಹ್ಲವಿ ವಂಶಸ್ಥನನ್ನು ಅಧಿಕಾರಕ್ಕೇರಿಸಿತು. ಸುಮಾರು ಎರಡು ದಶಕಗಳಿಗೂ ಹೆಚ್ಚು ಕಾಲ ಅಮೆರಿಕದ ಕೃಪೆಯಿಂದ ಅಧಿಕಾರದಲ್ಲಿದ್ದ ಷಾನ ಭ್ರಷ್ಟ ಆಡಳಿತ ಕೊನೆಗೆ ಅದರ ಆಂತರಿಕ ದೌರ್ಬಲ್ಯದಿಂದಲೇ ಪತನಗೊಂಡಿತು. ಷಾನ ಆಡಳಿತಾವಧಿಯಲ್ಲೇ ಅಮೆರಿಕ ಇರಾನಿನ ನ್ಯೂಕ್ಲಿಯರ್ ಶಕ್ತಿ ಯೋಜನೆಗೆ ಬೆಂಬಲ ನೀಡಿತ್ತು. ಎಂಟು ನ್ಯೂಕ್ಲಿಯರ್ ರಿಯಾಕ್ಟರುಗಳನ್ನೂ ಅದಕ್ಕೆ ಅಗತ್ಯವಾದ ಇಂಧನವನ್ನೂ ಅಮೆರಿಕ ಸರಬರಾಜು ಮಾಡಿತ್ತು. ಇರಾನ್ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯಲ್ಲಿ ತೊಡಗುವ ಸಾಧ್ಯತೆ ಆಗಲೇ ಇತ್ತು. ಷಾ ಅಮೆರಿಕದ ಕೈಗೊಂಬೆಯಾಗಿದ್ದುದರಿಂದ ಅಮೆರಿಕ ಅಂಥ ಸಾಧ್ಯತೆಯನ್ನು ಕಡೆಗಣಿಸಿತು. ಇಸ್ಲಾಮಿಕ್ ಮೂಲಭೂತವಾದಿಗಳ ನೇತೃತ್ವದಲ್ಲಿ ಅನಂತರ ಅಧಿಕಾರಕ್ಕೇರಿದ ಸರಕಾರ ಅಮೆರಿಕಾಗೆ ವಿರೋಧಿಯಾಗಿತ್ತು. ಅದನ್ನು ಕಿತ್ತೊಗೆಯಲು ಅಮೆರಿಕ ಸತತ ಪ್ರಯತ್ನ ನಡೆಸಿತು. ಅದಕ್ಕಾಗಿ ಇರಾನಿನ ಸದ್ದಾಮ್ ಹುಸೇನ್‌ಅನ್ನು ಇರಾನಿನ ವಿರುದ್ಧ ಎತ್ತಿಕಟ್ಟಿತು. ದೀರ್ಘಕಾಲ ಜರುಗಿದ ಇರಾಕ್-ಇರಾನ್ ಯುದ್ಧದಲ್ಲಿ ಅಮೆರಿಕ ಇರಾಕಿಗೆ ಪರೋಕ್ಷವಾಗಿ ಎಲ್ಲ ಬೆಂಬಲ ನೀಡಿ ದೊಡ್ಡ ಪ್ರಮಾಣದಲ್ಲಿ ಆಯುಧ ಸಾಮಗ್ರಿಗಳನ್ನು ಒದಗಿಸಿತು. ಅದರಿಂದೇನೂ ಪ್ರಯೋಜನವಾಗಲಿಲ್ಲ. ಯುದ್ಧದಲ್ಲಿ ಎರಡೂ ದೇಶಗಳೂ ಸಾಕಷ್ಟು ಕಷ್ಟ ನಷ್ಟ ಅನುಭವಿಸಿ, ಕೊನೆಗೆ ಶಾಂತಿ ಒಪ್ಪಂದಕ್ಕೆ ಬಂದವು. ಈಗ ಇದೆಲ್ಲ ಇತಿಹಾಸ. ಮುಂದಿನ ಬೆಳವಣಿಗೆಗಳೆಲ್ಲ ಈಚಿನದಾಗಿದ್ದು ಸರ್ವವಿದಿತ.

ಸುಮಾರು ಮೂರು ದಶಕಗಳಿಂದ ನ್ಯೂಕ್ಲಿಯರ್ ಶಕ್ತಿಯನ್ನು ಶಾಂತಿಯುತ ಉದ್ದೇಶಗಳಿಗಾಗಿ ಬಳಸುತ್ತ ಬಂದಿರುವ ಇರಾನ್ ಈಗ ಅಮೆರಿಕದ ದೃಷ್ಟಿಯಲ್ಲಿ ಏಕಾಏಕಿ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯಲ್ಲಿ ತೊಡಗಿದೆ. ಸಾಕಷ್ಟು ಯುರೇನಿಯಮ್ ನಿಕ್ಷೇಪ ಹೊಂದಿರುವ ಇರಾನ್ ತೈಲೋತ್ಪನ್ನ ರಾಷ್ಟ್ರವಾಗಿರುವುದರಿಂದ ಅದಕ್ಕೆ ಹಣದ ಕೊರತೆ ಇಲ್ಲ. ಹಾಗಾಗಿ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಗೆ ಬೇಕಾದ ತಂತ್ರಜ್ಞಾನ ಪಡೆದುಕೊಂಡು ಅಸ್ತ್ರ ತಯಾರಿಕೆಯಲ್ಲಿ ತೊಡಗುವುದು ಕಷ್ಟವೇನಲ್ಲ. ಇಂದು ಸಂಪನ್ಮೂಲ ಹೊಂದಿರುವ ಯಾವುದೇ ರಾಷ್ಟ್ರ ಇಂಥ ದುಸ್ಸಾಹಸಕ್ಕೆ ಕೈಹಾಕಬಲ್ಲದು. ಆದರೆ ಇರಾನ್ ಇದುವರೆಗೆ ಅಂಥ ಪ್ರಯತ್ನದಲ್ಲಿ ತೊಡಗಿಲ್ಲ ಎನ್ನುವುದನ್ನು ಸ್ಪಷ್ಟಪಡಿಸಿದೆ. ಅಂತಾರಾಷ್ಟ್ರೀಯ ಪರಮಾಣು ಶಕ್ತಿ ಸಂಸ್ಥೆಯ ಎಲ್ಲ ನಿಯಮ ಕಟ್ಟಳೆಗಳನ್ನು ಚಾಚೂತಪ್ಪದೆ ಪಾಲಿಸಿದೆ. ಇರಾನಿನ ನ್ಯೂಕ್ಲಿಯರ್ ಸ್ಥಾವರಗಳನ್ನು ತಪಾಸಣೆ ಮಾಡಿದ ಅಧಿಕಾರಿಗಳು ಆ ಅಂಶವನ್ನು ಒಪ್ಪಿದ್ದಾರೆ. ಆದರೂ ಅಮೆರಿಕ ರಹಸ್ಯವಾಗಿ ಇರಾನ್ ನ್ಯೂಕ್ಲಿಯರ್ ಅಸ್ತ್ರ ತಯಾರಿಸುತ್ತಿದೆ ಎಂದು ಆಪಾದಿಸುತ್ತಿದೆ. ಇರಾನಿನ ಬಗ್ಗೆ ಇಷ್ಟೆಲ್ಲ ಬೊಬ್ಬೆ ಹಾಕುತ್ತಿರುವ ಅಮೆರಿಕ ಇಸ್ರೇಲಿನ ನ್ಯೂಕ್ಲಿಯರ್ ಅಸ್ತ್ರದ ಬಗ್ಗೆ ಏಕೆ ಚಕಾರವೆತ್ತಿಲ್ಲ? ಇದಕ್ಕೆ ಉತ್ತರ ಅನಗತ್ಯ. ವಿಶ್ವಸಂಸ್ಥೆಯ ಅಭಿಮತವನ್ನು, ಪ್ರಪಂಚದ ಜನಾಭಿಪ್ರಾಯವನ್ನು, ತನ್ನ ಪ್ರಜೆಗಳ ಕಳವಳವನ್ನು ಕಡೆಗಣಿಸಿ ಇರಾಕಿನ ಮೇಲೆ ದಾಳಿ ನಡೆಸಿದ ಅಮೆರಿಕ ಏನು ಮಾಡಲೂ ಹೇಸುವುದಿಲ್ಲ. ಅದಕ್ಕೆ ಕಡಿವಾಣ ಹಾಕಲು ಜಗತ್ತಿನಾದ್ಯಂತ ಜನಾಭಿಪ್ರಾಯವನ್ನು ಕ್ರೋಡೀಕರಿಸುವುದೊಂದೇ. ಮಾರ್ಗ. ಅಮೆರಿಕದ ದುಷ್ಟ ಹಂಚಿಕೆಯಲ್ಲಿ ಭಾರತ ಸರಕಾರ ಶಾಮೀಲಾಗದಂತೆ ತಡೆಹಿಡಿಯುವುದು ಸದ್ಯದ ನಮ್ಮ ಆದ್ಯ ಕರ್ತವ್ಯ.

ಸೀಯಾರ್ಕೆ
'ಚೌಬೀನ', ೮೪೯, ಬನಶಂಕರಿ ಮೂರನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

ಹೊಸ ಓದು



## ಲಹರಿಯ ಲಾಸ್ಯ (ಪ್ರಬಂಧಗಳು)

*ಡಾ|| ಡಿ. ಬಿ. ರಾಮಚಂದ್ರಾಚಾರ್*

**ಪುಟ :** ೩೧೪ **ಬೆಲೆ :** ರೂ. ೧೦೦

**ಸುನಂದ ಪ್ರಕಾಶನ,** ೧೧೪, ೫ನೇ ಮುಖ್ಯರಸ್ತೆ, ಪೂರ್ಣಪ್ರಜ್ಞ ಲೇಔಟ್, ಬಿ.ಎಸ್.ಕೆ. ೩ನೇ ಹಂತ, ಬೆಂಗಳೂರು - ೫೬೦ ೦೮೫

*ಡಿ. ಬಿ. ರಾಮಚಂದ್ರಾಚಾರ್ ಅವರ ಐವತ್ತೈದು ಲಘು ಪ್ರಬಂಧಗಳನ್ನು 'ಲಹರಿಯ ಲಾಸ್ಯ' ಕೃತಿಯಲ್ಲಿ ಕಾಣಬಹುದು. 'ವೈಚಾರಿಕ ಹರಟೆ'ಗಳೆಂದು ಲೇಖಕರು ತಮ್ಮ ಬರಹಗಳನ್ನು ಗುರುತಿಸಿಕೊಂಡಿದ್ದಾರೆ. ಹೀಗಾಗಿ ಅವು ವೈಚಾರಿಕ ಬರಹವೂ ಆಗದೆ, ಲಲಿತ ಪ್ರಬಂಧವೂ ಆಗದೆ ಲೋಕಾಭಿರಾಮ ಹರಟೆಗಳಾಗಿವೆ. ಕೆಲವುಕಡೆ ಒಳನೋಟಗಳು, ಉತ್ತಮ ಹಾಸ್ಯ, ಕಂಡುಬರುತ್ತದೆ. ಸುಮ್ಮನೆ ಹರಟುವ ಸಂಗತಿಗಳನ್ನೆಲ್ಲಾ ಬರಹದ ರೂಪಕ್ಕೆ ಇಳಿಸಿದರೆ ಅದು ದಾರ ಕಿತ್ತ ಗಾಳಿಪಟದಂತೆ ಎಲ್ಲೆಲ್ಲೋ ಸುತ್ತುತ್ತದೆ ಎಂಬುದಕ್ಕೆ ಈ ಪುಸ್ತಕ ಸಾಕ್ಷಿಯಾಗಿದೆ. ಪು.ತಿ.ನ. ಅವರ ನಾಟಕಗಳನ್ನು ಕುರಿತು ಸಂಶೋಧನೆಯನ್ನು ನಡೆಸಿರುವ ಲೇಖಕರು ಪು.ತಿ.ನ. ಅವರ ಒಡನಾಟದ ನೆನಪುಗಳನ್ನು ಕುರಿತ ಆತ್ಮೀಯ ಲೇಖನವೊಂದನ್ನು ಇಲ್ಲಿ ಬರೆದಿದ್ದಾರೆ.*



## ಗಾಯ (ಕಥಾ ಸಂಕಲನ)

*ಡಾ|| ಮಾಧವಿ ಭಂಡಾರಿ*

**ಪುಟ :** ೯೬ **ಬೆಲೆ :** ರೂ. ೪೫

**ಪುಸ್ತಕ ನಿಧಿ ಪ್ರಕಾಶನ,** ಗಾವಳಿ, ಹಳ್ಳಾಡಿ - ಹರ್ಕಾಡಿ - ೫೭೬ ೨೧೦, ಕುಂದಾಪುರ ತಾ|

*ಹಿಂದೀ ಭಾಷೆಯ ಪ್ರಾಧ್ಯಾಪಕರಾಗಿರುವ ಈ ಲೇಖಕಿ ಬರೆದ ಹತ್ತು ಕತೆಗಳು ಇಲ್ಲಿ ಸಂಕಲಿತವಾಗಿವೆ. ಇಲ್ಲಿನ ಕತೆಗಳು ಹಲವು ಜನಪ್ರಿಯ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. 'ರಾಜಮಾತೆಯ ಸ್ವರ್ಗಾರೋಹಣ ಪರ್ವ' ಎಂಬ ಕತೆಗೆ ಹಿಂದಿ ಕತೆಯೊಂದು ಪ್ರೇರಣೆ ಒದಗಿಸಿದೆ. ಮನುಷ್ಯ ಸಂಬಂಧಗಳ ನಾನಾಮುಖಗಳನ್ನು ಚಿತ್ರಿಸುವ ಇಲ್ಲಿನ ಕತೆಗಳ ಸ್ವರೂಪ ವ್ಯಾಸರಾಯ ಬಲ್ಲಾಳರ ಕತೆಗಳನ್ನು ನೆನಪಿಗೆ ತರಿಸುತ್ತದೆ. ಗರುಡರೇಖೆ ರಹಸ್ಯದಂತಹ ಕತೆಗಳು ಸಣ್ಣ ಕತೆಗಳ ಶಿಲ್ಪದ ವ್ಯಾಪ್ತಿಗೆ ಬರುವುದಿಲ್ಲ. ಕೆಲವು ಕತೆಗಳ ವಿಡಂಬನೆ ಉತ್ತಮ ಮಟ್ಟದಲ್ಲಿದೆ. ಬಹುಪಾಲು ಕತೆಗಳು ಸಿದ್ಧ ಮಾದರಿಗಳನ್ನು ಆಶ್ರಯಿಸಿವೆ. ಎಸ್. ಹಯವದನ ಉಪಾಧ್ಯ ಅವರು ಈ ಕೃತಿಗೆ ಮುನ್ನುಡಿ ಬರೆದಿದ್ದಾರೆ. ಎಲ್ಲ ಕತೆಗಳು 'ಪ್ರಗತಿಪರ'ವಾಗಿ 'ಸಮಾಜಮುಖಿ'ಯಾಗಿರಬೇಕೆಂಬ ಅವರ ಒರಟು ಆಶಯವನ್ನು ಮಾರ್ಗದರ್ಶಿಯಾಗಿ ತೆಗೆದುಕೊಳ್ಳುವುದು ಅಪಾಯಕಾರಿ.*



## ಉಸಿರಾಟದ ಗುರುತು (ಪರಾಮರ್ಶನ ಲೇಖನಗಳು)

*ಡಾ|| ಅರ್ಜುನಪುರಿ ಅಪ್ಪಾಜಿಗೌಡ*

**ಪುಟ :** ೨೨೮ **ಬೆಲೆ :** ರೂ. ೨೦೦

**ಶ್ರೀ ಸಿದ್ಧಾರೂಢ ಪ್ರಕಾಶನ,** ಮದ್ದೂರು

*ಅರ್ಜುನಪುರಿ ಅಪ್ಪಾಜಿಗೌಡರ ಇಪ್ಪತ್ತೇಳು ಲೇಖನಗಳನ್ನು ಈ ಪುಸ್ತಕ ಒಳಗೊಂಡಿದೆ. ಶಾಸನದಿಂದ ಹಿಡಿದು ಆಧುನಿಕ ಸಾಹಿತ್ಯದತನಕ ಲೇಖನಗಳ ಹರವು ಇದೆ. ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಲೇಖನಗಳನ್ನು ಒಟ್ಟುಗೂಡಿಸುವುದರಿಂದ ಬರಹಕ್ಕೆ ಏಕರೂಪತೆ ಇಲ್ಲ. ರಾವಂದೂರು ದೇವಪ್ಪ, ಕೆಂಪೇಗೌಡ, ಸೀತಾಸುತ ಮುಂತಾದ ಅಷ್ಟು ಪರಿಚಿತರಲ್ಲದ ಲೇಖಕರ ಬಗ್ಗೆ ಬರೆದಿರುವುದು ಗಮನಾರ್ಹ. ಕುವೆಂಪು, ಕಾರಂತ, ಪಾಟೀಲ ಪುಟ್ಟಪ್ಪ ಮುಂತಾದವರ ಬಗ್ಗೆ ಬರೆದ ಬರಹಗಳಲ್ಲಿ ವಿಮರ್ಶೆಗಿಂತ ಮುಗ್ಧವಾದ ಗೌರವ ಕಂಡುಬರುತ್ತದೆ. ನಂಜನಗೂಡು ತಿರುಮಲಾಂಬ ಬಗ್ಗೆ ಬರೆದ ಲೇಖನ ಸಾಕಷ್ಟು ಮಾಹಿತಿಗಳನ್ನು ಒಳಗೊಂಡಿದೆ; ಅದೇ ರೀತಿ ಜಾನಪದದ ಬಗ್ಗೆ ಬರೆದ ಬರಹಗಳು. 'ಮಂಡ್ಯ ಜಿಲ್ಲೆಯ ಆಧುನಿಕ ಸಾಹಿತಿಗಳು' ಎಂಬ ಲೇಖನ ಕೆಲವು ಪ್ರಾಥಮಿಕ ಸಂಗತಿಗಳನ್ನು ತಿಳಿಸುತ್ತದೆ. ಅದಲ್ಲದೆ ಲೇಖಕರು ಹಿಂದೆ ಬರೆದ ಲೇಖನವನ್ನು ಪರಿಷ್ಕರಿಸದಿರುವುದರಿಂದ ವಿವರಣೆಗಳು ಅನೇಕ ಕಡೆ ಅಪೂರ್ಣ ಮಾಹಿತಿಗಳನ್ನು ಕೊಡುತ್ತದೆ. ಲೇಖಕರ 'ಹೃದಯದ ಮಿಡಿತ' ಇಲ್ಲಿ ಕಾಣುವುದರಿಂದ ಪುಸ್ತಕದ ಹೆಸರು 'ಉಸಿರಾಟದ ಗುರುತು !'*



## ಖರೇ ಖರೇ ಸಂಗ್ಯಾ-ಬಾಳ್ಯಾ (ಸಣ್ಣಾಟ)

*ಎಂ. ಎಂ. ಕಲಬುರ್ಗಿ*

**ಪುಟ :** viii+೬೮ **ಬೆಲೆ :** ರೂ. ೩೦

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ ಗಾಂಧಿನಗರ, ಬಳ್ಳಾರಿ - ೫೮೩ ೧೦೩

*ಎಂ. ಎಂ. ಕಲಬುರ್ಗಿ ಸೃಜನಶೀಲ ಲೇಖಕರಿಗಿಂತ ಹೆಚ್ಚಾಗಿ ಸಂಶೋಧಕರೆಂದು ಪ್ರಸಿದ್ಧಿಯನ್ನು ಪಡೆದಿದ್ದಾರೆ. ಅವರ ಸಂಶೋಧಕ ಪ್ರವೃತ್ತಿ ಈ ನಾಟಕದ ರಚನೆಗೆ ಕಾರಣವಾಗಿದೆ. ಕಲಬುರ್ಗಿಯವರ ವಿಚಾರಗಳಿಗೆ ವಿದ್ವಾಂಸರಲ್ಲಿ ಸಾಕಷ್ಟು ಪರ-ವಿರೋಧ ಬಂದಿದೆ. ಸಂಗ್ಯಾ-ಬಾಳ್ಯಾ ಪತ್ತಾರ ಮಾಸ್ತರ ಬರೆದಿದ್ದು ಕಂಬಾರ, ಕುರ್ತಕೋಟಿ ಅವರು ಅದರ ಪ್ರಾಮುಖ್ಯತೆಯನ್ನು ಗುರುತಿಸಿದ್ದಾರೆ. ಈ ನಾಟಕಕ್ಕೆ ಇತಿಹಾಸದ ಹಿನ್ನೆಲೆ ಇದೆ. ನಿರಪರಾಧಿಯಾದ ಗಂಗಿಯ ಬಗ್ಗೆ ಪತ್ತಾರ ಮಾಸ್ತರ ಸೇಡಿನ ಭಾವನೆಯಿಂದ ನಾಟಕ ಬರೆದು ಅವಳ ವ್ಯಕ್ತಿತ್ವಕ್ಕೆ ಮಸಿ ಬಳಿದಿದ್ದಾರೆಂದು ಅದನ್ನು ತಿದ್ದಲು 'ಖರೇ ಖರೇ' ನಾಟಕವನ್ನು ಕಲಬುರ್ಗಿ ಬರೆದಿದ್ದಾರೆ. ಹಾಗದ ಗರತಿಯನ್ನು ವಿಷದ ಲೇಖನಿಯಿಂದ ಹಾಳುಮಾಡುವ ಧೋರಣೆಯನ್ನು ಈ ಕೃತಿ ಖಂಡಿಸುತ್ತದೆ. ಸೃಜನಶೀಲ ಕೃತಿಯೊಂದು ಕಲಾವಿದನನ್ನು ಮೀರಿ ಬೆಳೆದಿರುತ್ತದೆ. ಅದರ 'ಇತಿಹಾಸ'ದ ಸತ್ಯ ಅಷ್ಟು ಮುಖ್ಯವಲ್ಲ. ನಾಟಕವಾಗಿ ಹಳೆಯ ಸಂಗ್ಯಾ-ಬಾಳ್ಯಾವೇ ಉತ್ತಮ ಕೃತಿಯಾಗಿದೆ ಎಂಬುದು 'ಖರೇ ಖರೇ !'*



## ಹಿಂದೂ ಮಂದಿರಗಳು ಹಾಗೂ ಔರಂಗಜೇಬನ ಆದೇಶಗಳು

*ಮೂಲ : ಡಾ|| ಬಿ. ಎನ್. ಪಾಂಡೆ*
*ಅನು : ಹಸನ್ ನಯೀಂ ಸುರಕೋಡ*

**ಪುಟ :** x+೩೮ **ಬೆಲೆ :** ರೂ. ೨೦

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

*ಇತಿಹಾಸದ ಪುಸ್ತಕ ರಚನೆಯಲ್ಲಿ ವಸ್ತುನಿಷ್ಠತೆ ಇರಬೇಕೆಂಬುದು ಆದರ್ಶವಾದರೂ ಹಲವಾರು ಇತಿಹಾಸದ ಪುಸ್ತಕಗಳು ಲೇಖಕರ ಪೂರ್ವಾಗ್ರಹ ಮನೋಭಾವದಿಂದ ಓದುಗರಿಗೆ ದಿಕ್ಕು ತಪ್ಪಿಸುತ್ತವೆ. ಇತಿಹಾಸದ ಪಠ್ಯಪುಸ್ತಕಗಳು ಇದಕ್ಕೆ ಹೊರತಲ್ಲ. ಶಿವಾಜಿ, ಟಿಪ್ಪೂ ಸುಲ್ತಾನ, ಔರಂಗಜೇಬ್ ಇಂತಹವರ ಬಗ್ಗೆ ಸಾಕಷ್ಟು ಅತಿರೇಕದ ಬರಹಗಳು ರಚಿತವಾಗಿವೆ. ಹಿಂದೂ ವಿರೋಧಿ ಎಂಬುದು ಔರಂಗಜೇಬನ ಬಗ್ಗೆ ಪ್ರಚಲಿತವಾಗಿರುವ ನಂಬಿಕೆ. ಆದರೆ ಪಾಂಡೆಯವರ ಪುಸ್ತಕ ಔರಂಗಜೇಬನು ಅಂತಹ ಮತಾಂಧನಾಗಿರಲಿಲ್ಲ ಎಂಬ ಸಂಗತಿಗಳನ್ನು ಹಲವಾರು ಪುರಾವೆಗಳಿಂದ ಚಿತ್ರಿಸುತ್ತದೆ. ಔರಂಗಜೇಬನ ಹಲವಾರು ಆದೇಶಗಳ ಪಠ್ಯಗಳು, ಇತಿಹಾಸ ಹಾಗೂ ಕೋಮುವಾದದ ಬಗ್ಗೆ ಕಾಸ್ಮಿ ಅವರು ಬರೆದ ಲೇಖನ ಉಪಯುಕ್ತವಾಗಿದೆ. ಅನುವಾದ ಸಹ ಉತ್ತಮವಾಗಿದೆ.*



## ಸರಸ್ವತೀ ನದಿ : ಪುರಾಣ - ಇತಿಹಾಸ - ವಿಜ್ಞಾನ

*ಟಿ. ಆರ್. ಅನಂತರಾಮು*

**ಪುಟ :** ೧೦೪ **ಬೆಲೆ :** ರೂ. ೪೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೯, ಬೆಂಗಳೂರು - ೧

*ಭೂವಿಜ್ಞಾನಕ್ಕೆ ಸಂಬಂಧಿಸಿದ ಹಲವು ಉಪಯುಕ್ತ ಪುಸಕಗಳನು ಬರೆದಿರುವ ಟಿ. ಆರ್. ಅನಂತರಾಮು ಅವರು ಸರಸ್ವತೀ ನದಿಯನ್ನು ಕುರಿತು ಸಾಕಷ್ಟು ಮಾಹಿತಿಗಳನ್ನು ಈ ಪುಸ್ತಕದಲ್ಲಿ ಕೊಟ್ಟಿದ್ದಾರೆ. ಪುರಾಣ, ಇತಿಹಾಸ, ವಿಜ್ಞಾನಗಳು ನಮ್ಮ ಹಲವಾರು ವಿದ್ವಾಂಸರ ಬರಹಗಳಲ್ಲಿ ಕಲಬೆರಕೆಯಾಗಿ ಓದುಗರಿಗೆ ಗೊಂದಲ ಉಂಟುಮಾಡುತ್ತವೆ. ಆದರೆ ಈ ಪುಸ್ತಕ ಮೂರು ದೃಷ್ಟಿಗಳನ್ನೂ ಸಮತೋಲನದಿಂದ ಚಿತ್ರಿಸುತ್ತದೆ. ಸರಸ್ವತಿ ನದಿ ಗುಪ್ತಗಾಮಿನಿಯಾಗಿ ಹರಿಯುತ್ತದೆ ಎಂಬುದು ಧಾರ್ಮಿಕ ನಂಬಿಕೆ. ಆದರೆ ಸರಸ್ವತೀ ನದಿ ತನ್ನ ಇತಿಹಾಸದಲ್ಲಿ ಯಾವ ರೀತಿ ಅಸ್ತಿತ್ವವನ್ನು ಕಳೆದುಕೊಂಡಿತು ಎಂಬುದನ್ನು ಅನಂತರಾಮು ಅವರು ವೈಜ್ಞಾನಿಕವಾಗಿ ನಿರೂಪಿಸಿದ್ದಾರೆ. ನದಿಯ ಬಗ್ಗೆ ನಡೆದ ಶೋಧನೆಗಳ ವಿವರಗಳು, ಚಿತ್ರಗಳು ಪುಸ್ತಕಕ್ಕೆ ಅಧಿಕೃತತೆಯನ್ನು ತಂದುಕೊಟ್ಟಿವೆ.*

— ಎಚ್ಚೆಸ್ಕೆಮ್

ಒಬ್ಬ ವ್ಯಕ್ತಿಯನ್ನ ಗುರುತಿಸಲು, ಬೇರೆ ವ್ಯಕ್ತಿಯಿಂದ ವ್ಯಕ್ತಿಯನ್ನ ಬೇರ್ಪಡಿಸಲು ಮಾತ್ರ ವ್ಯಕ್ತಿಗೆ ಹೆಸರು ಬೇಕು ಎಂಬ ಸಾಮಾನ್ಯ ಹೇಳಿಕೆ ಸೀಮಿತವಾಗುತ್ತದೆ. ಹೆಸರಲ್ಲೇನಿದೆ ಎನ್ನುವುದಕ್ಕಿಂತ ಹೆಸರಲ್ಲೇನಿಲ್ಲ ಎಂಬುದು ಮುಖ್ಯವಾಗುತ್ತದೆ. 'ನಾಮೋಲ್ಲೇಖ ವ್ಯವಹಾರ ಹೇತುಃ' ಎಂದು ಬೃಹಸ್ಪತಿ ಹೇಳಿದ್ದರೂ ವ್ಯವಹಾರ ಕಾರಣಕ್ಕಿಂತ ಹೆಸರಿನಲ್ಲಿ ಬ್ರಹ್ಮಾಂಡವೇ ಅಡಗಿದೆ ಎಂಬುದು ಸತ್ಯ. ಆದರೆ ಶ್ರೀಸಾಮಾನ್ಯನಿಗೆ ಅರಿಯದಂತೆ ಹೆಸರುಗಳಿಂದಲೇ ಸಾಮಾಜಿಕ ತಾರತಮ್ಯವನ್ನ ಮುಂದುವರೆಸಲು ಕೆಲವು ಮನಸ್ಸುಗಳು ಕೆಲಸ ಮಾಡುತ್ತಿವೆ.

ಬೇಟೆಯಾಡಿ ಬದುಕುತ್ತಿದ್ದ ಮಾನವ ಅಲೆಮಾರಿಯಾಗಿದ್ದ. ಅಂದು ಅವನಿಗೆ ಚಿಕ್ಕ ಕುಟುಂಬ ಇರುತ್ತಿದ್ದು ಅನ್ಯ ಸಂಪರ್ಕ ಕಡಿಮೆಯಾಗಿತ್ತು. ಆ ಹೊತ್ತಿನಲ್ಲಿ ಅವನಿಗೆ ಹೆಸರಿನ ಸಮಸ್ಯೆ ಇರುತ್ತಿರಲಿಲ್ಲ. ಕೃಷಿಯನ್ನ ಕಂಡುಕೊಂಡ ಅಲೆಮಾರಿಗೆ ಒಂದೆಡೆ ನೆಲೆಸುವುದು ಅನಿವಾರ್ಯವಾಯಿತು. ಆ ನೆಲೆಗೆ ಅನ್ಯ ಕುಟುಂಬಗಳು ಬಂದು ಸೇರಿ ಗ್ರಾಮದ ರಚನೆ ಯಾಯಿತು. ಈ ಘಟ್ಟದಲ್ಲಿ ದಿನನಿತ್ಯದ ವ್ಯವಹಾರಕ್ಕೆ ಉಪಯೋಗವಾಗುವ ಪ್ರೌಢವ್ಯಕ್ತಿಗಳನ್ನು ಗುರುತಿಸುವುದು ಕಷ್ಟವಾಗಿ ಹೆಸರಿನ ಅನಿವಾರ್ಯತೆ ತಲೆದೋರಿದೆ. ಇಲ್ಲಿಂದಲೇ ವ್ಯಕ್ತಿಗಳಿಗೆ ಹೆಸರಿಡುವ ಪ್ರಕ್ರಿಯೆ ಆರಂಭವಾಗಿದೆ ಎನ್ನಬಹುದು. ಅನ್ವರ್ಥ ನಾಮಗಳದ್ದು ಮೊದಲು ಅಸ್ತಿತ್ವ. ಆ ನಂತರದಲ್ಲಿ ಅಂಕಿತನಾಮಗಳು ಅಸ್ತಿತ್ವ ಪಡೆದಿವೆ.

# ಹೆಸರಿನ ಸುತ್ತ




ಎಸ್. ನಾಗಾಚಾರಿ

ವ್ಯಕ್ತಿ ಆಕಾರದಲ್ಲಿ ದೊಡ್ಡವನಾಗಿದ್ದರೆ ದೊಡ್ಡಣ್ಣ, ದೊಡ್ಡಪ್ಪ, ಸಣ್ಣವನಾಗಿದ್ದರೆ ಸಣ್ಣಪ್ಪ, ಸಣ್ಣಣ್ಣ, ಬಣ್ಣದಲ್ಲಿ ಕೆಂಪಾಗಿದ್ದರೆ ಕೆಂಚಪ್ಪ, ಕಪ್ಪಾಗಿದ್ದರೆ ಕರಿಯಪ್ಪ, ವೀರನಾಗಿದ್ದರೆ ವೀರಣ್ಣ, ವೀರಪ್ಪ ಇತ್ಯಾದಿ. ನಂತರದಲ್ಲಿ ತಾವು ನಂಬಿದ ದೇವರ ಹೆಸರುಗಳು, ತಾತ-ಮುತ್ತಾತಂದಿರ ಹೆಸರುಗಳನ್ನು ಹಾಗೂ ಪ್ರಕೃತಿಯ ಹೆಸರುಗಳನ್ನೂ ಇಡುವ ಪ್ರಕ್ರಿಯೆ ಪ್ರಾರಂಭವಾಗಿದೆ.

ಸಮಾಜದಲ್ಲಿ ವರ್ಣಗಳು ಹುಟ್ಟಿಕೊಂಡ ಮೇಲೆ ಹೆಸರುಗಳೂ ಬದಲಾಗತೊಡಗಿವೆ. ಕೇಶಿರಾಜನು ''ಅನ್ವರ್ಥಕ ನಾಮಂ ಗುಣಕ್ಕಮರ್ಥಕ್ಕನುರೂಪವಾಗಿರ್ಪುದು, ಅಂಕಿತನಾಮಂ ಪೆಸರಿಡುವನಿಷ್ಟದಿಂದೆಂತಾನುಮಿರ್ಪುದು'' ಎಂದು ಹೇಳಿದ್ದರೂ ಶ್ರೇಣೀಕೃತ ಸಮಾಜದಲ್ಲಿ ಬ್ರಾಹ್ಮಣರ ಹೆಸರು ಜ್ಞಾನಸೂಚಿಯಾಗಿಯೂ, ಕ್ಷತ್ರಿಯರ ಹೆಸರು ಶೌರ್ಯಸೂಚಿಯಾಗಿಯೂ, ವೈಶ್ಯರ ಹೆಸರು ಸಂಪತ್‌ಸೂಚಿಯಾಗಿಯೂ, ಶೂದ್ರರ ಹೆಸರು ಸೇವಾಸೂಚಿಯಾಗಿಯೂ ಇರಬೇಕೆಂದು ಹೇಳಿದರೇ ಹೊರತು ದಲಿತರ ಹೆಸರು ಏನಾಗಿರಬೇಕೆಂದು ಹೇಳಲೇ ಇಲ್ಲ. ಅಂದರೆ ದಲಿತರಿಗೆ ಹೆಸರೇ ಬೇಡ ಎಂಬುದು ಶ್ರೇಣೀಕೃತ ವ್ಯವಸ್ಥೆಯ ಇಂಗಿತವಾಗಿದೆ. ಪರಿಶಿಷ್ಟ ಜಾತಿಯಲ್ಲಿ 'ಅನಾಮಿಕ' ಎನ್ನುವ ಒಂದು ಉಪಜಾತಿ ಇರುವುದಕ್ಕೆ ಈ ಕಾರಣವೇ ಇರಬೇಕು.

ಕೊಟ್ಟಿಗೆಯ ತುಂಬ ದನಗಳಿವೆ. ಅವುಗಳಲ್ಲಿ ಕೆಲವಕ್ಕೆ ಮಾತ್ರ ಹೆಸರಿದೆ. ಗಂಗೆ, ಗೌರಿ, ರಾಮ, ತುಂಗೆ ಇಂತಹ ಹೆಸರಿರುವ ದನಗಳು ಹಾಲುಕರೆಯುವವುಗಳಾಗಿರುತ್ತವೆ; ಇಲ್ಲ ಕೆಲಸಕ್ಕೆ ಬಳಸದ ದನಗಳಾಗಿರುತ್ತವೆ. ಉಂಡಾಡಿ ದನಗಳಿಗೆ ಹೆಸರು ಇರುವುದಿಲ್ಲ. ಅಂದರೆ, ಉನ್ನತ ಸ್ಥಾನದಲ್ಲಿರುವವುಗಳು (ಉಪಯೋಗದಲ್ಲಿ) ಮಾತ್ರ ಹೆಸರಿಡಲು ಯೋಗ್ಯವಾದವು, ಉಳಿದವು ಅಯೋಗ್ಯವಾದವು. ಸಮಾಜದ ಕೆಳವರ್ಗದ ಜನರಿಗೆ ಹೆಸರು ಬೇಡ ಎಂದು ಮೇಲ್ವರ್ಗದವರು ನಿರ್ಧರಿಸಿದ್ದರು ಎಂಬುದು ಪರಿಶಿಷ್ಟ ಜಾತಿಯಲ್ಲಿ 'ಅನಾಮಿಕ' ಎಂದು ಕರೆದಿರುವುದರಿಂದಲೇ ಗೊತ್ತಾಗುತ್ತದೆ.

ಸಾಮಾಜಿಕ ತಾರತಮ್ಯವನ್ನು ತರುವ ದೃಷ್ಟಿಯಿಂದ ಕೆಲವು ಮನಸ್ಸುಗಳು ಹೆಸರಿನಿಂದಲೇ ವರ್ಗಜಾತಿಯನ್ನು ಸೂಚಿಸಬೇಕು ಎಂದು ಯೋಚಿಸುತ್ತವೆ. ಹೆಸರಿಡುವವನ ಇಷ್ಟದ ಅಂಕಿತನಾಮವನ್ನೂ ಜಾತಿ, ವರ್ಗ, ಪಂಗಡಗಳಿಗೆ ಅನುಗುಣವಾಗಿ ತಿರುಚಲು ಪ್ರಯತ್ನಿಸಲಾಗುತ್ತದೆ. ಒಂದೇ ಹೆಸರು ಬೇರೆ ಬೇರೆ ಜಾತಿಗಳಲ್ಲಿ ಬೇರೆ ಬೇರೆ ರೂಪು ಪಡೆಯುವುದನ್ನು ಸಿದ್ದನಗೌಡ ಪಾಟೀಲರ 'ನಾ ಬಸ್ಯಾ ಅಂತ' ಕವಿತೆಯಲ್ಲಿ ಗಮನಿಸಬಹುದು.

ಅಯ್ಯನಾರ ಹುಡುಗ
'ಬಸಯ್ಯ' ಅಂತ
ಗೌಡರ ಹುಡುಗ
'ಬಸನ ಗೌಡ' ಅಂತ
ಬಣಜಗೇರು
'ಬಸವರಾಜು' ಅಂತ
ಆ ಕುರುಬರ ಹುಡುಗ
'ಬಸಪ್ಪ' ಅಂತ
ನಾ 'ಬಸ್ಯಾ' ಅಂತ
ಯಾಕಂದ್ರ ನಾ ಹೊಲ್ಯಾ ಅಂತ.

ಕೆಳವರ್ಗದ ವ್ಯಕ್ತಿ ಉನ್ನತ ಅರ್ಥ ಕೊಡುವ ಹೆಸರನ್ನ ಇಟ್ಟುಕೊಂಡರೂ ಪಟ್ಟಭದ್ರ ಹಿತಾಸಕ್ತಿಗಳು ಆ ಹೆಸರನ್ನ ತಿರುಚಲು ಕಾಯುತ್ತಿರುತ್ತವೆ. ಬಾಳಪ್ಪ-ಬಾಳ್ಯಾ, ಸಂಗಪ್ಪ-ಸಂಗ್ಯಾ, ರುದ್ರಪ್ಪ-ರುದ್ರ, ಜವರಪ್ಪ-ಜವರ ಇತ್ಯಾದಿ. ದೇವನೂರು ಮಹಾದೇವ ಅವರ ಕೃತಿ 'ದ್ಯಾವನೂರು' ಮತ್ತು 'ಒಡಲಾಳ'ದ ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ ಕಥೆಯಲ್ಲಿ ಪಾರೋತಿಯ ಮಗ ರಾಜ ಆಡುವ ಮಾತ 'ನೋಡವ್ವ ನೋಡವ್ವ ಪಟೇಲ್ರ ಶಂಭಪ್ಪ ಅವ್ನಲ್ಲ ಅವ ಅವ ನನ್ನ ರಾಜ ಅನ್ನಕಿಲ್ವಂತೆ ಅಂದ ಪಾರೋತಿ ಯಾಕಂತೆ ಅಂತಂತಲೆ ರಾಜ 'ಶಂಭಪ್ಪ ಇಸ್ಕೂಲು ಬುಡ್ತಲೆ ಅಂದ, 'ನೀವ್ರು ವಲಾರ್ರು ಕಲಾ ಅದ್ಕ ನಿನ ರಾಜ ಅನ್ನಕ್ಕಿಲ್ಲ ಗೀಜ ಅಂತೀನಿ ಅಂದ' ಇಲ್ಲಿ ದೇವನೂರು ಅವರು ಸಮಾಜದಲ್ಲಿನ ಸ್ಥಿತಿಯನ್ನ ಪ್ರತಿಬಿಂಬಿಸಿದ್ದಾರೆ.

ಎಸ್. ನಾಗಾಚಾರಿ
ಸಂಶೋಧಕ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು – ೬

''ಖಡ್ಗವಾಗಲಿ ಕಾವ್ಯ ಜನರ ನೋವಿಗೆ ಮಿಡಿವ ಪ್ರಾಣಮಿತ್ರ!'' ಎನ್ನುವ ತಾತ್ವಿಕ ಧೋರಣೆಯನ್ನು ಇಟ್ಟುಕೊಂಡು ಸಾಗಿದ ದಲಿತ ಬಂಡಾಯ ಘಟ್ಟ ಕನ್ನಡ ಸಾಹಿತ್ಯಕ್ಕೆ ಇದುವರೆಗೆ ಅಪರಿಚಿತವಾಗಿದ್ದ ಹೊಸ ಸಂವೇದನೆಗಳನ್ನು ಪರಿಚಯಿಸಿದೆ. ಕನ್ನಡ ಸಾಹಿತ್ಯ ಕಂಡ ಪ್ರಮುಖ ಘಟ್ಟ ವಚನ ಸಾಹಿತ್ಯ. ಹನ್ನೆರಡನೆಯ ಶತಮಾನದ ವಚನಕಾರರು ವೀರಶೈವ ಧರ್ಮವನ್ನು ಪ್ರಚಾರಮಾಡುವುದರೊಂದಿಗೆ ಸಮಾಜ ಪರಿವರ್ತನೆಯ ಉದ್ದೇಶ ಹೊಂದಿದ್ದರು. ಅಂದು ವರ್ಣಾಶ್ರಮ ಪದ್ಧತಿಗಳು, ಮೇಲು-ಕೀಳು ಭಾವನೆಗಳು ಸಮಾಜವನ್ನು ಕಿತ್ತು ತಿನ್ನುತ್ತಿದ್ದವು. ಜನಸಾಮಾನ್ಯರ ಬದುಕು ಶೋಷಣೆಗೆ ತುತ್ತಾಗಿ ಜಾತಿಪದ್ಧತಿಯಿಂದ ತತ್ತರಿಸಿಹೋಗಿತ್ತು. ಇಂತಹ ದುಷ್ಟಪದ್ಧತಿಗಳ ವಿರುದ್ಧ ವಚನಕಾರರು ದನಿ ಎತ್ತಿ ಜನಸಾಮಾನ್ಯರನ್ನು ಅಪ್ಪಿಕೊಂಡರು. ಅವರಿಗೆ ನ್ಯಾಯ ಒದಗಿಸುವುದರೊಂದಿಗೆ ಅವರ ಧ್ವನಿಗೆ ಕೊರಳಾದರು. ಮಾನವೀಯತೆಯನ್ನು ಎತ್ತಿ ಹಿಡಿಯಲು ಪ್ರಯತ್ನಿಸಿದರು.

ವಚನಕಾರರಿಂದ ಸ್ವಲ್ಪಮಟ್ಟಿಗೆ ದಲಿತ ಬಂಡಾಯ ಸಾಹಿತ್ಯ ಸಂಘಟನೆ, ಪ್ರೇರಣೆ, ಪ್ರಭಾವಗಳನ್ನು ಪಡೆದುಕೊಂಡು ಸಾಗಿತು. ಜೊತೆಗೆ ದಕ್ಷಿಣ ಆಫ್ರಿಕಾದ 'ಕಪ್ಪು ಸಾಹಿತ್ಯ', ಆಂಧ್ರದ ವಿಪ್ಲವಸಾಹಿತ್ಯ, ಮಹಾರಾಷ್ಟ್ರದ 'ದಲಿತ ಪ್ಯಾಂಥರ್ಸ್', ತಮಿಳುನಾಡಿನ ಪೆರಿಯಾರ್ ಸಾಹಿತ್ಯ, ಮುಂತಾದ ಪ್ರಜಾಸತ್ತಾತ್ಮಕ ಎಡಪಂಥೀಯ ವಿಚಾರಗಳು ಬಂಡಾಯ ಸಾಹಿತಿಗಳು ತಮ್ಮನ್ನು ತೀವ್ರವಾಗಿ ಸಂಘಟನೆಯಲ್ಲಿ ತೊಡಗಿಸಿಕೊಳ್ಳಲು ಪ್ರೇರೇಪಿಸಿದವು. ಈ ನಿಟ್ಟಿನಲ್ಲಿ ಎಡಪಂಥೀಯ ಚಿಂತಕರಾದ ಮಾರ್ಕ್ಸ್, ಲೋಹಿಯಾ, ಅಂಬೇಡ್ಕರರ ಬದುಕು-ಬರೆಹಗಳೂ ಕೂಡ ಒತ್ತಾಸೆಯಾಗಿ ನಿಂತವು.

೧೯೭೯ನೇ ಇಸವಿ ಮಾರ್ಚ್ ತಿಂಗಳ ೧೧ರಂದು ಬೆಂಗಳೂರಿನಲ್ಲಿ ಮೊದಲನೇ ಬಂಡಾಯ ಸಾಹಿತ್ಯ ಸಮ್ಮೇಳನ ನಡೆಯಿತು. ಕನ್ನಡ ಸಾಹಿತ್ಯ ಹಿಂದೆಂದೂ ಕಾಣದಂತಹ ರೀತಿಯಲ್ಲಿ ಬಂಡಾಯ ಸಾಹಿತ್ಯ ಸಂಘಟನೆಯು ಸಾಮಾಜಿಕ ಹಾಗೂ ರಾಜಕೀಯ ಪ್ರಜ್ಞೆಯನ್ನು ಪ್ರಕಟಿಸಿದೆ. ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಈ ಸಂಘಟನೆ ತನ್ನ ತಾತ್ವಿಕ ನೆಲೆಯ ಪ್ರಣಾಳಿಕೆಯನ್ನು ಹೀಗೆ ಸ್ಪಷ್ಟಪಡಿಸಿದೆ :

''ನಮ್ಮ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅನೇಕ ವರ್ಷಗಳಿಂದ ಕಂಡುಬರುತ್ತಿರುವ ಪ್ರಗತಿಪರ ಧೋರಣೆಗಳು ತೆಗೆದುಕೊಂಡ ತಿರುವುಗಳು, ಎದುರಿಸಿದ ಸಮಸ್ಯೆಗಳು ಮತ್ತು ತಲುಪಿದ ಕ್ಷೀಣ ನೆಲೆಗಳನ್ನು ಗಮನಿಸಿದಾಗ, ಅವುಗಳಿಂದ ಪಾಠ ಕಲಿತ ವ್ಯಾಪಕ ಸ್ವರೂಪದ ಸಂಘಟನೆಯ ಅಗತ್ಯ ಗೊತ್ತಾಗುತ್ತದೆ. ಒಕ್ಕೂಟ, ಪ್ರಗತಿಪಂಥಗಳ ಸಾಫಲ್ಯ-ವೈಫಲ್ಯಗಳ ದಾಖಲೆ ನಮಗೊಂದು ಎಚ್ಚರದ ಸಂಗತಿಯೂ ಆಗಿದೆ. ನಮ್ಮ ದೇಶದ ಚಾರಿತ್ರಿಕ, ರಾಜಕೀಯ ಬೆಳವಣಿಗೆಗಳ ಸ್ವರೂಪದಿಂದಾಗಿ ಉದ್ಭವಿಸಿದ ಇಂದಿನ ವಿಶಿಷ್ಟ ಸಂದರ್ಭದ ಹಿನ್ನೆಲೆಯಲ್ಲಿ ನಮ್ಮ ಹೋರಾಟದ ನೆಲೆಯನ್ನು ಕಂಡುಕೊಳ್ಳಬೇಕಾಗಿದೆ. ಜನವಿರೋಧಿ ನಿಲುವುಗಳು ವಿವಿಧ ಮುಖವಾಡಗಳ ಮರೆಯಲ್ಲಿ ಒಂದಾಗಿ ವಿಜೃಂಭಿಸುತ್ತಿರುವ ಈ ಸಂದರ್ಭ ಪ್ರಗತಿಪರ ಧೋರಣೆಯ ಎಲ್ಲರಿಗೂ ಒಂದು ಸವಾಲು. ಈ ಸವಾಲಿಗೆ ನಮ್ಮ ಉತ್ತರ ಎಲ್ಲ ವಾಮಪಂಥೀಯರ ಸಂಘಟನೆ, ಮತ್ತೂ ಸ್ಪಷ್ಟಪಡಿಸುವುದಾದರೆ, ಸಮಕಾಲೀನ ಚರಿತ್ರೆಯ ಬೆಳವಣಿಗೆಯ ಸ್ವರೂಪದಿಂದಾಗಿ ಎಲ್ಲ ವಾಮಪಂಥೀಯರ ಸಾಂಸ್ಕೃತಿಕ ಒಗ್ಗಟ್ಟು ಈಗ ಅತ್ಯಂತ ವ್ಯಾಪಕವಾಗಿ ಹಬ್ಬುವ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. ಶೋಷಿತ ಜನತೆಯ ಪರವಾದ ನಿಲುವುಗಳನ್ನು ಸಾಂಸ್ಕೃತಿಕ ಕ್ಷೇತ್ರದಲ್ಲಿ ಭದ್ರವಾಗಿ ನೆಲೆಗೊಳಿಸುವುದು ನಮ್ಮ ಮುಖ್ಯ ಗುರಿಗಳಲ್ಲೊಂದಾಗಬೇಕು. ಮುಖ್ಯವಾಗಿ, ನಮ್ಮ ಹೋರಾಟ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದ್ದು. ದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಸಂದರ್ಭಗಳು ಪರಸ್ಪರ ಸಂಬಂಧವುಳ್ಳವು ಎಂಬ ನಿಲುವಿನಿಂದ ಹೊರಟಿದ್ದು ಸಾಹಿತಿಗೆ ಸಾಮಾಜಿಕ, ರಾಜಕೀಯ ಪ್ರಜ್ಞೆ ಇರಬೇಕೆಂಬ ಆಶಯ ಇಲ್ಲಿ ಮುಖ್ಯವಾದದ್ದು. ಅಸ್ಪೃಶ್ಯತೆ, ಜಾತಿಪದ್ಧತಿ, ಲಿಂಗಭೇದ ಮತ್ತು ವರ್ಗಭೇದ ನೀತಿಯ ವಿರುದ್ಧದ ಹೋರಾಟವನ್ನು ಕಟ್ಟುವುದು ನಮ್ಮ ಮುಖ್ಯ ಉದ್ದೇಶಗಳಲ್ಲಿ ಒಂದು. ಎಲ್ಲ ಜನಪರ ನಿಲುವುಗಳಿಗೆ ನಮ್ಮ ಬೆಂಬಲ, ಜನಪರವಾದ ಸಾಂಸ್ಕೃತಿಕ ಹೋರಾಟ ನಮ್ಮ ಮುಖ್ಯ ನೆಲೆ. ಇಂಥ ಒಲವಿನ ಸಾಹಿತ್ಯ ಸೃಷ್ಟಿ ನಮ್ಮ ಹೋರಾಟದ ದಾಖಲೆ.'' – ಇವು ಬಂಡಾಯ ಸಾಹಿತ್ಯ ಸಂಘಟನೆ ಹುಟ್ಟು ಹಾಕಿದಾಗ ತಳೆದ ಪ್ರಣಾಳಿಕೆಯ ನಿಲುವುಗಳು.

**ಕೆಲವರಾದರೂ ಬಂಡಾಯವನ್ನು ಬಿಟ್ಟುಕೊಡದೇ ಇವತ್ತಿಗೂ ಕೂಡ ಸಂಘಟನೆಯ ತಾತ್ವಿಕ ಸಿದ್ಧಾಂತಗಳ ಜೊತೆಗಿದ್ದುಕೊಂಡು ಸಾಹಿತ್ಯ ರಚಿಸುತ್ತಿದ್ದಾರೆ. ಅನೇಕ ಯುವಮನಸ್ಸುಗಳು ಬಂಡಾಯದ ಸೆಳೆತಕ್ಕೆ, ಪ್ರೇರಣೆಗೆ ಪಕ್ಕಾಗಿವೆ.**




**ಡಾ॥ ದಸ್ತಗೀರಸಾಬ್ ದಿನ್ನಿ**

ಬಂಡಾಯ ಸಾಹಿತ್ಯ ಸಂಘಟನೆಯಲ್ಲಿ ಜನಪರ ಚಿಂತನೆಯ ಅನೇಕ ಲೇಖಕರು ತಮ್ಮನ್ನು ತಾವು ತೊಡಗಿಸಿಕೊಳ್ಳುವುದರ ಜೊತೆಗೆ ಸಾಹಿತ್ಯ ರಚನೆಗೂ ಕೈಹಾಕಿದರು. ಬಂಡಾಯ ಸಾಹಿತ್ಯ ಸಂಘಟನೆಯು ಪ್ರಾರಂಭದಲ್ಲಿ ಪುರೋಹಿತಶಾಹಿ ವ್ಯವಸ್ಥೆಯ ವಿರುದ್ಧ ರೊಚ್ಚು, ಆವೇಶಗಳಿಂದ ತನ್ನ ದನಿಯನ್ನು ಪ್ರಕಟಿಸಿತು.

ಡಾ॥ ಸಿದ್ಧಲಿಂಗಯ್ಯ 'ಹೊಲೆ ಮಾದಿಗರ ಹಾಡು' ಎನ್ನುವ ಕವನ ಸಂಕಲನವನ್ನು ಪ್ರಕಟಿಸುವುದರ ಮೂಲಕ ವ್ಯವಸ್ಥೆಯ ವಿರುದ್ಧ ಸಿಡಿದೆದ್ದರು.

ಇಕ್ರಲಾ ವದೀರ್ಲಾ
ಈ ನನ್ ಮಕ್ಕಳ ಚರ್ಮ ಎಬ್ರಲಾ
ದೇವ್ರು ಒಬ್ನೇ ಅಂತಾರೆ
ಓಣಿಗೊಂದೊಂದು ತರಾ ಗುಡಿ ಕಟ್ಟವ್ರೆ
ಎಲ್ಲಾರು ದೇವ್ರ ಮಕ್ಳು ಅಂತಾರೆ
ಹೊಲೇರ್ನ ಕಂಡ್ರೆ ಹಾವ್ ಕಂಡಂಗಾಡ್ತಾರೆ.

ತಮ್ಮದೇ ಆದ ಪ್ರತಿಮೆ, ರೂಪಕಗಳನ್ನು ಬಳಸಿಕೊಂಡು ಕಾವ್ಯ ರಚನೆಗೆ ತೊಡಗಿದ ಡಾ॥ ಸಿದ್ಧಲಿಂಗಯ್ಯ ಶೋಷಕರ ವಿರುದ್ಧ ಕಿಡಿಕಾರುತ್ತಲೇ ಶೋಷಿತರಲ್ಲಿ ಸ್ವಾಭಿಮಾನವನ್ನು ಮೂಡಿಸುವತ್ತ ಯತ್ನಿಸಿದರು. ತಮ್ಮ ಕವಿತೆಗೆ ಆಡುಭಾಷೆಯ ಬನಿಯನ್ನು ಎರಕಹೊಯ್ದಾಗ ಅನೇಕ ಕಾವ್ಯಾಸಕ್ತರು ಕುತೂಹಲದಿಂದ ಇವರ ಕಾವ್ಯವನ್ನು ಗಮನಿಸಿದ್ದು ಈಗ ಇತಿಹಾಸ.

ಕಪ್ಪು ಮುಖ ಬೆಳ್ಳಿ ಗಡ್ಡ
ಉರಿಯುತಿರುವ ಕಣ್ಣುಗಳು
ಹಗಲು ರಾತ್ರಿಗಳನು ಸೀಳಿ
ನಿದ್ದೆಯನ್ನು ಒದ್ದರು,
ಕಂಬನಿಗಳು ಕೊರಗಿದವು
ಎದ್ದೇಳುವ ರೊಚ್ಚಿಗೆ

ಹೀಗೆ ಕವಿತೆಗಳನ್ನು ಬರೆಯಲು ತೊಡಗಿದರು. ಬಂಡಾಯ ಕವಿಗೆ ಒಂದು ಮಿತಿಯಿದೆ. ಆ ಮಿತಿಯಲ್ಲಿ ತನ್ನ ಅನುಭವಗಳನ್ನು ತೀವ್ರವಾಗಿ ಬಂಡಾಯ ಕವಿ ಅನಾವರಣಗೊಳಿಸುತ್ತಾನೆ. ಬಂಡಾಯ ಕವಿಗಳಿಗೆ ಪ್ರಾಸ, ಛಂದಸ್ಸುಗಳು ಮುಖ್ಯವಲ್ಲ, ಒಂದು ಸಂವೇದನೆಯನ್ನು ಕಲಾತ್ಮಕವಾಗಿ ಕಟ್ಟಿಕೊಡುವುದೇ ಬಂಡಾಯ ಸಾಹಿತಿಯ ಕೆಲಸ. ''ಹೊಸಗನ್ನಡ ಕಾವ್ಯದ ಸಂದರ್ಭದಲ್ಲಿ ದಲಿತ ಬಂಡಾಯ ಕಾವ್ಯ ಮಾತ್ರ ಬಂಡವಾಳಶಾಹಿ ವ್ಯವಸ್ಥೆಯ ಶೋಷಣೆಯನ್ನು ಸೈದ್ಧಾಂತಿಕ ಹಿನ್ನೆಲೆಯಲ್ಲಿ ವಿರೋಧಿಸುತ್ತ ಬಂದಿದೆ. ಇಲ್ಲಿ ಜಾತಿಪದ್ಧತಿ, ವರ್ಗಪದ್ಧತಿ, ಯಜಮಾನ ಸಂಸ್ಕೃತಿಗಳ ವಿರುದ್ಧ ಉಗ್ರ ಹೋರಾಟವಿದೆ. ಇಲ್ಲಿಯ ಕಾವ್ಯ ಏಕತಾನತೆಯನ್ನು ಮೀರಿ ವೈವಿಧ್ಯತೆಯನ್ನು ಸಾಧಿಸಿದೆ. ಶೋಷಣೆಯಂತಹ ವಸ್ತುವನ್ನೇ ಕುರಿತು ಅನೇಕ ದಲಿತ ಬಂಡಾಯ ಕವಿಗಳು ಬರೆದರೂ ಅಭಿವ್ಯಕ್ತಿಸುವ ಸಂದರ್ಭ ದಲ್ಲಿ ವೈವಿಧ್ಯತೆಯನ್ನು ಸಾಧಿಸಿದ್ದಾರೆ. ಇದು ಈ ಕಾವ್ಯದ ವೈಶಿಷ್ಟ್ಯವೂ ಹೌದು'' ಎನ್ನುವ ಡಾ॥ ಬಸವರಾಜ ಸಬರದರ ಮಾತುಗಳಲ್ಲಿ ನಿಜಾಂಶವಿದೆ.

ಬಂಡಾಯ ಕವಿಯ ಮೂಲ ಆಶಯ ಜನಪರ, ಮಾನವೀಯ ಕಳಕಳಿಯೇ ಆಗಿದೆ. ಹೀಗಾಗಿ, ಅವರ ಕಾವ್ಯದ ತುಂಬೆಲ್ಲ ಇದನ್ನೇ ಹೆಚ್ಚಾಗಿ ಕಾಣಬಹುದು. ಪ್ರಾರಂಭದಲ್ಲಿ ಬಂಡಾಯ ಕವಿಗಳು ಪ್ರೀತಿ, ಬೆಳದಿಂಗಳು, ಹುಡುಗಿಯ ಬಗೆಗೆ ಕವಿತೆ ಬರೆಯಬಾರದೆಂದು ತಮ್ಮನ್ನು ಒಂದು ಮಿತಿಗೆ ಒಳಪಡಿಸಿಕೊಂಡಿದ್ದರು. ನಂತರ ಬಂಡಾಯದ ಪ್ರಮುಖ ಕವಿ ಪ್ರೊ॥ ಚಂದ್ರಶೇಖರ ಪಾಟೀಲರು (ಚಂಪಾ):

ನಾವು ಹೂವಿನ ಬಗ್ಗೆ
ಹುಡುಗಿಯ ಬಗ್ಗೆ
ಚಂದ್ರನ ಬಗ್ಗೆ

ತಾರೆಗಳ ಬಗ್ಗೆ
ಪ್ರೀತಿಯ ಬಗ್ಗೆ
ಕವನ ಬರೆಯುವುದು
ಬೇಡವೆಂದು
ಹೇಳುವುದು ಬೇಡ ಗೆಳೆಯ

ಎಂದು ಸಮಜಾಯಿಸಿದರು. ನಂತರ ಅನೇಕ ಕವಿಗಳು ಪ್ರೀತಿಯ ಬಗೆಗೆ ಬರೆಯಲು ತೊಡಗಿದರು. ಬಂಡಾಯ ಕವಿ ಕೂಡ ಮನುಷ್ಯ, ಅವನಲ್ಲೂ ಒಲವಿನ ಭಾವನೆಗಳಿವೆ. ಆಸೆ-ಆಕಾಂಕ್ಷೆಗಳಿವೆ. ಪ್ರೀತಿ ಬೇಕು. ''ಪ್ರೀತಿ ಇಲ್ಲದವ, ಪ್ರೀತಿಸದವ ಗವಿಯೊಳಗೆ ಕುಳಿತರೂ ಕವಿಯಾಗಲಾರ'' ಎಂದು ಸತ್ಯಾನಂದ ಪಾತ್ರೋಟರಂತಹ ಕವಿಗಳು ಹೇಳಿದರು. ''ಪ್ರೀತಿ ಇಲ್ಲದ ಮೇಲೆ ನಾನು ಏನನ್ನೂ ಮಾಡಲಾರೆ, ದ್ವೇಷ ವನ್ನು ಕೂಡ'' ಎನ್ನುವ ಚಂಪಾರ ಮಾತು ಇಲ್ಲಿ ಸ್ಮರಣೀಯ.

''ಬಂಡಾಯ ಕಾವ್ಯ ಕೇವಲ ಮೆರವಣಿಗೆಯ ಮಾತಲ್ಲ, ಅಬ್ಬರದ ಮೆರವಣಿಗೆಯ ಮಧ್ಯೆ ಮಿಡಿಯುವ ಮನಸ್ಸಿನ ಮಾತು. ಬಂಡಾಯ ಕಾವ್ಯವೆಂದರೆ ಕೇವಲ ಸಿಟ್ಟಿನ ಸ್ಫೋಟ ವಲ್ಲ, ಸಂಕಟ ಸಿಟ್ಟುಗಳೊಂದಾಗಿ, ಸ್ಫೋಟಗೊಳ್ಳುವ ಮಾನವೀಯ ಮಿಡಿತ. ಬಂಡಾಯ ಕಾವ್ಯವೆಂದರೆ ಸಮಾಜ ಬದಲಾವಣೆಗಾಗಿ ಕರೆಕೊಡುವ ಬರಡು ಭಾಷಣವಲ್ಲ. ಬದಲಾವಣೆಯ ಪ್ರಕ್ರಿಯೆಯನ್ನು ಹಿನ್ನೋಟ ಮುನ್ನೋಟ ಗಳುಳ್ಳ ಒಳನೋಟದ ಉರಿಯಲ್ಲಿ ಬೇಯಿಸುತ್ತ ಬಹಿರಂಗ ಗೊಳ್ಳುವ ಭಾಷೆ'' ಎನ್ನುವ ಬರಗೂರು ರಾಮಚಂದ್ರಪ್ಪ ನವರ ವಿಚಾರಗಳು ಇಲ್ಲಿ ಹೆಚ್ಚು ಸ್ಪಷ್ಟವೆನಿಸುತ್ತವೆ.

ಎದೆ ಹಾಲ ಕುಡಿ ಕುಡಿಸಿ ನಿಟ್ಟುಸಿರು
ಬಿಟ್ಟವರೆ
ಹೊಟ್ಟೇ ಕಟ್ಟಿ ನನಗೆ ಮುಡುಪು ಕೊಟ್ಟವರೆ
ಕಣ್ಣೀರ ಹೊಳೆ ನುಂಗಿ ತುಟಿ ಮ್ಯಾಲೆ
ನಕ್ಕವರೆ
ರಕ್ತ ಬೆವರು ಬೆರಸಿ ಪನ್ನೀರುಗ್ಗಿದ ಜನರೆ
ಮೂಕನ ಈ ಮಾತು ಕೇಳೀರೇನೋ
ಕೇಳಿ ಕೆಪ್ಪನ ನೆತ್ತ್ಯರ ಕುದ್ದೀತೇನೋ
ನಿಮ್ಮ ಬಾಹುಗಳಿಗೆ ಬಲ ಬೇಡಿರೋ
ನಿಮ್ಮ ಕಲ್ಲು ಮಾಡಿದ ಜನರ ಮಣ್
ಮಾಡೀರೋ

(ಚಂಪಾ: ವಿಪ್ರಲಾಪ: ೧೯೮೨ರ ಕವಿತೆ, ಸಾಹಿತ್ಯ ಅಕಾಡೆಮಿ)

ಕಲ್ಲು ಮಣ್ಣು ಕಟ್ಟಿಗೆಗಳಿಗೆಲ್ಲ
ಆಕಾರ ಕೊರೆದು
ಬಣ್ಣ ಬಣ್ಣದ ಚಿತ್ತಾರ ಬಿಡಿಸಿದಿರಿ
ರತ್ನ ವಜ್ರವ ತೊಡಿಸಿ
ಪಟ್ಟೆ ಪೀತಾಂಬರ ಉಡಿಸಿ ಚೆಲುವ
ಚೆಲುವೆಯ ಕೈಗೆ ಗದಾಪದ್ಮಗಳ
ಹಿಡಿಸಿದಿರೀ
ಹತ್ತಾರು ಕೈಗಳನು ಹಲವಾರು
ಮುಖಗಳನು
ಹಂದಿ ಆಮೆಗಳಂಥ
ಅವತಾರ ಕಥೆಗಳನು
ಬೆಚ್ಚಿ ಬೀಳಿಸುವಂತೆ ಹೆಣೆದು ಹಾಡಿದಿರಿ.

(ಬಿ. ಟಿ. ಲಲಿತಾ ನಾಯಕ: ೧೯೮೨ರ ಕವಿತೆ, ಸಾಹಿತ್ಯ ಅಕಾಡೆಮಿ)

ಇಲ್ಲಿ ಚಂಪಾ ಮತ್ತು ಬಿ. ಟಿ. ಲಲಿತಾ ನಾಯಕರು ತಮ್ಮ ಕವಿತೆಗಳಲ್ಲಿ ಸಾಮಾನ್ಯ ಜನತೆಯ ಮೌಢ್ಯತೆಯನ್ನು ಪ್ರಶ್ನಿಸು ತ್ತಲೇ ಬಂಡಾಯವೇಳುತ್ತಾರೆ. ಪುರೋಹಿತಶಾಹಿ ವ್ಯವಸ್ಥೆ ಜನರ ಬದುಕನ್ನು ಹೇಗೆ ಮಣ್ಣುಮಾಡಲು ಹೊರಟಿದೆ ಎನ್ನುವುದನ್ನು ಮಾರ್ಮಿಕವಾಗಿ ಅನಾವರಣಗೊಳಿಸುತ್ತಾರೆ.

'ಕಾವ್ಯ ಬಂತು ಬೀದಿಗೆ' ಎನ್ನುವ ಕವನ ಸಂಕಲನದ ಮೂಲಕ ತಮ್ಮನ್ನು ಬಂಡಾಯ ಕವಿ ಎಂದು ಗುರುತಿಸಿಕೊಂಡ ರಮಜಾನ್ ದರ್ಗಾ ಅವರು ತಮ್ಮ ಬರವಣಿಗೆಯ ಉದ್ದೇಶ ವನ್ನು ತಾವೇ ಸ್ಪಷ್ಟಪಡಿಸುತ್ತಾರೆ: ''ಬರವಣಿಗೆ ನನ್ನ ಉದ್ಯೋಗ ವಲ್ಲ, ಉದ್ಯೋಗವೇನೆಂಬುದನ್ನು ತಿಳಿಸುವಂಥದ್ದು. ನಾನು ನನ್ನ ಬದುಕಿನ ದುರಂತಗಳನ್ನು ನಿಮಗೆಲ್ಲ ತಿಳಿಸಲು ಬರೆಯುತ್ತಿಲ್ಲ. ನನ್ನ ಆತ್ಮಕ್ಕೆ ಹತ್ತಿದ ಬೆಂಕಿಯನ್ನು ನಿಮ್ಮೆಲ್ಲರ ಆತ್ಮಗಳಿಗೆ ಹಚ್ಚುವುದಕ್ಕಾಗಿ ಬರೆಯುತ್ತಿದ್ದೇನೆ'' ಎನ್ನುವ ದರ್ಗಾ ಬರೆಹದಲ್ಲಿ ಸಾಕಷ್ಟು ಸಂಯಮವನ್ನು ಸಾಧಿಸಿದ್ದಾರೆ.

ನಾವು ದುಡಿಯುವ ಜನ
ನಮ್ಮ ಅಧಿಕಾರ ಬಂದಾಗ
ಪೋಲೀಸರನ್ನು ನ್ಯಾಯಾಧೀಶರನ್ನು
ಮನುಷ್ಯರನ್ನಾಗಿ ಮಾಡುತ್ತೇವೆ.
ಬಂದೂಕಿನ ಬಾಯಲ್ಲಿ
ಗುಬ್ಬಿ ಗೂಡು ಕಟ್ಟುತ್ತದೆ.

ಕವಿತೆಯ ಕೊನೆಯ ಸಾಲುಗಳ ಕಲ್ಪನೆ, ಧೋರಣೆ ತುಂಬ ಮಾರ್ಮಿಕವಾಗಿದೆ.

ಚೆನ್ನಣ್ಣ ವಾಲೀಕಾರರು ಈ ನೆಲದ ಮಹತ್ವದ ಬಂಡಾಯ ಕವಿ. ಕೆಂಪು ಅಂಗಿಯನ್ನು ಹಾಕಿಕೊಂಡು ದನಿ ಎತ್ತಿ ಹಾಡುವ ವಾಲೀಕಾರರ ಕಾವ್ಯಕ್ಕೆ ದೊಡ್ಡ ಶಕ್ತಿಯಿದೆ.

ಯಾವ ಅಕ್ಷರದಿಂದ
ಬರೆದು ಹೇಳಲಿ ನಾನು
ನಮ್ಮ ಜನರಿಗಾದ ಎದೆಯ ಬ್ಯಾನಿ
ಲೂಟೀಗಾರರ ಇಲ್ಲಿ ಲೀಡರ್ ಆಗುವ ಹೊತ್ತು
ನಿಲ್ಲಲಾರವು ನಿತ್ಯ ನಡೆವ ಖೂನಿ

(ಪ್ಯಾಂಥರ್ ಪದ್ಯಗಳು)

ವಾಸ್ತವ ಸತ್ಯಗಳನ್ನು ಸಹಜ-ಸರಳವಾಗಿ ಕಲಾತ್ಮಕವಾಗಿ ಕಟ್ಟಿಕೊಡುವ ವಾಲೀಕಾರರು ಕಾವ್ಯಾಸಕ್ತರಿಗೆ ಅಗಾಧ ಪರಿಣಾಮವನ್ನುಂಟುಮಾಡುವಲ್ಲಿ ಯಶಸ್ವಿಯಾಗಿದ್ದಾರೆ.

ಮಹಿಳಾ ಕವಿಗಳು ಕೂಡ ತಮ್ಮ ಮೂಕಸಂವೇದನೆ ಗಳನ್ನೂ, ನಿಟ್ಟುಸಿರುಗಳನ್ನೂ ಕಾವ್ಯದ ಮೂಲಕ ದಾಖಲಿ ಸಲು ಯತ್ನಿಸಿದ್ದು ಬಂಡಾಯದ ಕೊಡುಗೆಗಳಲ್ಲೊಂದು. ತಮ್ಮ ಹಕ್ಕುಗಳ ಬಗೆಗೂ ಮುಕ್ತವಾಗಿ ಮಾತನಾಡಿದ್ದಾರೆ. ಮಹಿಳೆ ಹೀಗೆ ಮುಕ್ತವಾಗಿ ಪುರುಷಪ್ರಧಾನ ವ್ಯವಸ್ಥೆಯ ವಿರುದ್ಧ ಮಾತನಾಡಲು ತೊಡಗಿ ತನ್ನ ಸ್ತ್ರೀ ಸಂವೇದನೆ ಗಳನ್ನು ದಾಖಲಿಸಲು ಅನುವು ಮಾಡಿಕೊಟ್ಟದ್ದು ಕೂಡ ಬಂಡಾಯ ಸಾಹಿತ್ಯದ ದೊಡ್ಡ ಕೊಡುಗೆಯೆಂದೇ ಹೇಳಬೇಕು.

ಬಂಡಾಯ ಸಾಹಿತ್ಯ ಸಂಘಟನೆಯ ಮೂಲಕ ಗುರುತಿಸಿಕೊಂಡ ಕೆಲವರು ಮೇಲೆ ಬಂದರು. ಇವರ ಬದುಕಿಗೆ ಒಂದು ಬದ್ಧತೆ ಇತ್ತು. ಆದರೆ ಕೆಲವರು ಬಂಡಾಯ ಸಂಘಟನೆಯಿಂದ ದೂರ ಉಳಿದರು. ಹೀಗಾಗಿ ಬಂಡಾಯ ಲೇಖಕರ ಬಗೆಗೆ ಗುಮಾನಿಯಿಂದ ನೋಡುವಂತಹ ಪರಿಸ್ಥಿತಿ ರೂಪುಗೊಂಡಿತು. ಕೆಲವರು ಬಂಡಾಯವನ್ನು ಬಿಟ್ಟುಕೊಡದೇ ಇವತ್ತಿಗೂ ಕೂಡ ಸಂಘಟನೆಯ ತಾತ್ವಿಕ ಸಿದ್ಧಾಂತಗಳ ಜೊತೆಗಿದ್ದುಕೊಂಡು ಸಾಹಿತ್ಯ ರಚಿಸುತ್ತಿದ್ದಾರೆ. ಬಂಡಾಯ ಸಾಹಿತ್ಯದ ಸೆಳೆತಕ್ಕೆ ; ಪ್ರೇರಣೆಗೆ ಒಳಗಾಗಿ ಅನೇಕ ಯುವ ಸೃಜನಶೀಲ ಮನಸ್ಸುಗಳು ಬರೆಯುತ್ತಿವೆ.

ಈಗಾಗಲೇ ಪ್ರಮೋದ ತುರ್ವಿಹಾಳರ 'ಗಾಂಧಿ ಯೊಂದಿಗೆ', ಬಿ. ಪೀರಬಾಷಾರ 'ಜಾಲಿ ಹೂಗಳ ನಡುವೆ', ನಿಂಗಪ್ಪ ಮುದೇನೂರರ 'ಈ ನೆಲದಲ್ಲಿ', ದಸ್ತಗೀರಸಾಬ್ ದಿನ್ನಿಯವರ 'ಕಣ್ಣ ಮುಂದಿನ ಬೆಳಕು' – ಮುಂತಾದ ಸಂಕಲನಗಳು ಬಂಡಾಯ ಆಶೋತ್ತರಗಳಿಗೆ ಕೊರಳು ಕೊಟ್ಟ ರಚನೆಗಳಾಗಿವೆ. ಅಲ್ಲದೇ ಚಿದಾನಂದ ಸಾಲಿ, ತುರ್ವಿಹಾಳ ಚಂದ್ರು, ವಿಭಾ ತಿರಕಪಡಿ, ವಿಕ್ರಮ ವಿಸಾಜಿ ಮುಂತಾದವರು ಕೂಡ ಬಂಡಾಯದ ಆಶಯ ವುಳ್ಳ ಕವಿತೆಗಳನ್ನು ರಚಿಸುತ್ತಿರುವುದನ್ನು ಗಮನಿಸಿದರೆ ಬಂಡಾಯ ಸಾಹಿತ್ಯದ ಅನನ್ಯತೆ, ಮಹತ್ತರವಾದ ಸಾಧನೆ ಸ್ಪಷ್ಟವಾಗದೇ ಇರದು.

ಬಂಡಾಯ ಸಂಘಟನೆ ಮೊದಲಿನ ಕಾವನ್ನು ಇಂದು ಉಳಿಸಿಕೊಂಡಿಲ್ಲ ಎನ್ನುವ ಆರೋಪ ಇದೆ. ಸಮಾಜ ಅನೇಕ ಸ್ಥಿತ್ಯಂತರಗಳನ್ನು ಕಾಣುತ್ತಾ ಹೋದಹಾಗೆ ಕೆಲವು ಚಳುವಳಿಗಳಲ್ಲಿ ಒಂದು ಸ್ಥಗಿತತೆ ಉಂಟಾಗುತ್ತಿದೆ. ನೀರು ನಿಂತರೆ ಅದಕ್ಕೆ ಬೆಲೆ ಇಲ್ಲ. ಅದು ಸದಾ ಜೀವನದಿಯಾಗಿ ಹರಿಯಬೇಕು, ಅಲ್ಲವೇ? ಬಂಡಾಯದ ಅನೇಕ ಆಶಯ ಗಳು ಇವತ್ತಿಗೂ ಸೃಜನಶೀಲತೆಯನ್ನು ಪಡೆದುಕೊಂಡು ಚಲನಶೀಲವಾಗಿ ಸಾಗುತ್ತಿರುವುದನ್ನು ಮೇಲೆ ತಿಳಿಸಿದ ಯುವ ಕವಿಗಳ ಕಾವ್ಯದಲ್ಲಿ ಕಾಣಬಹುದಾಗಿದೆ. ಬಂಡಾಯ ಸಾಹಿತ್ಯ ಸಂಘಟನೆ ತನ್ನ ಮಿತಿಯಲ್ಲೇ ಅಗಾಧವಾದುದನ್ನು ಸಾಧಿಸಿದೆ. ಒಂದು ಅಪರೂಪದ ದನಿಯನ್ನು, ಸಂವೇದನೆ ಯನ್ನು ಕನ್ನಡ ಕಾವ್ಯಕ್ಕೆ ನೀಡುವುದರ ಮುಖಾಂತರ ಕಾವ್ಯಲೋಕವನ್ನು ಇನ್ನಷ್ಟು ಎತ್ತರಕ್ಕೆ ಏರಿಸಿದೆ.

**ಡಾ॥ ದಸ್ತಗೀರಸಾಬ್ ದಿನ್ನಿ**
ಕನ್ನಡ ಉಪನ್ಯಾಸಕ, ಟ್ಯಾಗೋರ ಸ್ಮಾರಕ ಪ.ಪೂ. ಕಾಲೇಜ್
ರಾಯಚೂರು – ೫೮೪ ೧೦೧

## ಹುಡುಕಾಟ

ಹುಡುಗ ನೀನು
ಕೊಟ್ಟ ಗುಲಾಬಿಯಲ್ಲಿ
ಹುಡುಕಿದೆ ನಿನ್ನನ್ನು
ಆದರೆ ಕಾಣಲಿಲ್ಲ
ಆದರ ಪರಿಮಳದಲ್ಲಿ
ನಿನ್ನ ಸುಳುಹನ್ನು
ಬೆರಳಿಗೆ ಚುಚ್ಚಿದ
ಮುಳ್ಳಿನಲ್ಲಿ ಕಂಡೆ
ನಿನ್ನ ಅಸ್ತಿತ್ವವನ್ನು!

ಡಿ. ವಿ. ಬಡಿಗೇರ
ತೆಗ್ಗಿನ ಪೇಟೆ, ಗದಗ – ಬೆಟಗೇರಿ – ೫೮೨೧೦೨

# ಜೀವಿ ಸಂಕುಲ ಕರಗುತ್ತಿದೆ...

**ಎನ್. ವ್ಹಿ. ಬಾಬಾನಗರ**

ಭೂಮಿಯು ಜೀವಿಗಳ ಸಂಚಲನವಿರುವ ಗ್ರಹ. ಜೀವಿಗಳ ವಿಕಾಸಚಕ್ರದಲ್ಲಿ ಹೊರಹೊಮ್ಮಿದ ಬುದ್ಧಿವಂತ ಪ್ರಾಣಿ 'ಮನುಷ್ಯ'. ಮನುಷ್ಯನು ಭೂಮಿಯ ಮೇಲೆ ಕಾಣಿಸಿಕೊಳ್ಳುವ ಪೂರ್ವದಲ್ಲಿಯೇ ಅನೇಕ ಏಕಕೋಶ ಜೀವಿಗಳು, ಅಕಶೇರುಕಗಳು, ಮೀನುಗಳು, ಉಭಯವಾಸಿಗಳು, ಸರೀಸೃಪಗಳು, ಪಕ್ಷಿಗಳು ಇನ್ನಿತರ ಸ್ತನಿಗಳು ವಸುಂಧರೆಯ ಮೇಲೆ ಕಾಣಿಸಿಕೊಂಡದ್ದಾಗಿತ್ತು.

ಮನುಷ್ಯನ ಬುದ್ಧಿವಂತಿಕೆಯ ವಿಕಾಸ(?) ಹೆಚ್ಚಿದಂತೆ ಕೈಗಾರಿಕೆಗಳು, ವಾಹನಗಳು, ಯುದ್ಧಗಳು, ದ್ವೇಷ, ಪರಮಾಣು ಬಾಂಬ್ ಸ್ಫೋಟ, ದುರಂತಗಳು... ಅನೇಕ ಮನುಜ ನಿರ್ಮಿತ ಘಟನೆಗಳು ಹೆಚ್ಚುತ್ತಾ ಹೋದವು. ಇವೆಲ್ಲದರ ಒಟ್ಟು ಪರಿಣಾಮ ಕಾಣಿಸಿಕೊಂಡಿದ್ದು, ಉಳಿದ ಮೂಕಜೀವಿಸಂಕುಲದ ಮೇಲೆ.

ಇತ್ತೀಚೆಗೆ 'ಪ್ರಕೃತಿ ಮತ್ತು ಪ್ರಾಕೃತಿಕ ಸಂಪನ್ಮೂಲಗಳ ಸಂರಕ್ಷಣೆಗಾಗಿ ಇರುವ ಅಂತಾರಾಷ್ಟ್ರೀಯ ಸಂಸ್ಥೆ'ಯು ಹೊರತಂದ 'ಕೆಂಪು ದಸ್ತಾವೇಜು – ೨೦೦೪', ಜೀವಿಗಳ ಮೇಲೆ ಉಂಟಾಗುತ್ತಿರುವ ಭೀಕರ ಪರಿಣಾಮವನ್ನು ಅಂಕಿ-ಅಂಶಗಳ ಮುಖಾಂತರ ಬಿಂಬಿಸಿದೆ.

ಈ ಅಂಕಿ ಸಂಖ್ಯೆಗಳನ್ನು ಅವಲೋಕಿಸಿದಾಗ ಪ್ರತಿವರ್ಷ ವಿನಾಶದ ಭೀತಿಗೆ ಒಳಪಟ್ಟ ಕಶೇರುಕ ಪ್ರಭೇದಗಳ ಸಂಖ್ಯೆ ಹೆಚ್ಚುತ್ತಲೇ ಇದ್ದು, ಅದರಲ್ಲೂ ಉಭಯವಾಸಿಗಳ ಜೀವನ ಆತಂಕಕ್ಕೀಡಾಗಿರುವುದು ಕಾಣ ಬರುತ್ತದೆ. ಇಷ್ಟೆಲ್ಲ ಕೇವಲ ಕಶೇರುಕಗಳ ಬಗ್ಗೆ ಯಾದರೆ, ವಿನಾಶದಂಚಿಗೆ ತಲುಪುತ್ತಿರುವ ಅಕಶೇರುಕಗಳ ಸಂಖ್ಯೆ ೧,೯೯೨ರಷ್ಟಿದೆ. ಎಲ್ಲ ಬಗೆಯ ಸಸ್ಯ ಸಂಕುಲದ ಅಂಕಿ ಸಂಖ್ಯೆಗಳನ್ನು ಅವಲೋಕಿಸಿದರೆ, ಭೀತಿಗೆ ಒಳಪಡುತ್ತಿರುವ ಅವುಗಳ ಸಂಖ್ಯೆ ೮,೩೨೧ ರಷ್ಟು. ಹೀಗಾಗಿ ಕೆಂಪು ದಸ್ತಾವೇಜು ಪಟ್ಟಿ– ೨೦೦೪ರ ಪ್ರಕಾರ ವಿನಾಶದ ಅಂಚಿನಲ್ಲಿರುವ ಒಟ್ಟು ಜೀವಿ ಪ್ರಭೇದಗಳ ಸಂಖ್ಯೆ ೧೫,೫೦೩.

ಇದೆಲ್ಲ, ನಮ್ಮ ಮಿತಿಯಲ್ಲಿ, ಅಳತೆಗೆ ಸಿಕ್ಕ ಜೀವಿಸಂಕುಲದ ದಾಖಲಾತಿ ಮಾತ್ರ. ನಮ್ಮ ಅರಿವಿಗೆ ಬಾರದೇ ಪರಿಸರದ ಸೂಕ್ಷ್ಮ ಅಸಮತೋಲನದಿಂದಾಗಿ ಇನ್ನೆಷ್ಟು ಜೀವಿ ಪ್ರಭೇದಗಳು ಅಳಿದಿರಬಹುದು, ಅಳಿವಿನಂಚಿಗೆ ಬಂದಿರಬಹುದು ಎಂಬ ಲೆಕ್ಕಾಚಾರಕ್ಕೆ ಇಳಿದಾಗ ಅವುಗಳ ಸಂಖ್ಯೆ ದೊಡ್ಡದಾಗುತ್ತಾ ಹೋಗುತ್ತದೆ.



ಈ ಎಲ್ಲ ಅಂಕಿ ಅಂಶಗಳನ್ನು ಗಮನಿಸುತ್ತಾ ಹೋದಂತೆ ವರ್ಷದಿಂದ ವರ್ಷಕ್ಕೆ ವಿನಾಶದ ಅಂಚಿಗೆ ಬರುತ್ತಿರುವ, ಭೀತಿಯನ್ನು ಎದುರಿಸುತ್ತಿರುವ ಜೀವಿಗಳ ಸಂಖ್ಯೆ ಹೆಚ್ಚುತ್ತಲೇ ಇದೆ. ಆದರೆ ಭೂಮಿಯ ಮೇಲೆ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಿರುವ ಪ್ರಭೇದದ ಸಂಖ್ಯೆಯೆಂದರೆ ಮನುಷ್ಯನದೊಂದೇ! ನಮ್ಮ ದೇಶದ 'ಸೈಲೆಂಟ್ ವ್ಯಾಲಿ'ಯಲ್ಲಿ ವಾಸಿಸುವ ಅಪರೂಪದ ಮಂಗಗಳ ಪ್ರಭೇದವಾದ 'ಸಿಂಗಳೀಕ' ಕಾಡುಗಳ ನಾಶದಿಂದ ವಿನಾಶದ ಅಂಚಿಗೆ ಬಂದು ತಲುಪಿದೆ. ಈ ರೀತಿ ಆವಾಸದ ನಷ್ಟವು, ಜೀವಿಗಳ ಸಂಖ್ಯೆ ಇಳಿಮುಖವಾಗಲು ಕಾರಣವಾಗಿದೆ.

ಮನುಷ್ಯನ ಆಹಾರ ಚಪಲಕ್ಕೆ, ಮೋಜಿಗಾಗಿ, ಔಷಧಿಯ ಹೆಸರಿನಲ್ಲಿ, ಚರ್ಮಕ್ಕಾಗಿ ಹೀಗೆ ವಿವಿಧ ಕಾರಣಗಳಿಗಾಗಿ ಜೀವಿಗಳು ಬಲಿಪಶುವಾಗುತ್ತಿವೆ.

ಇತ್ತೀಚಿನ ದಿನಗಳಲ್ಲಿ ಪಶ್ಚಿಮ ಪೆಸಿಫಿಕ್ ದ್ವೀಪಗಳ ನಿವಾಸಿಗಳು ಬೈರುಂಡೆ ಹಕ್ಕಿಯ ಗೂಡುಗಳನ್ನು ಕಿತ್ತು ಸಾರಿನಂತಹ ಖಾದ್ಯ ತಯಾರಿಸಿ ಸೇವಿಸುತ್ತಿದ್ದಾರೆ.

ವಿಯಟ್ನಾಮ್‌ನ ದಕ್ಷಿಣ ಭಾಗದಲ್ಲಿ ಕಂಡುಬರುವ 'ಕೆಂಪುಗಡ್ಡದ ಮುಸುವ'ದ ಅಂಗಗಳನ್ನು ಅಲ್ಲಿನ ನಿವಾಸಿಗಳು ದೇಶೀಯ ಔಷಧಿ ತಯಾರಿಕೆಗೆ ಬಳಸುತ್ತಿರುವುದರಿಂದ ಅವು ಅವ್ಯಾಹತವಾಗಿ ಬೇಟೆಗೆ ಬಲಿಯಾಗಿ ವಿನಾಶದ ಅಂಚನ್ನು ತಲುಪಿವೆ.

'ಕಪ್ಪು ಕತ್ತಿನ ಕೊಕ್ಕರೆ'ಯಂತಹ ಪಕ್ಷಿಗಳನ್ನು ಪ್ರಾಣಿ ಸಂಗ್ರಹಾಲಯದಲ್ಲಿ ಪ್ರದರ್ಶನಕ್ಕಾಗಿ ಹಿಡಿಯಲ್ಪಡುತ್ತಿರುವುದರಿಂದ ಅವುಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತಿದೆ.

ಇಷ್ಟೆಲ್ಲ ಯಾಕೆ, ನಮ್ಮ ಸುತ್ತಲಿನ ಶ್ರೀಗಂಧದ ಮರ, ನವಿಲು, ಬಿದಿರು ಎಲ್ಲವೂ ನಮ್ಮಿಂದ ದೂರ ಸರಿಯುತ್ತಿರುವುದು ನಮ್ಮ ಅರಿವಿಗೆ ಬಂದಿದೆಯೇ ?

ಒಂದಂತೂ ಸತ್ಯ, ಈಗಲಾದರೂ ನಾವು ಎಚ್ಚರಗೊಳ್ಳದೇ ಹೋದರೆ, ಈ ಪೃಥ್ವಿಯ ಸುಂದರ ಜೀವಿ ಸಂಕುಲ ನೇಪಥ್ಯಕ್ಕೆ ಸರಿಯುವುದು ಅನಿವಾರ್ಯ. ಎಚ್ಚರಿಕೆಯ ಗಂಟೆ ಬಾರಿಸುತ್ತಲಿದೆ...

ಎನ್. ವ್ಹಿ. ಬಾಬಾನಗರ
'ಶ್ರಯಧೇನು', ಭಾವಸಾರನಗರ
ವಿಜಾಪುರ

**ಭೀತಿಯನ್ನೆದುರಿಸುತ್ತಿರುವ ಕಶೇರುಕಗಳ ಕೆಂಪು ಪಟ್ಟಿ (೨೦೦೪)**

| ಅ. ಸಂ. | ಕಶೇರುಕಗಳ ಗುಂಪು | ವಿವರಿಸಿದ ಒಟ್ಟು ಪ್ರಭೇದಗಳು | ಅಧ್ಯಯನ (ಮೌಲ್ಯಮಾಪನ) ಮಾಡಿದ ಪ್ರಭೇದಗಳು (೨೦೦೪ರಲ್ಲಿ) | ಭೀತಿಗೆ ಒಳಪಟ್ಟ ಪ್ರಭೇದಗಳ ಸಂಖ್ಯೆ | | | | |
|---|---|---|---|---|---|---|---|---|
| | | | | ೧೯೯೬/೧೯೯೮ರಲ್ಲಿ | ೨೦೦೦ದಲ್ಲಿ | ೨೦೦೨ರಲ್ಲಿ | ೨೦೦೩ | ೨೦೦೪ |
| ೦೧ | ಸಸ್ತನಿಗಳು | ೫,೪೧೬ | ೪,೮೫೩ | ೧,೦೯೬ | ೧,೧೩೦ | ೧,೧೩೭ | ೧,೧೩೦ | ೧,೧೦೧ |
| ೦೨ | ಪಕ್ಷಿಗಳು | ೯,೯೧೭ | ೯,೯೧೭ | ೧,೧೦೭ | ೧,೧೮೩ | ೧,೧೯೨ | ೧,೧೯೪ | ೧,೨೧೩ |
| ೦೩ | ಸರೀಸೃಪಗಳು | ೮,೧೬೩ | ೪೯೯ | ೨೫೩ | ೨೯೬ | ೨೯೩ | ೨೯೩ | ೩೦೪ |
| ೦೪ | ಉಭಯವಾಸಿಗಳು | ೫,೭೪೩ | ೫,೭೪೩ | ೧೨೪ | ೧೪೬ | ೧೫೭ | ೧೫೭ | ೧,೭೭೦ |
| ೦೫ | ಮೀನುಗಳು | ೨೮,೫೦೦ | ೧,೭೨೧ | ೭೩೪ | ೭೫೨ | ೭೪೨ | ೭೫೦ | ೮೦೦ |
| | ಒಟ್ಟು | ೫೭,೭೩೯ | ೨೨,೭೩೩ | ೩,೩೧೪ | ೩,೫೦೭ | ೩,೫೨೧ | ೩,೫೨೪ | ೫,೧೮೮ |



# ಮಾರ್ದನಿ

○ ಎಂ. ಸಿ. ಪ್ರಶಾಂತ್

**ಪಾತ್ರಗಳು**

| | | |
|---|---|---|
| ೧. | ಅರಣ್ಯವಾಸಿ | (ವಿಭಿನ್ನ ವೇಷ) |
| ೨. | ಆಧುನಿಕತೆ | (ನಾಮಫಲಕ + ನವೀನ ಉಡುಪು) |
| ೩. | ವಿಜ್ಞಾನ-ತಂತ್ರಜ್ಞಾನ | (ವಿಜ್ಞಾನಿಯ ವೇಷ + ನಾಮಫಲಕ) |
| ೪. | ಕಲೆ ಮತ್ತು ಸಾಹಿತ್ಯ | (ಜುಬ್ಬ ಮತ್ತಿತರ ಸಾಹಿತಿಗಳ ಉಡುಪು) |
| ೫. | ಶೋಷಕ ವರ್ಗ | (ಜಮೀನ್ದಾರನ ಉಡುಪು + ನಾಮಫಲಕ) |
| ೬. | ಶೋಷಿತ ಸಮುದಾಯ | (ಬಡರೈತನ ಉಡುಪು + ನಾಮಫಲಕ) |
| ೭. | ಸಹಾಯಕರಿಬ್ಬರು | (ಸುನಾಮಿ ಅಲೆ ತರುವ ಕಪ್ಪು ವಸ್ತ್ರಧಾರಿಗಳು) |
| ೮. | ಪ್ರಕೃತಿ | (ಹಿನ್ನೆಲೆ ಧ್ವನಿಯಲ್ಲಿ ಮಾತ್ರ) |

**ಪೀಠಿಕೆ**

ಆರ್ಭಟಿಸಿ ಅಬ್ಬರಿಸಿ ಬಂದ ಬಂದರಿನ ಅಲೆಗಳು 'ಸುನಾಮೀ', 'ಸುನಾಮೀ' ಎಂದು ಮನೆ ಮನೆ ಮನಗಳಲ್ಲಿ ಮಾರ್ದನಿಸಿ ನೆನಪಿನ ಪುಟಗಳಲ್ಲಿ ಕಂಬನಿಯ ಕರಿಛಾಯೆ ಹನಿಯನ್ನು ಬಿತ್ತಿಹೋಗಿವೆ. ಈ ಮೂಲಕ ವಿಶ್ವದ ಎಲ್ಲ ಜನತೆಗೆ ಕೇಳಿಸುವಂತೆ ಎಚ್ಚರಿಕೆಯ ಕರೆಗಂಟೆಯನ್ನು ಪ್ರಕೃತಿ ಬಾರಿಸಿದ್ದಾಳೆ, ಬಾರಿಸುತ್ತಲೂ ಇರುತ್ತಾಳೆ.

ಪ್ರಕೃತಿ ಹಾಗೆ ಶಿಕ್ಷಿಸುವಾಗ ಯಾವ ಜಾತಿ ಮತ ಪಂಥ ವರ್ಗ ವರ್ಣ ತಾರತಮ್ಯ ಮಾಡಳು. ಶಿಕ್ಷಿಸುವಾಗ ರಕ್ಷಿಸುವಾಗ ಎಲ್ಲ ಸಮಯ ಕೂಡ ಅವಳದು ಸಮಾನತಾ ಭಾವ. ಇಂತಹ ಮಾಸದ ಗಾಯಗಳ ನಡುವೆಯೂ ಆಧುನಿಕತೆಯ ಬಿಸಿಗಾಳಿ ಈಗ ಹಿತವಿರದೆ ಶೋಷಕರಿಂದ ಶೋಷಿತರನ್ನು ಸುಡುತ್ತಲೇ ಇದೆ; ತನ್ನ ಕಹಿನೆನಪುಗಳನ್ನು ಮರೆಸುತ್ತ!

ಆದರೆ ಆ ಕಹಿನೆನಪುಗಳನ್ನು ಹಾಗೇ ಮರೆಯಲು ಬಿಡದೆ ಕಾಂಕ್ರೀಟು ಕಾಡಿನ ಜನರನ್ನು ಆಧುನಿಕತೆ ವಿಜ್ಞಾನಗಳನ್ನು 'ಅನಾಗರಿಕ ಜನ' ಎಂಬ ಹಣೆಪಟ್ಟಿ ಕಟ್ಟಿಕೊಂಡ ಕಾಡುಜನರಲ್ಲೊಬ್ಬ ಎಚ್ಚರಿಸುವ ಚಿತ್ರಣವನ್ನು ನಾವಿಲ್ಲಿ ನಿಮ್ಮ ಕಣ್ಮುಂದೆ ತರುವ ಪ್ರಯತ್ನ ಮಾಡುತ್ತಿದ್ದೇವೆ.

ಈ ಪ್ರಯತ್ನದ ಹಿಂದೆ...

ಸುನಾಮಿಯಿಂದ ಹೊಡೆತ ತಿಂದ
ಜನರಲ್ಲೀ ದಿನ
ಮಾಸಿದಂತಹ ನಗೆಯು ಮತ್ತೆ
ತರಲೀ ಚೇತನ

ಎಂಬ ಪ್ರಾರ್ಥನೆಯಿದೆ.

(ತಂಡದಲ್ಲೊಬ್ಬರು ಬಂದು ಪೀಠಿಕೆಯನ್ನು ಮೇಲಿನಂತೆ ಭಾವಪೂರ್ಣತೆಯಿಂದ ಓದುತ್ತಾರೆ.)

(ವೇದಿಕೆಯಲ್ಲಿ ಮಂಜುರೂಪದಲ್ಲಿ ಹೊಗೆ ಸುಳಿಯುತ್ತಿರುತ್ತದೆ.)

**ಅರಣ್ಯವಾಸಿ** : (ಪ್ರೇಕ್ಷಕರೊಳಗೆ ಬೆಟ್ಟುಮಾಡುತ್ತ) ಹಾ... ಹಾ... ಪ್ರಕೃತೀ... ಅಮ್ಮಾ... ತಾಯಿ... ನಾವು ಇವರೊಳಗಿರುವ ಅರ್ಚಕರಲ್ಲ, ವೇದಮಂತ್ರ ಪಠಿಸಿಲ್ಲ, ಪಠಿಸುವುದೂ ಇಲ್ಲ! ಇಗೋ ಇಗೋ ಈ... ಈ...

ಮುಂಜಾವದ ಮಂಜು ನಿನಗೆ ಧೂಪ
ಆ ಅರುಣೋದಯದ ರಶ್ಮಿ ಸಿಂಚನವೇ ದೀಪ
ದೀಪಾS... ದೀಪ (ತೆರೆ ಹಿಂದೆ ಸರಿವನು)

**ವಿಜ್ಞಾನ-ತಂತ್ರಜ್ಞಾನ** : ನನ್ನಿಂದ ಇವರೆಲ್ಲಾ... ನಾನಿಲ್ಲದೇ ಇವರಿಲ್ಲ! ಹಹ್ಹ... ಹ್ಹ... ಹ್ಹ ಹೇಗೆ ನಿಷ್ಕ್ರಿಯಗೊಳಿಸುತ್ತಿದ್ದೇನೆ ನಾನಿವರನ್ನು. ನನ್ನ ಹೊರತಾಗಿ ಮನುಜ ಕಲ್ಪನೆಯನ್ನೂ ಮಾಡಲಾರೆ. ಕ್ಷಣ ಕ್ಷಣವೂ ಇವರೆಲ್ಲ ನನ್ನ ದಾಸಾನುದಾಸರು ಎಂದು ಹೇಳಬೇಕೇ ? ಹ್ಞೂಂ (ತಳ್ಳುವನು ಕಲೆ ಸಾಹಿತ್ಯವನ್ನು)

**ಕಲೆ ಮತ್ತು ಸಾಹಿತ್ಯ** : (ಏನನ್ನೋ ಹೇಳಲು ಬಂದು ವಿ + ತಂತ್ರಜ್ಞಾನದಿಂದ ತಳ್ಳಲ್ಪಟ್ಟು ಜಿಗುಪ್ಸೆ ತಾಳಿ ಅತ್ತ ಸರಿದು ತನ್ನ ಭಾವನಾಲೋಕದಲ್ಲಿರುತ್ತದೆ.)

... ನಾನು... ನಾನು ವಿಜ್ಞಾನಿ. ಜ್ಞಾನಿ. ನನ್ನದು ವಿಜ್ಞಾನ ತಂತ್ರಜ್ಞಾನ. ಹ್ಹಾ... ಹ್ಹಾ... ಹ್ಹಾ.

(ಈ ಪಾತ್ರವನ್ನೇ ದಿಟ್ಟಿಸುತ್ತ ಆಧುನಿಕತೆ ಪಾತ್ರ ಬರುತ್ತದೆ)

**ಆಧುನಿಕತೆ** : ಹೇಯ್ ಹೇಯ್ ನಾನು ಆಧುನಿಕತೆ. ನನ್ನ ತೋಳ್ತೆಕ್ಕೆಯಲ್ಲಿ ನೀನು... ಇವರು. ಎಲ್ಲರೂ. (ಮತ್ತೆ ಕಲೆ ಸಾಹಿತ್ಯ ಬಂದು ಇದರಿಂದಲೂ ತಳ್ಳಲ್ಪಟ್ಟು ಮೊದಲಿನಂತೆ ಭಾವದೊಳಗೆ ವಿಹರಿಸುತ್ತಿರುತ್ತದೆ.)

ಹ್ಞೂಂ (ಎಂದು ತಳ್ಳುತ್ತಾ) ಇದಾವ ಕಲೆ, ಸಾಹಿತ್ಯ – ನನ್ನೀ ಹೆಸರಿನಲ್ಲಿ ನನ್ನೀ ಹೆಸರಿನಲ್ಲಿ ಈ ಜಗದ ಜನರ ಜೀವನಯಾತ್ರೆ ಜಾತ್ರೆ ಜಾತ್ರೆಯಾಗಿ ಉರುಳುತ್ತಿದೆ. ನಿನ್ನ ಹುಟ್ಟು ನನ್ನಿಂದಲೇ (ವಿಜ್ಞಾನಕ್ಕೆ ಬೆರಳು ತೋರಿ).

ನಾನೇ ಮೇಲು... ನಾನೇ.

**ವಿಜ್ಞಾನ-ತಂತ್ರಜ್ಞಾನ** : ಹೇ ನಾನು, ನಾನು ಮೇಲು.

**ಆಧುನಿಕತೆ** : ಹೇ ನಾನೋ, ನಾನು ಮೇಲು. ನನ್ನೀ ಕರಕಮಲದಲ್ಲಿ ಕುಣಿಸುತ್ತಿಹೆ ಈ ಜಗದ ಜೀವ ಜಂತುಗಳ ಪ್ರಾಣ... ಹ್ಹಹ್ಹ... ಪ್ರಾಣ.

(ಮೇಲುದನಿಯಲ್ಲಿ ನಾ-ತಾ ಮೇಲೆಂದು ಚೀರುತ್ತಾ ಕ್ರಮೇಣ ಸನ್ನೆಯಲ್ಲಷ್ಟೇ ತಮ್ಮ ಅಭಿನಯ ಮಾಡುತ್ತಿರುತ್ತವೆ. ಅಷ್ಟರೊಳಗೆ ಶೋಷಿತ ವರ್ಗ ಸೂಚಿಸುವ ಪಾತ್ರ ಬಂದು ವೇದಿಕೆಯಲ್ಲಿ ಬಂದು ಕೆಲಸಮಗ್ನವಾಗಿರುತ್ತೆ. ಆಗ)

**ಶೋಷಕ :** ಹೇಯ್ (ಎಂದು ಒದೆಯುತ್ತಾ) ಬೇಗ ಬೇಗಾ (ಎಂದು ಕೆಲಸ ಮಾಡುವಂತೆ ಸೂಚಿಸುತ್ತಾನೆ. ಶೋಷಿತ ವರ್ಗವು ದಾಹವೆಂದು ನೀರು ಬೇಡಿದರೂ ಅದರ ತಲೆಮೇಲೆ ನೀರು ಸುರಿಯುತ್ತಾ ವೇದಿಕೆ ಮೇಲೆಲ್ಲಾ ಓಡಾಡಿಸುತ್ತಾನೆ, ಹಿಂಸಿಸುತ್ತಾನೆ.)

(ಹಿನ್ನೆಲೆಯಲ್ಲಿ ಆ ಸನ್ನಿವೇಶ ವೀಕ್ಷಿಸಿದ ಪ್ರಕೃತಿಯ ನಾಭಿಯಿಂದ ಆರ್ತನಾದ ಬಂದು ಹಾಗೆ ಹೇಳುತ್ತದೆ) (ತೆರೆಹಿಂದೆ) :

''ಅಯ್ಯೋ... ಅಮ್ಮಾ... ತಾಳಲಾರೆನೇ... ತಾಳಲಾರೆನೇ ಈ ಹೊಡೆತಗಳ ಮೇಲ್ಹೊಡೆತಗಳಾ... ನನ್ನ ಸಹನೆಯನ್ನೇನು ದೌರ್ಬಲ್ಯವೆಂದು ಅಲಕ್ಷಿಸೀರೇನು ನೀವು ?

ಬಗೆಬಗೆಯ ರೂಪದಿ ಹೇಗೆ ಬಗೆಯುತ್ತಿರುವಿರಿ. ನನ್ನೀ ದೇಹ.

(ನಾ-ತಾ ಎನ್ನುವ ವಿಜ್ಞಾನ ತಂತ್ರಜ್ಞಾನ ಶೋಷಿಸುತ್ತಿರುವ ಶೋಷಕ ವರ್ಗ ತಮ್ಮ ದೌರ್ಜನ್ಯದ ಉನ್ನತಿ ಪಡೆಯುತ್ತವೆ. ಮತ್ತೆ ಮತ್ತೆ...)

ಬೇಡ ಬೇಡ ನನ್ನೊಡಲ ಕಡಲನ್ನೇಕೆ ತಲ್ಲಣ ಗೊಳಿಸುತ್ತಿರುವಿರಿ. ಬೇಡಾಽ... ಬೇಡಾಽ... (ಎನ್ನುತ್ತಾ ಜೋರಾಗಿ ಕಿರುಚಿ) ಹೇಯ್ (ಎನ್ನುತ್ತಲೇ ಕಪ್ಪು ವಸ್ತ್ರಧಾರಿಗಳು ಕಪ್ಪು ಪರದೆಯನ್ನು ವೇದಿಕೆಗೆ ಎಲ್ಲರ ಮೇಲೂ ಹರಡುವಂತೆ ತಂದು ಅಲೆ ರೂಪದ ನರ್ತನ ಮಾಡಿಸುತ್ತಿರುತ್ತಾರೆ.)

**ಅರಣ್ಯವಾಸಿ :** (ನಿಧಾನವಾಗಿ ಬರುತ್ತಾ ಬರುತ್ತಾ ತಟ್ಟನೆ ನಿಂತು ವೀಕ್ಷಿಸಿದ ದೃಶ್ಯದಿಂದ ತಲೆ ಅಲ್ಲಾಡಿಸುತ್ತಾ...) ಇಷ್ಟೇ... ಇಷ್ಟೇ... ನಿಮ್ಮೀ ಆಧುನಿಕತೆ ವಿಜ್ಞಾನ ತಂತ್ರಜ್ಞಾನ ಎಂಬೀ ಹೆಸರಿನ ಸ್ವಾರ್ಥಪರ ಚಿಂತನೆಗಳು ಅವುಗಳ



ಅಟ್ಟಹಾಸ ಇಷ್ಟೆ.

ನನ್ನಮ್ಮನೊಡಲ ಉಸಿರ ಉಯ್ಯಾಲೆಯಲಿ ತೇಲಿ ಹೋದವು ನಿಮ್ಮಾ ಚಿಂತನೆಯ ಚಿತೆಗಳು... ತೇಲಿ ಹೋದವು. ಕೇಳಿಸಿತಾ ? ಕೇಳಿಸಿತಾ ? ಪ್ರಕೃತಿ ಮಾತೆಯೊಡಲ ನಾಭಿಯಿಂದ ಬಂದ ಆರ್ತನಾದದ ಕಡಲು. ಕಾಣಿಸುತ್ತಿದೆಯಾ ? ಕಾಣಿಸುತ್ತಿದೆಯಾ ? ಆ ಕಡಲ... ಅವಳೊಡಲ ಕಡಲ ಉಯ್ಯಾಲೆಯಲಿ ತೇಲುವವರ ಪ್ರತಿಬಿಂಬ.

ಯಾಕೀ ಕಲೆ ಸಾಹಿತ್ಯ ಸಂಸ್ಕೃತಿಯ ಬಗ್ಗೆ ನಿಮಗಿಷ್ಟೊಂದು ತಾತ್ಸಾರ. ನಿಮ್ಮ ತೀಟೆ ತೀರಿಸಿಕೊಳ್ಳಲಷ್ಟೆಯೇ ಇವುಗಳು ನಿಮಗೆ. ಬೇಡ... ಬೇಡಾಽ... ಈ ಶೋಷಣೆಯ ದೌರ್ಜನ್ಯದ ಅಟ್ಟಹಾಸ. ಬೇಡ ಈ ಅಹಂಕಾರದ ಅಮಲಿನ ಜೀವನ. ಪ್ರಕೃತಿ ನಿಯಮಗಳನ್ನು ಪಾಲಿಸಿ. ಪೂಜಿಸಿ ಆರಾಧಿಸಿ. ಮಿತಿಯೊಳಗಿಂದ ಹಾರಬೇಡಿ.

ಅದೋ ಅದೋ (ಎಂದು ಬಾನೆಡೆ ತೋರಿಸುತ್ತಾ ಭಾವಪರವಶತೆಯಿಂದ ಹಾಡುತ್ತಾನೆ.)

ಚುಕ್ಕಿ ಚಂದ್ರಮರ
ಬೆಳಕಾ ಪ್ರಾಂಗಣದಾ
ಬಾನಭವ್ಯ ಭವನಾಽಽ
ಭಜಿಸುತ್ತಿದೆ ಭಜಿಸುತ್ತಿದೆ
ಇಲ್ಲಿ ಮಡಿದ ಮಹಾ ಚೇತನಗಳ ಅಲ್ಲಿ ಮುಡಿದು ॥೨॥
ಅದು ಸ್ವಾರ್ಥ ತಂತ್ರದ ಭಜನೆಯಲ್ಲ
ಶಾಂತಿಕ್ರಾಂತಿಯ ಭಜನೇ
ಶಾಂತಿಕ್ರಾಂತಿಯ ಭಜನೇ

(ಎಂದು ಹಾಡುತ್ತಲೇ ಕ್ರಮೇಣ ಅರಣ್ಯವಾಸಿ ಧ್ವನಿ ಕ್ಷೀಣಿಸುತ್ತಲೇ ವೇದಿಕೆಯ ಪಾತ್ರಗಳೆಲ್ಲಾ ಎದ್ದುಬಂದು ಸಾಲಾಗಿ ನಿಂತು)

ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂಗಮಯ
ಓಂ ಶಾಂತಿಃ ಶಾಂತಿಃ ಶಾಂತಿಃ

**ಎಂ. ಪಿ. ಪ್ರಶಾಂತ್**
S/o ಚಂದ್ರಾಚಾರ್ಯ, ಬಿ.ಇಡಿ, ಪ್ರಶಿಕ್ಷಣಾರ್ಥಿ
ಓಂಕಾರಮಲ್‌ಸೋಮಾನಿ ಮಹಾವಿದ್ಯಾಲಯ, ಕುವೆಂಪುನಗರ
ಮೈಸೂರು–೯




## ನಾಳೆಗಳು ಅರಳುತ್ತವೆ

ನಾಳೆಗಳು ಅರಳುತ್ತವೆ
ಇಂದು ಮೊಗ್ಗು ಬಿರಿದರೆ

ನಾಳೆಗಳು ಮಧು ಸುರಿಸುತ್ತವೆ
ಇಂದು ಜೇನು ಗೂಡುಕಟ್ಟಿದರೆ

ನಾಳೆಗಳು ಮೈತುಂಬಿ ಹರಿಯುತ್ತವೆ
ಇಂದು ಕಾರ್ಮೋಡ ಕವಿದರೆ

ನಾಳೆಗಳು ನನಸಾಗುತ್ತವೆ
ಇಂದು ಕನಸ ತಳೆಯದಿದ್ದರೆ

ನಾಳೆಗಳು ಹಾರಾಡುತ್ತವೆ
ಇಂದು ಹಕ್ಕಿಗಳ ರೆಕ್ಕೆ ಕೀಳದಿದ್ದರೆ

ನಾಳೆಗಳು ಗೆಲ್ಲುತ್ತವೆ
ಇಂದು ಸೋಲ ಮೆಟ್ಟಿ ನಿಂತರೆ

ನಾಳೆಗಳು ಬರಿದಾಗುವುದಿಲ್ಲ
ಇಂದು ಬಯಕೆಗಳು ಗರಿಕೆದರಿದರೆ

ನಾಳೆಗಳು ನಮ್ಮದಾಗುತ್ತವೆ
ಇಂದು ನಾವು ನಾವಾಗಿದ್ದರೆ

ಪದ್ಮಾ ಕೃಷ್ಣಮೂರ್ತಿ
ಅಂಚೆ ಇಲಾಖೆ, W/o ಎ. ಎಮ್. ಕೃಷ್ಣಮೂರ್ತಿ, ವಕೀಲರು, ಕೊರಟಗೆರೆ – ೫೭೨೧೨೯
ತುಮಕೂರು ಜಿಲ್ಲೆ

ಉತ್ತರ ಕರ್ನಾಟಕದ ಆಡುಮಾತು ಕೇಳಲು ಸೊಗಸು, ಓದಲು ಗಡಸು ಎಂಬ ನನ್ನ ಸೀಮಿತ ಅನುಭವವನ್ನು ಪೂರ್ತಿ ಹುಸಿಗೊಳಿಸುವಂತೆ ಅದೇ ಶೈಲಿಯಲ್ಲಿರುವ ಪುಸ್ತಕವಿದು. ಇದನ್ನು ಒಂದೇ ಬೀಸಿಗೆ ಓದಿ ಮುಗಿಸಿ ಆತ್ಮ ವಿಮರ್ಶೆ ಮಾಡಿಕೊಂಡಾಗ ಮಿನುಗಿದ ಮೊದಲ ಭಾವ ಕವಿ ಗೋಪಾಲಕೃಷ್ಣ ಅಡಿಗರ ಸಾಲುಗಳು :

*ನಿನ್ನ ಮರುಕದ ಅಗ್ನಿದಿವ್ಯದಲಿ ಗೆದ್ದು ಮೇಲೆ ಬಾ, ಹೂವಾಗಿ, ಜೇನಾಗಿ ಪುಟಿದು,*
*ತೇಲಿ ಬಾ, ಬೆಳ್ಳಿಗಿಲ ತುಣುಕಾಗಿ ನೆಗೆದು, ಬಾನೆತ್ತರಕು ಜಗದ ಬಿತ್ತರಕು ಬೆಳೆದು;*
*ಅದೆ ಸಾಧನೆಯು; — ಅದೆ ಬಾಳಿನೊಸಗೆ; ನಿನಗೆ ನೀನೇ, ಕೊನೆಗು, ನೀನೆ ನಿನಗೆ !*

ಭಾಷಾವಿಜ್ಞಾನಿ ಮತ್ತು ಪ್ರಸ್ತುತ ದೆಹಲಿ ಕರ್ನಾಟಕ ಸಂಘದ ಅಧ್ಯಕ್ಷ ಡಾ॥ ಪುರುಷೋತ್ತಮ ಬಿಳಿಮಲೆ ಅವರು ಈ ಪುಸ್ತಕಕ್ಕೆ 'ಮಾನವ ಸಂಬಂಧಗಳ ಸುತ್ತಮುತ್ತ ಹೆಣೆದ ಕಥೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ಬರೆದಿದ್ದಾರೆ, ''ಈ ಪ್ರಕಟಣೆಯು ಮಾಲಕ್ಕನ (ಲೇಖಕಿ ವನಮಾಲಾ) ಬದುಕುವ ಛಲಕ್ಕೊಂದು ಸಂಕೇತ. ಬದುಕಿನಿಂದ ಓಡಿಹೋಗುತ್ತಿರುವ ಮಂದಿಗೊಂದು ಪಾಠ.''

ವೈದ್ಯರ ನಿರ್ಲಕ್ಷ್ಯದಿಂದ ತಮ್ಮ ಎರಡೂ ಕಾಲುಗಳನ್ನು ಕಳೆದುಕೊಂಡಿರುವ ಈ ದಿಟ್ಟ ವೈಚಾರಿಕ ನಿಲುವಿನ ಆರ್ದ್ರ ಹೃದಯಿ ಮಹಿಳೆಯ ಜೀವನಾನುಭವಗಳನ್ನು ಆಧರಿಸಿ ಇಲ್ಲಿಯ ಎಲ್ಲ ಕಥೆಗಳೂ ಅರಳಿವೆ. ಇವರನ್ನು ವೈಯಕ್ತಿಕವಾಗಿ ಬಲ್ಲ ಬಿಳಿಮಲೆಯವರ ಪ್ರಕಾರ ಈ ಸಂಕಲನದ 'ಅವಸ್ಥೆ' ಕಥೆ ವನಮಾಲಾರ ಬದುಕಿನ ಗಾಥೆ.

ಅದರ ತಿರುಳು : ಆ ಹಳ್ಳಿಯ ವೈದ್ಯ ಡಾ॥ ಪ್ರಸಾದ್. ಜನಸೇವೆ ಈತನ ಬಾಳಿನ ಏಕೈಕ ಲಕ್ಷ್ಯ. ದುಡ್ಡೇ ದೊಡ್ಡಪ್ಪ ಎಂಬ ಧೋರಣೆಯ ವೈದ್ಯರ ಪ್ರಯೋಗಗಳಿಗೆ ಬಲಿಪಶುವಾಗಿ ಆ ಮೊದಲು ತನ್ನೆರಡೂ




# ನಿನಗೆ ನೀನೇ, ಗೆಳೆಯ, ನಿನಗೆ ನೀನೇ !

**ಜಿ. ಟಿ. ನಾರಾಯಣರಾವ್**

ಕಾಲುಗಳ ಮೇಲಿನ ಹತೋಟಿ ಕಳೆದುಕೊಂಡು ''ಅಳುವ ಕಡಲಿನಲಿ'' ಮುಳುಗಿದ್ದ ಮಾಯಿಂದಿಯ ಶೂನ್ಯ ಬದುಕಿನಲ್ಲಿ ''ನಗೆಯ ಹಾಯಿದೋಣಿ'' ಯಾಗಿ ''ತೇಲಿಬರು''ವ ಪ್ರಸಾದ್ ಈಕೆಗೆ ಸಮರ್ಪಕ ಚಿಕಿತ್ಸೆ ಮತ್ತು ಶುಶ್ರೂಷೆ ನೀಡಿ ಬದುಕಿನ ಬಗ್ಗೆ ಭರವಸೆ ತುಂಬುತ್ತಾನೆ : ''ಬದುಕೋದಿಕ್ಕೆ ಕೈ, ಕಾಲು, ಕಣ್ಣು, ಕಿವಿಗಳಿಗಿಂತ ಆರೋಗ್ಯಕಾರಿ ಮನಸ್ಸು ಮುಖ್ಯ, ಹೃದಯ ಮುಖ್ಯ, ಅವೆರಡೂ ನಿಮಗದಾವಲ್ಲ ಮಾಯಿಂದಿ...'' (ಪು. ೫೪). ಇನ್ನೊಂದು ಕಡೆ ಹೇಳುತ್ತಾನೆ : ''ಸವಾಲುಗಳಿಲ್ಲದ ಬದುಕು ಒಂದು ಬದುಕೇ ಅಲ್ಲ ಮಾಯಿಂದಿ. ಸುಖದ ಬೆಲೆ ತಿಳಿಬೇಕಾದ್ರೆ ದುಃಖ ಅನ್ನೋದಿರ್ಲೇ ಬೇಕು...'' (ಪು. ೫೫)

ಈ ಸಂಕಲನದ ಹೆಸರಿನ ಶೀರ್ಷಿಕೆ ಇರುವ ಕಥೆ ಅತ್ಯಂತ ಮಾರ್ಮಿಕವಾಗಿದೆ. ವ್ಯಕ್ತಿ ಸಾಧಾರಣವಾಗಿ ಇತರರನ್ನು ''ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ'' ಎಂಬ ಬಸವಣ್ಣನವರ ಕಳಕಳಿಯ ನುಡಿಗೆ ವಿರುದ್ಧವಾಗಿ ''ಇವ ನಮ್ಮವ ಇವ ಬೇರವ'' ಎಂಬ ಒಡೆವ ನೀತಿ ಪ್ರಕಾರ ನೋಡುತ್ತಾನೆಂಬುದು ೨೦ನೆಯ ಶತಮಾನದ 'ನಾಗರಿಕತೆ' ನಮಗೆ ಕಲಿಸಿರುವ ಕಲುಷಿತ ಪಾಠ. ಉದಾಹರಣೆಗೆ ಭಾರತದಲ್ಲಿಯ ಹಿಂದೂ-ಮುಸ್ಲಿಂ ನಡುವಿನ ಬಿರುಕಿನ ಒಂದು ದುಷ್ಫಲ ೧೯೯೨ರ ಬಾಬ್ರಿ ಮಸೀದಿ ಭಂಜನದ ದೌಷ್ಟ್ಯ.

ಮಾಯಿಂದಿ (ಲೇಖಕಿ) ಮತ್ತು ಈಕೆಯ ಕುಟುಂಬ ಬಾಡಿಗೆ ಕಾರ್‌ನಲ್ಲಿ ಹಂಪೆ ನೋಡಲು ಹೋಗುತ್ತಾರೆ. ಚಾಲಕ ಸ್ವಚ್ಛ ಕನ್ನಡ ಮಾತಾಡುತ್ತಿದ್ದುದು ಈಕೆ ಗಮನಿಸಿದಳು. ಅಲ್ಲಿಯ ಉಗ್ರನರಸಿಂಹನ ಭಗ್ನ ವಿಗ್ರಹದ ಸುತ್ತ ನಡೆದ ಮಾಯಿಂದಿ- ಚಾಲಕ ಸಂವಾದ ಈ ಕಥೆಯ ವಸ್ತು. ಹಂಪೆಯ ದುರಂತ ಮುಸ್ಲಿಂ ದಾಳಿಕೋರರಿಂದ ಸಂಭವಿಸಿತೆಂಬ ಮಾಮೂಲಿ ಚರಿತ್ರೆಯ ಪಾಠವನ್ನು ಈಕೆ ಆವೇಶಸಹಿತ ಪ್ರತಿಪಾದಿಸುತ್ತಾಳೆ. ''ಆದರೆ ಮ್ಯಾಡಂ! ಇತಿಹಾಸದ ಘಟನೆಗಳನ್ನು ಖಚಿತವಾಗಿ ಹೇಳಲು ಯಾರಿಂದ ಸಾಧ್ಯ ?'' ಎಂಬ ವೈಚಾರಿಕ ಪ್ರಶ್ನೆಯನ್ನು ಆ 'ನಿರಕ್ಷರಿ' (?) ಚಾಲಕ ಎತ್ತಿದಾಗ ಮಾಯಿಂದಿ ಆತನ ಹೆಸರೇನೆಂದು ಕೇಳುತ್ತಾಳೆ. ದೊರೆತ ಉತ್ತರ ''ಅಬ್ದುಲ್ ಬಶೀರ್ !'' ಮುಂದಿನ ವಿಸ್ತರಣೆ ಅತಿ ಸೂಕ್ಷ್ಮ ಮತ್ತು ಚಿಕಿತ್ಸಕ ಕುಸುರಿ ಕೆಲಸ. ಕಥೆಯ ಮುಕ್ತಾಯದಲ್ಲಿ ಮಾಯಿಂದಿ ಬಶೀರನಿಗೆ ನುಡಿದ ಮಾತು ವನಮಾಲಾರ ಆರೋಗ್ಯಕರ ಚಿಂತನೆಗೆ ನಿದರ್ಶನ. ''ಬಶೀರ್ ನೀವು ಹೇಳಿದ್ದು ನಿಜ, ಯಾರೇ ಆಗ್ಲಿ ಒಂದು ಸಮುದಾಯದವರು 'ಪವಿತ್ರ' ಎಂದು

> **ನಮ್ಮೊಳಗಿನ ನಾವು** (೧೨ ಸಣ್ಣ ಕಥೆಗಳ ಸಂಕಲನ)
> *ಲೇಖಕರು :* **ಶ್ರೀಮತಿ ವನಮಾಲಾ ಕಟ್ಟೇಗೌಡರ**
> *ಪ್ರಕಾಶಕರು :* **ಯುವಕರ ಸಂಘ (ರಿ)**, ರಾಮನಗರ
> ಹಗರಿಬೊಮ್ಮನಹಳ್ಳಿ – ೫೮೩೨೧೨
> **ಪ್ರಥಮ ಮುದ್ರಣ : ೨೦೦೩ ಪುಟ : ೧೦೮ ಬೆಲೆ : ರೂ. ೫೦**

ಭಾವಿಸಿರುವ ಮೂರ್ತಿಗಳನ್ನ ಭಗ್ನಗೊಳಿಸುವುದು ತಪ್ಪು, ಅಷ್ಟೇ ಅಲ್ಲ, ಒಂದು ಸಮುದಾಯದವರಿಗೆ 'ಪವಿತ್ರ' ಎನಿಸಿರುವ ಮಸೀದಿಯನ್ನು ಉರುಳಿಸೋದು ಕೂಡಾ...'' (ಪು. ೭೦). ನಮ್ಮೆಲ್ಲರೊಳಗಿನ ದ್ವಂದ್ವವನ್ನೂ ''ನಿಮ್ಮೊಡನಿದ್ದೂ ನಿಮ್ಮಂತಾಗದೆ'' (ನಿಸಾರ್ ಅಹಮದ್) ದೃಷ್ಟಿಯನ್ನೂ ಪರಿಣಾಮಕಾರಿಯಾಗಿ ಬಿಂಬಿಸುವ ಕಥೆಯಿದು.

'ಹಸಿವು' ಕಥೆಯಲ್ಲಿ ವ್ಯಕ್ತಿಯ ಲೈಂಗಿಕ ದಾಹ, ತುಸುವೂ ಅಶ್ಲೀಲತೆಯ ಸೋಂಕಿಲ್ಲದೆ ಕೇವಲ ಧ್ವನಿ ಮೂಲಕ, ಓದುಗರಲ್ಲಿ ಸ್ಫುರಿಸುವಂತೆ ಮಾಡಿರುವ ಸಂವೇದನೆ ಗಮನಾರ್ಹ; ಉತ್ತಮ ಅಭಿರುಚಿ ಮತ್ತು ಕಲೆಗಾರಿಕೆಗಳಿಗೆ ನಿದರ್ಶನ.

ಜಾತಿಯ ಕುರುಡು, ಬಹುತೇಕ ಮಾನವವಿರೋಧಿ ಕಟ್ಟುಪಾಡುಗಳನ್ನು ಮೀರಿ ಹೃದಯ ಸಂವೇದನೆ ಅಂದರೆ ಮಾನವೀಯತೆ ವಿಜೃಂಭಿಸುವ, ಆದರೆ ಆ ಆದರ್ಶ ಮಾರ್ಗದಲ್ಲಿ ಅದಕ್ಕೆ ಎದುರಾಗುವ ಅಸಂಖ್ಯ ಅಮಾನವೀಯ ಕಂಟಕಗಳನ್ನು ಕಲಾತ್ಮಕವಾಗಿ ಕುಂಚಿಸುವ ಅನೇಕ ಘಟನೆಗಳು ಇಲ್ಲಿಯ ಕಥೆಗಳಲ್ಲಿ ಓದುಗನ ಹೃದಯ ತಟ್ಟುತ್ತವೆ : 'ಸದಾನಂದನ ಮದುವೆ', 'ಉರಿ ಬರಲಿ; ಸಿರಿ ಬರಲಿ...', 'ನೆನಪುಗಳು ಸಾಯುವುದಿಲ್ಲ' ಮುಂತಾದವು. 'ನೆಲದ ಮರೆಯ ನಿಧಾನ...' ಕಥೆಯಂತೂ ಖುದ್ದು ನನ್ನದೇ ಯೌವನದ ಹಲವಾರು ಘಟನೆಗಳ ಸುತ್ತ ಹೆಣೆದಿರುವಂತೆ ಅನ್ನಿಸಿ ನನ್ನನ್ನು ಅಂತರ್ಮುಖಿಯಾಗಿಸಿತು.

''ಕಾನನದ ಘನ ತಿಮಿರದೊಳಗರಳಿ ಪರಿಮಳಿಸಿ ಮೂಸುವವರಿಲ್ಲದೆಯೆ ನಲುಗಿ ನಶಿಸುವ ಪುಷ್ಪಗಳವೆಷ್ಟೊ!'' ಎಂದು ಕವಿ ತಾಮಸ್ ಗ್ರೇ ತನ್ನ 'ಎಲಿಜಿ' ಕವನದಲ್ಲಿ ಶೋಕಿಸಿದ್ದಾನೆ. ಪ್ರಸ್ತುತ ಸಂಕಲನ ಇದಕ್ಕೆ ಅಪವಾದ. ಹೊಸಪೇಟೆಯ ಈ ಹೊಸ ಹೂವಿನ ಕಂಪನ್ನು ಕನ್ನಡಿಗರಿಗೆ ಪರಿಚಯಿಸುವ ಮೂಲಕ ಹಗರಿಬೊಮ್ಮನಹಳ್ಳಿಯ ಯುವಕರು ಶ್ಲಾಘನೀಯ ಕಾರ್ಯ ಮಾಡಿದ್ದಾರೆ. ಕಾರ್ಯದರ್ಶಿ ಶ್ರೀ ಗುರುಮೂರ್ತಿ ಪೆಂಡಕೂರು ಅವರ ಆಶಯ, ''ನಮ್ಮ ಜಿಲ್ಲೆಯ ಲೇಖಕರ ಪ್ರಥಮ ಕೃತಿಗಳನ್ನು ಪ್ರಕಟಿಸುವ ಧೋರಣೆಯಂತೆ ಮತ್ತೊಬ್ಬ ಮಹಿಳೆಯನ್ನು ಕರ್ನಾಟಕ ಸಾರಸ್ವತ ಲೋಕಕ್ಕೆ ಪರಿಚಯಿಸಲು ಸಂತೋಷವೆನಿಸುತ್ತದೆ'' ಈ ಸಂಕಲನದಲ್ಲಿ ಚೆನ್ನಾಗಿ ಈಡೇರಿದೆ. ಇದೊಂದು ಉತ್ತಮ ಕೃತಿಯೂ ಹೌದು. ೨೦೦೩ರ ತನಕ ಈ ಸಂಘ ಕನ್ನಡದಲ್ಲಿ ೪೪ ಸೃಜನಶೀಲ ಮತ್ತು ವೈಚಾರಿಕ ಕೃತಿಗಳನ್ನು ಪ್ರಕಟಿಸಿರುವುದು ಅಭಿಮಾನದ ವಿಷಯ. ಮುದ್ರಣ ಕರಡನ್ನು ತಿದ್ದುವಲ್ಲಿ ಹೆಚ್ಚು ಎಚ್ಚರ ವಹಿಸಬೇಕಿತ್ತು. ರಟ್ಟು ಕಟ್ಟಿದ್ದು ಇನ್ನಷ್ಟು ಗಟ್ಟಿಯಾಗಬಹುದಿತ್ತು.

ಪ್ರತಿಭೆ ಯಾವ ವ್ಯಕ್ತಿಯ, ಸಮುದಾಯದ ಅಥವಾ ಊರಿನ ಸೊತ್ತಲ್ಲವೆಂಬ ನೈಸರ್ಗಿಕ ತಥ್ಯಕ್ಕೆ ಬರೆದಿರುವ ಇನ್ನೂ ಒಂದು ಭಾಷ್ಯ ''ನಮ್ಮೊಳಗಿನ ನಾವು'' ಮತ್ತು ಹಗರಿಬೊಮ್ಮನಹಳ್ಳಿಯ ಯುವಕರ ಕನ್ನಡ ದಾಸೋಹ. ಇದನ್ನು ''ನಾವು'' (ಅಂದರೆ ರಾಜಕಾರಣಿಗಳು) ಅರಿತಿದ್ದೇವೆಯೇ ? ತದನುಸಾರ ದೇಶದ ಆಡಳಿತವನ್ನು ಮಾಡುತ್ತಿರುವೆವೇ ? ಈ ಲೇಖಕಿಯನ್ನು ಗುರುತಿಸಿ ಗೌರವಿಸಿದ್ದೇವೆಯೇ ? ಲೇಖಕಿಯವರ ವಿಳಾಸ: *ಶ್ರೀಮತಿ ವನಮಾಲಾ ಕಟ್ಟೇಗೌಡರ, 'ಮಾತೃಕುಟೀರ', ೧೫ನೆಯ ವಾರ್ಡ್, ಗಾಂಧಿ ಕಾಲನಿ, ಪುತ್ತೂರು ಹಾಸ್ಪಿಟಲ್ ಹಿಂಬದಿ, ಹೊಸಪೇಟೆ – ೫೮೩೨೦೩.*

ಜಿ. ಟಿ. ನಾರಾಯಣರಾವ್
೮, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ, ಮೈಸೂರು – ೫೭೦ ೦೦೯

ರಾಜಾ ರಾಮ್‌ಮೋಹನ್ ರಾಯ್ ಬರೀ ಆರ್ಯ ಸಮಾಜ ಸ್ಥಾಪಕರು ಮಾತ್ರವಲ್ಲ, ಬಾಲ್ಯ ವಿವಾಹದಂತ ಕ್ರೂರ ಪದ್ಧತಿಗೆ ವಿದಾಯ ಹೇಳಲು ಬ್ರಿಟಿಷರ ಮೇಲೆ ಒತ್ತಡ ತಂದು ಈ ಸಾಮಾಜಿಕ ಅನಿಷ್ಟ ಪದ್ಧತಿಯನ್ನು ನಿಷೇಧಿಸಿ ಆ ದಿನಗಳಲ್ಲಿ ಕಾನೂನು ಜಾರಿಗೆ ಬರಲು ಕಾರಣರಾದವರು. ೧೮೯೪ರಲ್ಲಿ ಅಂದಿನ ಮೈಸೂರು ಸರ್ಕಾರದಲ್ಲಿಯೂ (Mysore Infant Marriages Prevention Regulation of 1894) ಬಾಲ್ಯ ವಿವಾಹ ತಡೆಗಟ್ಟುವ ಕಾಯಿದೆ ೧೮೯೪ನ್ನು ಜಾರಿಗೊಳಿಸಲಾಯಿತು. ಆದಾಗ್ಯೂ ಈ ಕಾಯಿದೆ ಜಾರಿಯಾದ ನಂತರ ಇಂದಿಗೂ ಎಷ್ಟೋ ಬಾಲ್ಯ ವಿವಾಹಗಳು ತೆರೆಯ ಮರೆಯಲ್ಲಿ ನಡೆಯುತ್ತಲಿವೆ. ಇದಕ್ಕೆ ಕಾರಣ ನಮ್ಮ ಸಮಾಜ ಎಲ್ಲಿಯವರೆಗೆ ಎಚ್ಚೆತ್ತುಕೊಳ್ಳುವುದಿಲ್ಲವೋ ಅಲ್ಲಿಯವರೆವಿಗೆ ಸರ್ಕಾರ ತರುವ ಕಾಯಿದೆ ಕಾನೂನುಗಳು ಫಲಪ್ರದವಾಗುವುದಿಲ್ಲ. ಆದಾಗ್ಯೂ ಬ್ರಿಟಿಷರ ಕಾಲದಲ್ಲಿ ಸರ್ಕಾರಕ್ಕೆ ಬರುತ್ತಿದ್ದ ದೂರುಗಳ ವಿರುದ್ಧ ಶೀಘ್ರ ಕ್ರಮ ಕೈಗೊಳ್ಳಲಾಗುತ್ತಿತ್ತು. ಯಾವ ವ್ಯಕ್ತಿಯೂ ಕಾನೂನಿನ ಕೆಳಗೆ ನುಸುಳದಂತೆ ಎಚ್ಚರಿಕೆ ವಹಿಸಲಾಗುತ್ತಿತ್ತು.

೧೮೯೪ರಲ್ಲಿ ಈ ಕಾಯಿದೆ ಜಾರಿಗೆ ಬಂದನಂತರ ಬಾಲ್ಯ ವಿವಾಹದ ಮೊಟ್ಟಮೊದಲ ಪ್ರಕರಣ ಅಂದಿನ ಮೈಸೂರು ಸಂಸ್ಥಾನದಲ್ಲಿ ಬೆಳಕಿಗೆ ಬಂದದ್ದು ೧೮೯೪ರ ಏಪ್ರಿಲ್ ೨೭ರಂದು. ಹಾಸನ ಜಿಲ್ಲೆಯಲ್ಲಿ ಜನ್ನ ಅಯ್ಯಂಗಾರ್ ಎಂಬುವರು ಸರ್ಕಾರಕ್ಕೆ ಅರ್ಜಿಯೊಂದನ್ನು ಬರೆದು ಹಾಲುತೊರೆ ಗ್ರಾಮದ ಶೇಷ ಅಯ್ಯಂಗಾರ್ ಎನ್ನುವವರು ೬೫೦




ರೂಪಾಯಿಗಳನ್ನು ವರನ ಕಡೆಯವರಿಂದ ಪಡೆದು ೧೮ ವರ್ಷದ ಹುಡುಗನಿಗೆ ೨ ವರ್ಷದ ಮೊಮ್ಮಗಳನ್ನು ಕೊಟ್ಟು ವಿವಾಹ ಮಾಡಿದ್ದರು. ಅಂದಿನ ಹಾಸನದ ಜಿಲ್ಲಾಧಿಕಾರಿಗಳು ತಪಾಸಣೆ ಮಾಡಿದಾಗ ಈ ವಿವಾಹ ನಡೆದದ್ದು ದೃಢಪಟ್ಟಿತು. ತಪ್ಪಿತಸ್ಥರಾದ ಶೇಷ ಅಯ್ಯಂಗಾರ್ ಈ ಕಾನೂನಿನ ಬಗ್ಗೆ ತಮಗೆ ಅರಿವಿಲ್ಲದೆ ತಮ್ಮ ಸಂಪ್ರದಾಯದಲ್ಲಿ ಹಿಂದಿನಿಂದಲೂ ಅವಕಾಶವಿದ್ದುದರಿಂದ ಈ ರೀತಿಯ ಬಾಲ್ಯ ವಿವಾಹ ಮಾಡಿದ್ದಾಗಿ ಒಪ್ಪಿಕೊಂಡರು. ಆದರೆ ಅಂದಿನ ಜಿಲ್ಲಾಧಿಕಾರಿಗಳು ಬಾಲ್ಯ ವಿವಾಹ ನಿರ್ಬಂಧ ಕಾಯಿದೆ ಇದ್ದರೂ ಈ ಆಚರಣೆ ನಡೆಸಿರುವುದು ಕಾನೂನಿನ ಪ್ರಕಾರ ಅಪರಾಧವೆಂದು ಪರಿಗಣಿಸಿ ಈ ಮದುವೆಗೆ ಕಾರಣಕರ್ತರಾದ ಶೇಷ ಅಯ್ಯಂಗಾರ್, ರಘುನಾಥಾಚಾರ್, ಲಕ್ಷ್ಮೀಪತಿ ಅಯ್ಯಂಗಾರ್ ಅವರಿಗೆ ೨೦ ರೂ. ದಂಡ ವಿಧಿಸಿದರು. ತಪ್ಪಿದಲ್ಲಿ ೩ ದಿವಸಗಳ ಕಾರಾಗೃಹ ಶಿಕ್ಷೆ ವಿಧಿಸಿದರು.

ರಾಜ್ಯ ಪತ್ರಾಗಾರದಲ್ಲಿ ಹೀಗೆ ಹಲವಾರು ದಾಖಲೆಗಳನ್ನು ಪರಿಶೀಲಿಸುತ್ತಾ ಬಂದಾಗ ಅನೇಕ ಪ್ರಕರಣಗಳು ನಮ್ಮ ಗಮನ ಸೆಳೆಯುತ್ತವೆ. ಬಾಲ್ಯ ವಿವಾಹ ಪದ್ಧತಿ ಯಾವುದೇ ಒಂದು ಜಾತಿಗೆ ಮೀಸಲಾಗಿರದೆ ಅಂದಿನ ಸಮಾಜದ ಕೆಳಸ್ತರದ ಜಾತಿಯಲ್ಲಿಯೂ ಈ ಪದ್ಧತಿ ಆಚರಣೆಯಲ್ಲಿದ್ದುದು ಕಂಡುಬರುತ್ತದೆ. ಬೇಡರ ಜಾತಿಯ ೭ ವರ್ಷ ವಯಸ್ಸಿನ ತಿಪ್ಪಿ ಎಂಬ ಹುಡುಗಿಯನ್ನು ಅದೇ ಜಾತಿಯ ೨೬ ವರ್ಷದ ದ್ಯಾಮ ಎಂಬ ಹುಡುಗನಿಗೆ ಹೊಸದುರ್ಗ ತಾಲ್ಲೂಕಿನ ಅತ್ತಿಮೊಗ್ಗೆ ಗ್ರಾಮದಲ್ಲಿ ವಿವಾಹ ಮಾಡಿಕೊಟ್ಟ ಘಟನೆ ಸರ್ಕಾರದ ಗಮನಕ್ಕೆ ಬಂದು ಹುಡುಗನಿಗೆ ಮತ್ತು ಹುಡುಗಿಯ ತಾಯಿಗೆ ಒಂದು ರೂಪಾಯಿ ಜುಲ್ಮಾನೆಯನ್ನು ಜಿಲ್ಲಾ ದಂಡಾಧಿಕಾರಿಗಳು ವಿಧಿಸಿದರು.

೧೫ ಜೂನ್ ೧೯೧೭ರಲ್ಲಿ ಶ್ರೀರಂಗಪಟ್ಟಣದ ಕರಿಘಟ್ಟ ದೇವಸ್ಥಾನದಲ್ಲಿ ಬಾಲ್ಯ ವಿವಾಹದ ಒಂದು ಘಟನೆ ಜರುಗಿತು. ಈ ವಿಷಯ ಹೇಗೋ ಪೊಲೀಸರಿಗೆ ತಿಳಿದು ಇದಕ್ಕೆ

**ಸರ್ವೋಚ್ಚ ನ್ಯಾಯಾಲಯದ ಇತ್ತೀಚಿನ ಒಂದು ತೀರ್ಪಿನ ಪ್ರಕಾರ ಬುದ್ಧಿ ಬಂದಿರುವ ಬಾಲಕ-ಬಾಲಕಿಯರು ೧೮ ವರ್ಷ ವಯಸ್ಸಿಗೆ ಮುಂಚೆ ವಿವಾಹವಾಗಬಹುದು. ಅದು ಸಂವಿಧಾನ-ಕಾನೂನಿಗೆ ವಿರೋಧವಾದರೂ ಪರವಾಗಿಲ್ಲ!!**

**○ ತರೀಕೆರೆ ಮಲ್ಲಿಕಾರ್ಜುನಪ್ಪ**

ಸಂಬಂಧಿಸಿದವರನ್ನು ಬಂಧಿಸಿದರು. ಪಂಚಾಲ ಜಾತಿಯ ಲಿಂಗಿ ಎನ್ನುವ ೫ ವರ್ಷ ೪ ತಿಂಗಳು ಹಾಗೂ ೧೪ ದಿವಸದ ವಧು ಅದೇ ಜಾತಿಯ ಲಿಂಗಾಚಾರಿ ಎನ್ನುವ ವರನನ್ನು ಮದುವೆಯಾಗಿದ್ದಳು. ಪೊಲೀಸರು ಹುಡುಗಿಯ ಜನನ ಪ್ರಮಾಣ ಪತ್ರವನ್ನು ಅವಳ ತಾಯಿಯ ಊರಾದ ಮುತ್ತಾಲಮ್ಮನ ಶೆಟ್ಟಿ ಹಳ್ಳಿಯ ಜನನ ಮತ್ತು ಮರಣ ದಾಖಲೆ ಪುಸ್ತಕ ಪರಿಶೋಧಿಸಿ ಪಡೆದುಕೊಂಡರು. ಆದರೂ ಮದುಮಗನಾದ ಲಿಂಗಾಚಾರಿಯ ಬಗ್ಗೆ ಜನನ ಪ್ರಮಾಣದ ಬಗ್ಗೆ ಯಾವುದೇ ಮೂಲ ದಾಖಲೆಗಳು ಲಭ್ಯವಾಗದೇ ಹೋದದ್ದರಿಂದ ಅವನು ಅಪ್ರಾಪ್ತನಾದರೂ ಅವನನ್ನು ಬಂಧಿಸಲಿಲ್ಲ. ಆದರೆ ಈ ಮದುವೆಗೆ ಕಾರಣರಾದ ಹುಡುಗಿಯ ತಾಯಿ ಕೆಂಚಮ್ಮ, ತಂದೆ ಲಿಂಗಾಚಾರಿ ಹುಡುಗನ ಮಲತಾಯಿ ಮತ್ತು ಈ ಮದುವೆ ಮಾಡಿಸಲು ಕಾರಣರಾದ ಪುರೋಹಿತ ವೆಂಕಟ ಸುಬ್ಬಯ್ಯ, ಇವರುಗಳನ್ನು (ಫ್ರೆಂಚ್‌ರಾಕ್ಸ್) ಇಂದಿನ ಪಾಂಡವಪುರ ಪೊಲೀಸರು ಬಂಧಿಸಿ ಮೊಕದ್ದಮೆ ಹೂಡಿದ್ದರು. ತಪ್ಪಿತಸ್ಥರನ್ನು ಶಿಕ್ಷೆಗೊಳಪಡಿಸಲಾಯಿತು.

೧೯೦೪ರಲ್ಲಿ ನಡೆದ ಇನ್ನೊಂದು ಪ್ರಕರಣ ಕುತೂಹಲಕಾರಿಯಾಗಿದ್ದು, ಮೈಸೂರಿನಿಂದ ಪ್ರಕಟಿಸಲ್ಪಡುತ್ತಿದ್ದ 'ಸೂರ್ಯೋದಯ ಪ್ರಕಾಶಿಕ' ಎನ್ನುವ ಕನ್ನಡ ದಿನಪತ್ರಿಕೆಯೊಂದು ಬಾಲ್ಯ ವಿವಾಹ ಕುರಿತಾದ ಸುದ್ದಿಯೊಂದನ್ನು ಹೊರಗೆಡಹಿತು. ಅಂದಿನ ಮೈಸೂರಿನ ದಿವಾನರಾದ ಪಿ. ಎನ್. ಕೃಷ್ಣಮೂರ್ತಿಯವರು ಇನ್ಸ್‌ಪೆಕ್ಟರ್ ಜನರಲ್ ಹೆಚ್. ಜೆ. ಬಾಬು (ವಿದ್ಯಾ ಇಲಾಖೆ)ರವರಿಗೆ ಪತ್ರ ಬರೆದು ಈ ಬಗ್ಗೆ ತನಿಖೆ ನಡೆಸುವಂತೆ ತಿಳಿಸಿರುವುದು ದಾಖಲೆಗಳಲ್ಲಿ ಕಂಡುಬರುತ್ತದೆ. ಈ ಬಗ್ಗೆ ತನಿಖಾಕಾರ್ಯ ನಡೆಸಿದ ಶಿಕ್ಷಣ ಆಯುಕ್ತರು ಹೊರಗೆಡಹಿದ ಅಂಶಗಳು ಅಚ್ಚರಿ ಹುಟ್ಟಿಸಿದಂತವುಗಳಾಗಿದ್ದವು.

ದೇವನಹಳ್ಳಿಯ ಬಾಲಕಿಯರ ಶಾಲೆಯ ಶಿಕ್ಷಕರಾದ ೫೪ ವರ್ಷ ವಯಸ್ಸಿನ ಶ್ರೀನಿವಾಸಾಚಾರ್ ಎನ್ನುವವರು ಅದೇ ಊರಿನ ವಿ. ವಿ. ಶಾಲೆಯ ಸಂಸ್ಕೃತ ಉಪಾಧ್ಯಾಯರಾದ ಅನಂತ ತೀರ್ಥಾಚಾರ್ ಎಂಬುವವರ ೮ ವರ್ಷ ೯ ತಿಂಗಳ ಹುಡುಗಿಯನ್ನು ಮದುವೆಯಾದದ್ದು. ಇಬ್ಬರೂ ವಿದ್ಯಾವಂತರಾಗಿದ್ದು, ಈ ಕಾನೂನಿನ ಬಗ್ಗೆ ಅರಿವಿದ್ದವರಾಗಿದ್ದರು. ಆದ್ದರಿಂದ ಈ ಕಾನೂನು ಚಾಲ್ತಿ ಇಲ್ಲದ ಮದ್ರಾಸ್ ಪ್ರಾಂತ್ಯವಾದ ಗುಟಿಕಾಚಲಂನಲ್ಲಿ ವಿವಾಹವಾದರು. ತನಿಖೆ ಸಂದರ್ಭದಲ್ಲಿ ವಿವಾಹವಾಗಿರುವುದು ಈ ಕಾನೂನು ಪ್ರಚಲಿತವಿಲ್ಲದ ಪ್ರಾಂತ್ಯವಾದ್ದರಿಂದ ಈ ಕಾನೂನು ನಮಗೆ ಅನ್ವಯಿಸುವುದಿಲ್ಲವೆನ್ನುವ ವಾದವನ್ನು ಮಂಡಿಸಿದರು. ಆದರೆ ಇದನ್ನು ಒಪ್ಪದ ಸರ್ಕಾರ ವಿದ್ಯಾವಂತರಾಗಿದ್ದು, ಕಾನೂನಿನ ಬಗ್ಗೆ ತಿಳುವಳಿಕೆ ಉಳ್ಳವರು ಇಂತಹ ಕಾರ್ಯ ಕೈಗೊಂಡಿರುವುದು ಅಕ್ಷಮ್ಯ ಅಪರಾಧವೆಂದು ಪರಿಗಣಿಸಿ ಇಬ್ಬರು ಶಿಕ್ಷಕರನ್ನೂ ಕೆಲಸದಿಂದ ಅಮಾನತುಗೊಳಿಸಿತು. ಈ ರೀತಿ ಅನೇಕ ಪ್ರಕರಣಗಳನ್ನು ಅಂದಿನ ಬ್ರಿಟಿಷ್ ಸರ್ಕಾರ ದಾಖಲಿಸಿ ಸಂಬಂಧಿಸಿದವರಿಗೆ ಸೂಕ್ತ ಶಿಕ್ಷೆಯನ್ನು ನೀಡಿರುವುದು ದಾಖಲೆಗಳಲ್ಲಿ ಕಂಡುಬಂದಿದೆ. ಆದರೆ ಇಂದು ನಡೆಯುವ ಪ್ರಕರಣಗಳು ಬೆಳಕಿಗೆ ಬಂದರೂ, ನಂತರ ಏನಾಯಿತು ಎನ್ನುವ ಅಂಶಗಳು ಗಮನಕ್ಕೆ ಬಾರದೇ ಹೋಗುವುದರಿಂದ ಹಾಗೂ ಇದು ಶಿಕ್ಷಾರ್ಹ ಅಪರಾಧ ಎನ್ನುವ ತಿಳಿವಳಿಕೆ ಈ ಕಾಯಿದೆ ಬಂದು ೧೧೦ ವರ್ಷಗಳ ನಂತರವೂ ಬಾರದಿರುವುದು ಇನ್ನೂ ಈ ಅನಿಷ್ಟ ಪದ್ಧತಿ ಜಾರಿಯಲ್ಲಿರುವುದಕ್ಕೆ ಕಾರಣವಾಗಿದೆ.

ಸರ್ವೋಚ್ಚ ನ್ಯಾಯಾಲಯದ ಇತ್ತೀಚಿನ ಒಂದು ತೀರ್ಪಿನ ಪ್ರಕಾರ ಬುದ್ಧಿ ಬಂದಿರುವ ಬಾಲಕ-ಬಾಲಕಿಯರು ೧೮ ವರ್ಷ ವಯಸ್ಸಿಗೆ ಮುಂಚೆ ವಿವಾಹವಾಗಬಹುದು. ಅದು ಸಂವಿಧಾನ-ಕಾನೂನಿಗೆ ವಿರೋಧವಾದರೂ ಪರವಾಗಿಲ್ಲ!!

ತರೀಕೆರೆ ಮಲ್ಲಿಕಾರ್ಜುನಪ್ಪ
ಬಿ. ಬಿ. ೧೫, ಹೌಸಿಂಗ್ ಬೋರ್ಡ್ ಕಾಲೋನಿ, ಸುಲ್ತಾನಪಾಳ್ಯ, ಬೆಂಗಳೂರು – ೫೬೦ ೦೩೨




ರಾಷ್ಟ್ರಕೂಟರಿಂದ ಹಿಡಿದು ವಿಜಯನಗರದ ಅರಸರ ಆಳ್ವಿಕೆಯ ಕಾಲದವರೆಗೆ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟ ಗದಗ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಸಾಹಿತ್ಯ, ಕಲೆ, ವಾಸ್ತುಶಿಲ್ಪ, ವ್ಯಾಪಾರ, ವಾಣಿಜ್ಯ, ಕ್ಷೇತ್ರಗಳಂತೆ ಆಡಳಿತ ಕ್ಷೇತ್ರದಲ್ಲಿಯೂ ಐತಿಹಾಸಿಕ ಮಹತ್ವ ಪಡೆದಿತ್ತು. ಪ್ರಸ್ತುತ ಗದಗ ಜಿಲ್ಲೆ ಪ್ರಾಚೀನ ಮೂರು ನಾಡುಗಳನ್ನು ವ್ಯಾಪಿಸಿತ್ತು. ಕಲ್ಯಾಣದ ಚಾಲುಕ್ಯರ ಆಡಳಿತಾವಧಿಯಲ್ಲಿ ಆಡಳಿತದ ಅನುಕೂಲಕ್ಕಾಗಿ ತಮ್ಮ ಸಾಮ್ರಾಜ್ಯವನ್ನು ಅನೇಕ ವಿಭಾಗ, ಉಪವಿಭಾಗಗಳನ್ನಾಗಿ ವಿಂಗಡಿಸಿರುವುದು ಕಂಡುಬರುತ್ತದೆ. ಇಂದು ರಾಜ್ಯ, ಜಿಲ್ಲೆ, ತಾಲೂಕು, ಹೋಬಳಿಗಳೆಂದು ವಿಭಾಗಿಸಿದಂತೆ, ಪ್ರಾಚೀನ ಕಾಲದಲ್ಲಿ ದೇಶವನ್ನು ಪ್ರಾಂತ, ಮಂಡಲ, ಕಂಪಣ, ದೇಶ, ವಿಷಯ, ನಾಡು ಎಂದು ಮುಂತಾಗಿ ವಿಂಗಡಿಸಿದ ಸಂಗತಿ ಶಾಸನಗಳಲ್ಲಿ ಉಕ್ತವಾಗಿದೆ. ಇಂತಹ ವಿಭಾಗಗಳಲ್ಲಿ 'ಕುಂತಳ ದೇಶ'ವು ಒಂದು.

ಕುಂತಳ ದೇಶದಲ್ಲಿ ಸಮಾವೇಶಗೊಳ್ಳುವ ಉಪವಿಭಾಗಗಳೆಂದರೆ ಬನವಾಸಿ, ಹಲಸಿಗೆ, ಬಾಗಡಿಗೆ, ಹಗಂಟಿಗೆ, ತರ್ದವಾಡಿ, ಕಿಸುಕಾಡು, ಕರಡಿಕಲ್ಲು, ಹಾನುಗಲ್ಲು, ಬೆಳ್ವೊಲ, ಪುಲಿಗೆರೆ ಮತ್ತು ಮಾಸವಾಡಿ ಮುಂತಾದವು. ಕೆಲವು ಬಾರಿ ಈ ಆಡಳಿತ ವಿಭಾಗಗಳನ್ನು ಅರಸು ಮನೆತನದ ಹೆಸರಿಂದ ಕರೆಯಲಾಗಿದೆ. ಉದಾಹರಣೆಗೆ, ಗಂಗವಾಡಿ, ಸಿಂಧವಾಡಿ, ಕದಂಬ ಮಂಡಲ, ಸೇವುಣ ದೇಶ ಮುಂತಾದವು. ಈ ಆಡಳಿತ ವಿಭಾಗಗಳೊಂದಿಗೆ ಸಂಖ್ಯೆಗಳನ್ನು ಜೋಡಿಸಿ ಕರೆಯುವ ಪದ್ಧತಿ ಅಂದು ಪ್ರಚಲಿತವಾಗಿದ್ದುದು ತಿಳಿದುಬರುತ್ತದೆ. ಗಂಗವಾಡಿ – ೯೬೦೦, ಬನವಾಸಿ – ೧೨೦೦೦, ಕೊಹಿಂಡಿ – ೩೦೦೦, ತರ್ದವಾಡಿ – ೧೦೦೦, ಹಾನುಗಲ್ಲ – ೫೦೦, ಬೆಳ್ವೊಲ – ೩೦೦, ಪುಲಿಗೆರೆ – ೩೦೦, ಮಾಸವಾಡಿ – ೧೪೦, ಕಿಸುಕಾಡು – ೭೦ ಹೀಗೆ ಅನೇಕ ಉದಾಹರಣೆ ಕೊಡಬಹುದು. ಈ ಪದ್ಧತಿ ಕರ್ನಾಟಕದ ವೈಶಿಷ್ಟ್ಯವೇ ಎನ್ನುವ ಮಟ್ಟಿಗೆ ಈ ಭಾಗದಲ್ಲಿ ಪ್ರಚಲಿತವಿದ್ದಿತು. ಭಾರತದ ಇತರ ವಿಭಾಗಗಳಲ್ಲಿ ಇಂಥ ಪದ್ಧತಿ ವಿರಳವಾಗಿದ್ದಿತೆಂಬ ಅಭಿಪ್ರಾಯಕ್ಕೆ ಬರಲಾಗಿದೆ. ಈ ವಿಭಾಗಗಳ ಹೆಸರುಗಳಿಗೆ ಜೋಡಿಸಲಾದ ಸಂಖ್ಯೆಗಳ ಅರ್ಥವೇನು? ಅವು ಏನನ್ನು ಸೂಚಿಸುತ್ತವೆ ಎಂಬುದರ ಬಗ್ಗೆ ವಿದ್ವಾಂಸರಲ್ಲಿ ತರ್ಕ-ವಿತರ್ಕಗಳು ನಡೆದಿದ್ದು, ಇನ್ನೂ ಸ್ಪಷ್ಟ ಚಿತ್ರಣಕ್ಕೆ ಬರಲಾಗಿಲ್ಲ.

# ಗದಗ ಜಿಲ್ಲೆಯ ಪ್ರಾಚೀನ ವಿಭಾಗಗಳು

■ ಡಾ|| ವಿ. ಕೆ. ದ್ಯಾವನಗೌಡ್ರ

ಹಳ್ಳಿಗಳನ್ನು ಗುಂಪುಗಳನ್ನಾಗಿ ಮಾಡಿಕೊಂಡು ಆಡಳಿತ ಮಾಡಬೇಕೆಂಬ ವಿಚಾರವನ್ನು ಮನು ತಿಳಿಸಿದ್ದಾನೆ ಮತ್ತು ಗ್ರಾಮಗಳ ಗುಂಪಿನ ಸಂಖ್ಯೆ ಹತ್ತರಿಂದ ನೂರರವರೆಗೆ ಇರಬಹುದು ಎಂದು ಹೇಳಿದ್ದಾನೆ. ಕುಕನೂರು ಶಾಸನವು ಕುಕನೂರ ಮೂವತ್ತು ಎಂಬ ವಿಭಾಗವನ್ನು ಬಣ್ಣಿಸುವಾಗ 'ತ್ರಿಂಶದ್ ಗ್ರಾಮಾದಿಪತಿಂ' ಎಂದು ಕರೆದಿದೆ. ಅಂದರೆ ಕುಕನೂರು ಮೂವತ್ತು ಗ್ರಾಮಗಳ ವಿಭಾಗಕ್ಕೆ ಮುಖ್ಯ ಸ್ಥಳವಾಗಿತ್ತೆಂದು ಅರ್ಥವಾಗುತ್ತದೆ. ಹಾಗೆ ಮಾಸವಾಡಿಯು – ನೂರಾನಲ್ವತ್ತು ಗ್ರಾಮಗಳಿಗೆ ಪ್ರಮುಖ ಸ್ಥಳವಾಗಿತ್ತು.

**ಮಾಸವಾಡಿ – ೧೪೦**

ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಬಹುತೇಕ ಹಳ್ಳಿಗಳನ್ನು ವ್ಯಾಪಿಸಿರುವ ಮಾಸವಾಡಿ ನೂರಾನಲವತ್ತು ಹಳ್ಳಿಗಳ ನಾಡಾಗಿರುವುದನ್ನು ಆಲೂರ ಶಾಸನ ಸ್ಪಷ್ಟಪಡಿಸುತ್ತದೆ. ಶಾಸನಗಳಲ್ಲಿ ಮಾಸೆಯವಾಡಿ ನೂಱನಾಲ್ವತ್ತಱ, ಮಾಸವಾಡಿನೂಱನಾಲ್ವತ್ತುಮಂ, ಮಾಸೆಯವಾಡಿ ನೂಱನಾಲ್ವತ್ತುಮಂ. ಮಾಸವಾಡಿ ನೂಱನಾಲ್ವತ್ತು, ಮಾಸಿವಾಡಿನೂಱನಾಲ್ವತ್ತಱ, ಮಾಸವಾಡಿನೆಡು, ಮಾಸವಾಡಿ ಎಂಬ ರೂಪಗಳಲ್ಲಿ ಕಾಣಿಸಿಕೊಳ್ಳುತ್ತದೆ. ಇದರಿಂದ ಮಾಸವಾಡಿಯು 'ನಾಡು' ಎಂಬ ವಿಭಾಗವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಮಾಸವಾಡಿನಾಡು ಯಾವಾಗ ಒಂದು ಆಡಳಿತ ವಿಭಾಗವಾಗಿ ರೂಪಗೊಂಡಿತು ಎಂಬುದು ಗಮನಾರ್ಹ.

ಮಾಸವಾಡಿ ನಾಡಿನಲ್ಲಿ ಉಪಲಬ್ಧವಿರುವ ಪ್ರಾಚೀನ ಶಾಸನವೆಂದರೆ ರಾಷ್ಟ್ರಕೂಟ ಅಮೋಘವರ್ಷನ (ಕ್ರಿ.ಶ. ೮೧೪-೮೭೮) ಕಾಲದ ಮೇವುಂಡಿ ಶಾಸನ. ಇದರಲ್ಲಿ ಮಾಸವಾಡಿನಾಡಿನ ಉಲ್ಲೇಖ ದೊರೆಯುವುದಿಲ್ಲ. ಅಮೋಘವರ್ಷನ ನಂತರ ಆಳ್ವಿಕೆ ಮಾಡಿದ ಎರಡನೇ ಕೃಷ್ಣನ (ಕ್ರಿ.ಶ. ೮೭೮-೯೧೪) ಕಾಲದ ಮೇವುಂಡಿ ಶಾಸನದಲ್ಲಿ ಮಾಸವಾಡಿಯ ಉಲ್ಲೇಖ ಬರುತ್ತದೆ. ಇದರಿಂದ ಅಮೋಘವರ್ಷನ ಕಾಲಕ್ಕೆ ಮಾಸವಾಡಿನಾಡು ಒಂದು ಆಡಳಿತ ವಿಭಾಗವಾಗಿ ಇನ್ನೂ ರೂಪಗೊಂಡಿರಲಿಲ್ಲವೆಂದು ಸ್ಪಷ್ಟವಾಗಿ ಹೇಳಬಹುದು. ಮಾಸವಾಡಿ – ೧೪೦ ಕರ್ನಾಟಕದ ತುಂಗಭದ್ರಾ ಮತ್ತು ಮಲಪ್ರಭಾ ನದಿಯ ಮಧ್ಯದ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಗ್ರಾಮಗಳನ್ನು ವ್ಯಾಪಿಸಿತ್ತು. ಅಂದಿನ ಆಡಳಿತ ವಿಭಾಗಗಳ ಹಿನ್ನೆಲೆಯಲ್ಲಿ ಈ ನಾಡಿನ ಮೇರೆಗಳನ್ನು ಗುರುತಿಸುವುದು ಸುಲಭಸಾಧ್ಯ. ಕವಿರಾಜಮಾರ್ಗಕಾರನು ತಿರುಳ್ಗನ್ನಡನಾಡಿನ ಪ್ರದೇಶದ ವ್ಯಾಪ್ತಿಯನ್ನು ಅಂದಿನ ಪ್ರಸಿದ್ಧ ನಗರಗಳ ಹಿನ್ನೆಲೆಯಲ್ಲಿ ಸೂಚಿಸುತ್ತಾನೆ.

ಅದರೊಳಗಂ ಕಿಸುವೊೞಲಾ
ವಿದಿತ ಮಹಾಕೊಪಣ ನಗರದಾ ಪುಲಿಗೆಱೆಯಾ।
ಸದಭಿಸ್ತುತಮಪ್ಪೊಂಕುಂ।
ದದ ನಡುವಣ ನಾಡೆನಾಡ ಕನ್ನಡದ ತಿರುಳ್

ಅವನ ವಿಚಾರದಲ್ಲಿ ಕಿಸುವೊಳಲು, ಕೊಪಣನಗರ, ಪುಲಿಗೆರೆ ಮತ್ತು ಒಕ್ಕುಂದ (ಬಿಜಾಪುರ ಜಿಲ್ಲೆಯ ಪಟ್ಟದಕಲ್ಲು, ರಾಯಚೂರ ಜಿಲ್ಲೆಯ ಕೊಪ್ಪಳ, ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರ, ಬೆಳಗಾವಿ ಜಿಲ್ಲೆಯ ಒಕ್ಕುಂದ) ಇವುಗಳ ಮಧ್ಯದ ಪ್ರದೇಶವು 'ತಿರುಳ್ ಕನ್ನಡನಾಡು' ಎಂಬುದು ಕವಿರಾಜಮಾರ್ಗಕಾರನ ಅಭಿಮತ. ಇವನ ಪ್ರಕಾರ ಕೊಪಣನಗರ ಮತ್ತು ಪುಲಿಗೆರೆಗಳ ಮಧ್ಯದಲ್ಲಿ ಬರುವ ಆಡಳಿತ ವಿಭಾಗಗಳೆಂದರೆ ಬೆಳ್ವಲ – ೩೦೦ ಮತ್ತು ಮಾಸವಾಡಿ – ೧೪೦ ಈ ಎರಡು ನಗರಗಳಾಗುತ್ತವೆ. ಡಾ|| ಎಂ. ಎಂ. ಕಲಬುರ್ಗಿಯವರು ಹೇಳುವಂತೆ ಪುಲಿಗೆರೆ ಮೂನೂರರ ಆಡಳಿತ ವಿಭಾಗದ ಸೀಮೆಯನ್ನು ತಿಳಿಸುತ್ತಾ ಪುಲಿಗೆರೆ ಮೂನೂರರ ಉತ್ತರಕ್ಕೆ 'ಬೆಳ್ವೊಲ ಮೂನೂರು' 'ಪಶ್ಚಿಮಕ್ಕೆ

'ಹಾನುಂಗಲ್ಲಯ್ಯೂರು', ದಕ್ಷಿಣಕ್ಕೆ 'ಬನವಾಸಿ ಪನ್ನಿಚ್ಛಾಸಿರ' ಪೂರ್ವಕ್ಕೆ 'ಮಾಸವಾಡಿ ನೂರನಲ್ವತ್ತು' ನಾಡುಗಳಿದ್ದವು. ಇದರಿಂದ ಮಾಸವಾಡಿನಾಡು 'ಬೆಳ್ವೊಲ ಮೂನೂರು' ಮತ್ತು ಬನವಾಸಿ ಪನ್ನಿಚ್ಛಾರ್ಸಿರ ಇವುಗಳ ಮಧ್ಯದ ನಾಡಾಗುತ್ತದೆ. ಅಂದರೆ ಮಾಸವಾಡಿ ನಾಡಿನ ಪೂರ್ವಪಶ್ಚಿಮವಾಗಿ ಕೊಪಣನಗರ ಮತ್ತು ಪುಲಿಗೆರೆ ದಕ್ಷಿಣೋತ್ತರವಾಗಿ 'ಬನವಾಸಿ ಪನ್ನಿಚ್ಛಾರ್ಸಿರ' ಮತ್ತು ಬೆಳ್ವೊಲ ಮೂನೂರು. ಈ ನಾಲ್ಕು ಆಡಳಿತ ವಿಭಾಗಗಳನ್ನು ತನ್ನ ಮೇರೆಯಾಗಿ ಹೊಂದಿತ್ತು ಎಂದು ಸ್ಪಷ್ಟವಾಗುತ್ತದೆ.

ಮಾಸವಾಡಿ - ೧೪೦ರಲ್ಲಿ ಸಮಾವೇಶಗೊಳ್ಳುವ ಗ್ರಾಮಗಳೆಂದರೆ ಡಂಬಳ, ಆಲೂರು, ಕಕ್ಕೂರು, ಮೇವುಂಡಿ, ನಾಗರಹಳ್ಳಿ, ಕೊರ್ಲಹಳ್ಳಿ, ಬೂದಿಹಾಳ, ಶಿರೂರು, ಉರ್ಚಲಗೇರಿ, ಡೋಣಿ, ತಾಮ್ರಗುಂಡಿ, ಬರದೂರ, ಬಿದರಹಳ್ಳಿ, ಚಿಕ್ಕವಡ್ಡಟ್ಟಿ, ಮುಂಡರಗಿ ಕವಲೂರುಗಳು. ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ಶಾಸನದಲ್ಲಿ ಮಾಸವಾಡಿಯ ಉಲ್ಲೇಖ ಬರುತ್ತದೆ. ಆದರೆ ಹೂವಿನ ಹಡಗಲಿ ಈ ವಿಭಾಗದಲ್ಲಿ ಬರುವುದಿಲ್ಲ. ಚಕ್ರವರ್ತಿ ವಿಕ್ರಮಾದಿತ್ಯನು ಹೂವಿನ ಹಡಗಲಿ ಗ್ರಾಮದಲ್ಲಿನ ದೇವರಿಗೆ ದಾನವಾಗಿ ಮಾಸವಾಡಿ - ೧೪೦ರ ವಿಭಾಗದ ಒಂದು ಗ್ರಾಮವನ್ನು ಕೊಡುತ್ತಾನೆ. ಶಾಸನದಲ್ಲಿ '... ಮಾಸವಾಡಿ ನೂಱನಲ್ವತ್ತುರ ಬಳಿಯ(ಪ್ಪ) ಉರ್ಚ್ಚುಲಗೆರಿ' ಎಂದು ಬರುತ್ತದೆ. ಗದಗ ಜಿಲ್ಲೆಯ ರೋಣ ತಾಲೂಕಿನ ಸೂಡಿ ಶಾಸನದಲ್ಲಿ ಈ ವಿಭಾಗದ ಉಲ್ಲೇಖ ಬರುತ್ತದೆ. ಸೂಡಿ, ಕಿಸುಕಾಡು ಎಪ್ಪತ್ತರಲ್ಲಿ ಬರುತ್ತಿದ್ದು, ಚಾಲುಕ್ಯ ಅಕ್ಕದೇವಿ ಕಿಸುಕಾಡು ಎಪ್ಪತ್ತು, ತೊರಗಲೆ ಅರವತ್ತು, ಮಾಸವಾಡಿ ನೂರನಲ್ವತ್ತರ ಆಡಳಿತ ಮಾಡುತ್ತಿದ್ದಳು ಎಂಬಲ್ಲಿ ಉಲ್ಲೇಖ ಬರುತ್ತದೆ. ಕೊಪ್ಪಳ ಜಿಲ್ಲೆಯ ಯಲಬುರ್ಗಿ ತಾಲೂಕಿನ ಸಂಕನೂರ ಶಾಸನ ಮತ್ತು ಗದಗ ಜಿಲ್ಲೆಯ ಅಣ್ಣಿಗೇರಿ ಶಾಸನದಲ್ಲಿ ಈ ನಾಡಿನ ಉಲ್ಲೇಖ ದೊರೆಯುತ್ತದೆ. ಆದರೆ ಇದೂ ಈ ಭಾಗದಲ್ಲಿ ಬರುವುದಿಲ್ಲ.

ಮಾಸವಾಡಿನಾಡಿನ ಡಂಬಳವು ಈ ನಾಡಿನ ರಾಜಧಾನಿಯಾಗಿತ್ತು. ಡಂಬಳ ಶಾಸನಗಳಲ್ಲಿ 'ಮಾಸೆವಾಡಿನಾಡಿಗೆ ಕಟ್ಟಿದ ಪಟ್ಟಿಮುವಿಟ್ಟ ಬೊಟ್ಟು ಮೆಳವಿಟ್ಟ, ಕಳಶಮುಮಿರ್ಪ್ಪಂತೆ ಧರ್ಮವೊಳಲೆಂಬ ಮಹಾಮಟ್ಟಣಂ ವಿರಾಜಿಸುತಿರ್ಪುದೆ', 'ಕರ್ನಾಟಕ ಭೂಮಿ ಭಾಮಿನಿ ಮಧ್ಯ ದೇಶಕ್ಕೆ ವಿಶದ ಮೌಕ್ತಿಕ ಹಾರದಂತಿರುವ ಧರ್ಮವೊಳಲು', 'ಮಾಸವಾಡಿನಾಡೊಳು ಧರ್ಮಪುರ ತಾವ ಸುಮತಿ ತೊಟ್ಟ ಹಾರದೊಲಿರುವದು' ಎಂದು ಕ್ರಿ.ಶ. ೧೦೫೯ ರಿಂದ ಕ್ರಿ.ಶ. ೧೧೮೪ರ ಅವಧಿಯ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಈ ನಾಡಿನ ಮೇವುಂಡಿ, ಉಪರಾಜಧಾನಿಯಾಗಿದ್ದಿರಬೇಕು. ಮೇವುಂಡಿ ಶಾಸನದಲ್ಲಿ 'ರಾಜ ರಾಜಧಾನಿ ಮೆಱೆವಿಡು' ಎಂದು ಉಲ್ಲೇಖಿತವಾಗಿದೆ. ಈ 'ಮೆಱೆವಿಡು'ದಿಂದಲೆ ಈ ನಾಡಿಗೆ 'ಮಾಸವಾಡಿ' ಎಂಬ ಹೆಸರು ಬಂದಿರಬಹುದು. ರಾಜಧಾನಿ ಮತ್ತು ಉಪರಾಜಧಾನಿಗಳನ್ನು ಹೊಂದಿದ ಈ ನಾಡು, ಸುರಕ - ೧೨, ಅವಗವಾಡಿ - ೧೨ ಎಂಬ ಎರಡು ಉಪ ವಿಭಾಗಗಳನ್ನು ಹೊಂದಿತ್ತು. ಚಿಕ್ಕವಡ್ಡಟ್ಟಿ ಶಾಸನದಲ್ಲಿ ''... ಕಕ್ಕೆರಸರಂ ಸುಱಕ ಪನ್ನೆರಡುವಂ ಅವಗವಾಡಿ ಹನ್ನೆರಡು...'' ಎಂದು ಉಲ್ಲೇಖಿತವಾಗಿದೆ. ಈ ನಾಡಿನ ಡಂಬಳವು ಕಲೆ-ವಾಸ್ತುಶಿಲ್ಪ, ಸಾಹಿತ್ಯ, ವಾಣಿಜ್ಯ, ವ್ಯಾಪಾರ, ಸರ್ವಧರ್ಮಗಳ ನೆಲೆವೀಡಾಗಿತ್ತು. ಅಲ್ಲದೆ ಪ್ರಮುಖ ಪಟ್ಟಣವೂ ಆಗಿತ್ತು. ಡಂಬಳ ಶಾಸನದಲ್ಲಿ 'ಧರ್ಮ್ಮವೊಳಲೆಂಬ ಮಹಾಮಟ್ಟಣಂ', 'ಮಹಾನಗರ' ಎಂದು ಉಲ್ಲೇಖವಾಗಿದೆ.

**ಬೆಳ್ವೊಲ – ೩೦೦**

> ಇಳೆಯಂಬ ಸತಿಯ ಕುನ್ತಳ
> ಕಳಾಪದನ್ತೆಳೆದು ಕುನ್ತಳದೇಶ
> ಕ್ಕಳವಟ್ಟ ಚೆನ್ನ ಪೂವೆನೆ
> ಬೆಳೆಗಿದು ದೊಳ್ವೆಲವೆನಿಪ್ಪ ಬೆಳ್ವೊಲ ದೇಶಂ ॥

ಗದಗ ಜಿಲ್ಲೆಯ ಬಹುತೇಕ ಗ್ರಾಮಗಳನ್ನು ಒಳಗೊಂಡ ಬೆಳ್ವೊಲ, ಮೂನೂರು ಗ್ರಾಮಗಳ ಒಂದು ಆಡಳಿತ ವಿಭಾಗವಾಗಿದ್ದು, ಪ್ರಾಚೀನ ಕರ್ನಾಟಕದಲ್ಲಿ ಗಣ್ಯಸ್ಥಾನವನ್ನು ಪಡೆದಿತ್ತು. ಬೆಳ್ವೊಲ ಕುಂತಲಕಾಂತೆಯ ಮುಡಿಯಲ್ಲಿಯ ಚಿನ್ನದ ಹೂವು ಎಂದು ಕವಿ ಹೃದಯತುಂಬಿ ಬಣ್ಣಿಸಿದ್ದಾನೆ. ಶಾಸನಗಳ ಅಧ್ಯಯನದಿಂದ ಇದರ ಮೇರೆಗಳನ್ನು ಗುರುತಿಸಲು ಸಾಧ್ಯ. ಬೆಳ್ವೊಲದ ಉತ್ತರಕ್ಕೆ ಬೆಳಗಲಿ – ೫೦೦, ಪೂರ್ವಕ್ಕೆ ಕರಡಿಕಲ್–೩೦೦, ದಕ್ಷಿಣಕ್ಕೆ ಮಾಸವಾಡಿ – ೧೪೦ ಮತ್ತು ಪುಲಿಗೆರೆ – ೩೦೦, ಪಶ್ಚಿಮಕ್ಕೆ ಹಲಸಿಗೆ – ೧೨೦೦೦ ಮತ್ತು ಕೊಂಡಿ – ೩೦೦೦ಗಳನ್ನು ಮೇರೆಯಾಗಿ ಹೊಂದಿತ್ತು. ಇದರಲ್ಲಿ ಸಮಾವೇಶಗೊಳ್ಳುವ ಪ್ರದೇಶಗಳೆಂದರೆ ನವಲಗುಂದ, ನರಗುಂದ, ಹುಬ್ಬಳ್ಳಿ, ಕುಂದಗೋಳ, ಸವದತ್ತಿ, ರಾಮದುರ್ಗ, ಬಾದಾಮಿ, ಯಲಬುರ್ಗಾ ತಾಲೂಕುಗಳು. ಪ್ರಾಚೀನ ಉಪವಿಭಾಗಗಳಾದ ಕೊಳನೂರು-೩೦, ಬೆಳ್ವಣಿಕೆ-೧೨, ನೆರೆಯಂಗಲ್- ೧೨, ಕಿಸುಕಾಡು-೭೦, ಕುಕನೂರು-೩೦, ಮುಳಗುಂದ-೧೨, ಚಿಂಚಿಲ-೫೦, ಬೆಣ್ಣೆದಡಿ-೭೦, ನವಲಗುಂದ-೪೦ಗಳು ಇದರಲ್ಲಿ ಸಮಾವೇಶಗೊಂಡಿದ್ದು, ನವಲಗುಂದ ತಾಲೂಕಿನ ಅಣ್ಣಿಗೆರೆ ಇದರ ರಾಜಧಾನಿಯಾಗಿತ್ತು.

ಕಿಸುಕಾಡು-೭೦ರ ಉಪವಿಭಾಗದಲ್ಲಿ ರೋಣ, ನಿಡಗುಂದಿ, ಸೂಡಿ ಗ್ರಾಮಗಳು ಸೇರಿದವು. ಬೆಳ್ವಣಿಕೆ - ೧೨ರಲ್ಲಿ ಕೌಜಗೇರಿ, ಬೆಣ್ಣೆದಡಿ-೭೦ರಲ್ಲಿ ಅರಹಟ್ಟಿ, ಕೊಳನೂರು - ೩೦ರಲ್ಲಿ ಕೊಣ್ಣೂರು, ಬೆಳ್ಳೇರಿ, ಬೆಣ್ಣೂರು, ಸುಳ್ಳ, ಮುಷ್ಟೀಗೆರಿ, ಮತ್ತೀಕಟ್ಟಿ, ನೀಲಗುಂದ, ತಲಕವಾಡ, ಆಲೂರು, ಇಂಡುಗಲು, ನೀರಲಗಿ, ಹಗನೂರು, ವಡವಟ್ಟಿ, ಕುಕನೂರು, ಅವರವಾಡಿ, ಕಿತ್ತಳೆ, ಸಿರಸಂಗಿ, ಮುನವಳ್ಳಿಗಳು ಸೇರಿದ್ದವು. ನೆರೆಯಂಗಲ್ಲು-೧೨ರಲ್ಲಿ ಜಕ್ಕಲಿ, ಸವಡಿ, ಅಬ್ಬಿಗೇರಿ, ಉಮಚಗಿ, ಇಟ್ಟಿಗೆಗಳು ಸೇರಿದವು, ಮುಳಗುಂದ-೧೨ರಲ್ಲಿ ಮುಳಗುಂದ, ಹೊಸೂರು, ಕುರ್ತಕೋಟಿ, ಕಣವಿ, ಹರ್ತಿ, ವೆಂಕಟಾಪುರ, ಎಲಿಸಿರೂರು, ಕಲ್ಲೂರು, ಯಳವತ್ತಿಗಳು ಸೇರಿದವು. ಶ್ರೀನಿವಾಸ ರಿತ್ತಿಯವರು ಬೆಳ್ವೊಲ ವಿಭಾಗದಲ್ಲಿನ ೨೪೪ ಗ್ರಾಮಗಳನ್ನು ಗುರುತಿಸಿದ್ದು ೫೬ ಗ್ರಾಮಗಳ ಕೊರತೆ ಇದೆಯೆಂದು ತಿಳಿಸಿದ್ದಾರೆ.

**ಪುಲಿಗೆರೆ – ೩೦೦**

ಗದಗ ಜಿಲ್ಲೆಯಲ್ಲಿ ಬರುವ ಮತ್ತೊಂದು ಪ್ರಾಚೀನ ವಿಭಾಗ ಪುಲಿಗೆರೆ, ಮೂನೂರು ಗ್ರಾಮಗಳ ಒಂದು ಆಡಳಿತ ವಿಭಾಗವಾಗಿದ್ದು, ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಮಹತ್ವದ ಸ್ಥಾನ ಪಡೆದಿತ್ತು. ಚಾಲುಕ್ಯ ವಿಕ್ರಮಾದಿತ್ಯನ ರಾಣಿ ಲಕ್ಷ್ಮೀದೇವಿ ಪುಲಿಗೆರೆ (ಲಕ್ಷ್ಮೇಶ್ವರ)ಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ್ದಳು. ಶಾಸನಗಳ ಅಧ್ಯಯನದಿಂದ ಪುಲಿಗೆರೆಯ ಮೇರೆಗಳನ್ನು ಗುರುತಿಸಲು ಸಾಧ್ಯ. ಡಾ|| ಎಂ. ಎಂ. ಕಲಬುರ್ಗಿಯವರು ಪುಲಿಗೆರೆ ಮೂನೂರು ಈ ಆಡಳಿತ ವಿಭಾಗದ ಸೀಮೆಯನ್ನು ತಿಳಿಸುತ್ತಾ ''ಪುಲಿಗೆರೆ ಮೂನೂರರ ಉತ್ತರಕ್ಕೆ ಬೆಳ್ವೊಲ ಮೂನೂರು, ಪಶ್ಚಿಮಕ್ಕೆ ಹಾನೂಂಗಲ್ಲಯ್ಯೂರು, ದಕ್ಷಿಣಕ್ಕೆ ಬನವಾಸಿ ಪನ್ನಿಚ್ಛಾರ್ಸಿರ, ಪೂರ್ವಕ್ಕೆ ಮಾಸವಾಡಿ ನೂರನಲವತ್ತು ನಾಡುಗಳಿದ್ದವೆಂದು'' ಉಲ್ಲೇಖಿಸಿದ್ದಾರೆ.

ಶಾಸನಗಳಲ್ಲಿ ಪುಲಿಗೆರೆಯು, ಪುರಿಕರ, ಪುರಿಕನಗರ, ಪುರಿಗೆರೆ, ರಕ್ತಪುರ ಎಂಬ ಹೆಸರುಗಳಿಂದ ಕಾಣಿಸಿಕೊಂಡಿದೆ. ಪುಲಿಗೆರೆ ಇದರ ಕನ್ನಡ ರೂಪ ಹುಲಿಗೆರೆ ಎಂದಾಗುತ್ತದೆ. ಈ ಪುಲಿಗೆರೆ ಮೂನೂರರ ಆಡಳಿತ ವಿಭಾಗಕ್ಕೆ ಹೊಂದಿಕೊಂಡಂತೆ ಬೆಳ್ವೊಲ ಮೂನೂರು ಆಡಳಿತ ವಿಭಾಗವಿರುವುದರಿಂದ ಶಾಸನಗಳು ಇವುಗಳನ್ನು 'ಎರಡು ಮೂನೂರು' ಎಂದು, ''ಪುಲಿಗೆರೆ ಮೂನೂರು ಬೆಳ್ವೊಲ ಮೂನೂರುಂ ಅಂತೆರಡುನೂರುಂ'' ಎಂದು ಉಲ್ಲೇಖಿಸುತ್ತವೆ. ಆದರೂ ಇವು ಬೇರೆ ಬೇರೆ ಪ್ರಾಂತಗಳಾಗಿದ್ದವು.

ಪುಲಿಗೆರೆ ವಿಭಾಗವು ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕ, ಹಾವೇರಿ ಜಿಲ್ಲೆಯ ಸವನೂರ ತಾಲೂಕಿನ ಗ್ರಾಮಗಳನ್ನು, ಗದಗ, ಕುಂದಗೋಳ ಮತ್ತು ಶಿಗ್ಗಾಂವ ತಾಲೂಕಿನ ಕೆಲ ಗ್ರಾಮಗಳನ್ನು ಒಳಗೊಂಡಿತ್ತು. ವರದಾನದಿ ಇದರ ದಕ್ಷಿಣ ಗಡಿರೇಖೆಯಾಗಿತ್ತು. ಇದರಲ್ಲಿ ಸಮಾವೇಶಗೊಂಡಂತೆ ಕಾಣುವ ಹಾವೇರಿ, ಬಂಕಾಪುರ, ಹಾನಗಲ್‌ಗಳು ಬನವಾಸಿ ಪನ್ನಿಚ್ಛಾರ್ಸಿರ ಪ್ರಾಂತದಲ್ಲಿದ್ದವು. ಸೊರಟೂರು, ಬನ್ನಿಕೊಪ್ಪ, ಬೆಳ್ಳಟ್ಟಿ, ಎರಗುಪ್ಪೆ, ಬೆಳ್ಳನೂರು, ಗೋವಿನ ಕೊಪ್ಪ, ನೇರಲಗೆ, ಶಿರಹಟ್ಟಿ, ಗೊಜನೂರು, ಲಕ್ಷ್ಮೇಶ್ವರ, ಶಿಗ್ಗಲಿ, ಹೂವಿನ ಶಿಗ್ಗಲಿ, ಗುಡಗೇರಿ, ಕಳಸ, ಗೌಡಗೆರೆ, ಹುಲಗೂರು, ಸೊರಲಿ, ಕಾರಡಗಿ, ಕಾಲಡಿ, ಮಂತ್ರವಾಡಿ, ಸವಣೂರು, ಹತ್ತಿಮತ್ತೂರು ಗ್ರಾಮಗಳು ಈ ನಾಡಿನಲ್ಲಿ ಸಮಾವೇಶಗೊಳ್ಳುತ್ತವೆ. 'ಕಾಲಡಿತೊಂಭತ್ತಾರು' ಇದು ಈ ನಾಡಿನ ಹುಲಿಗೂರು ಶಾಸನದಲ್ಲಿ ಉಲ್ಲೇಖಿತವಾದ ಉಪವಿಭಾಗ. ಮಂತ್ರೋಡಿ, ಎಲೆಬಳ್ಳಿ, ಹಳಿಯಕೆರೆ, ಕರಳವಾಡಗಳು ಇದರಲ್ಲಿ ಸೇರಿದ್ದವು ಎಂದು ಡಾ|| ಶ್ರೀನಿವಾಸ ರಿತ್ತಿ ತಿಳಿಸುತ್ತಾರೆ. ಹೀಗೆ ಗದಗ ಜಿಲ್ಲೆ ಮೂರು ಪ್ರಸಿದ್ಧ ಪ್ರಾಚೀನ ನಾಡುಗಳನ್ನು ಹೊಂದಿದ್ದುದು ಹೆಮ್ಮೆಯ ವಿಷಯ.

ಡಾ|| ವ್ಹಿ. ಕೆ. ದ್ಯಾವನಗೌಡ್ರ
ಸಂಶೋಧಕರು, ಉಪನ್ಯಾಸಕರು, ಸರಕಾರಿ ಪ.ಪೂ. ಕಾಲೇಜು, ಹಿರೇಕೆರೂರ, ಹಾವೇರಿ ಜಿಲ್ಲೆ

## ಮರೀಚಿಕೆ

> ನೆರೆ ಬಂತು ಊರಿಗೆ
> ಜ್ವರ ಬಂತು ದೊರೆಗೆ
> ತಡೆ ಬಿತ್ತು ಸಮೀಕ್ಷೆಗೆ
> ಪರಿಹಾರವಾಯ್ತು ಮರೀಚಿಕೆ !

ಡಿ. ವಿ. ಬಡಿಗೇರ
ತೆಗ್ಗಿನ ಪೇಟೆ, ಗದಗ – ಬೆಟಗೇರಿ – ೫೮೨೧೦೨

# ಒಳ್ಳೆಯತನ ಸಹಜವೇ ?



■ ಪ್ರೊ|| ಎಮ್. ಆರ್. ನಾಗರಾಜು

*ಸಹಜ ನಗ್ನತೆ ನಮಗೆ, ಸಹಜ ನಖದಾಡಿಗಳು।*
*ಬಹುಯುಗದ ಸಂಸ್ಕಾರ ವಸ್ತ್ರಶೃಂಗಾರ॥*
*ಸಹಜತೆ ನಿರಕ್ಷರತೆ, ವಿದ್ಯೆ ತಾಂ ಕೃತಕವಲ।*
*ಸಹಜದಿನೆ ಕೃತಕಮುಂ – ಮಂಕುತಿಮ್ಮ॥*

ಒಳ್ಳೆಯತನ ಎಂಬುದು ಹುಟ್ಟುಗುಣ ಎಂದು ವಾದಿಸುವವರು ಮೇಲಿನ ಪ್ರಶ್ನಾರ್ಥಕ ವಾಕ್ಯಕ್ಕೆ ಪೂರ್ಣವಿರಾಮ ಹಾಕಿ 'ಒಳ್ಳೆಯತನ ಸಹಜ' ಎಂದು ಹೇಳಿಯಾರು. ರೂಸೋ ಕೂಡಾ ಆ ರೀತಿ ಭಾವಿಸಿದ್ದುಂಟು. ಇದಕ್ಕೆ ತದ್ವಿರುದ್ಧವಾಗಿ ಮನುಷ್ಯನ ಸಹಜ ಗುಣ ಕೆಟ್ಟತನ ಎಂದೂ ವಾದಿಸುವವರಿದ್ದಾರೆ. ಹುಟ್ಟಿನಿಂದ ಧೂರ್ತನಾಗಿರುವ ವ್ಯಕ್ತಿ ತನ್ನ ಸ್ವಾರ್ಥದಾಚೆಗಿನ ಔದಾರ್ಯವನ್ನು ಕಲಿತುಕೊಳ್ಳುವುದು ಅನಂತರದ ದಿನಗಳಲ್ಲಿ ಎಂಬುದು ಇವರ ವಾದ. ನಮ್ಮ ಹೊಟ್ಟೆಯೇ ನಮಗೆ ಸ್ವಾರ್ಥದ ಗುರು ಎಂಬುದು ಹೀಗೆ ವಾದಮಾಡುವವರ ನಿಲುವು. (ನಾವು ತಿಂದರಲ್ಲವೆ ನಮ್ಮ ಹೊಟ್ಟೆ ತುಂಬುವುದು ?) ಮೂರನೆಯ ಇನ್ನೊಂದು ನಿಲುವೂ ಇದೆ. ''ಹುಟ್ಟಿನಿಂದ ನಾವು ಒಳ್ಳೆಯವರೂ ಅಲ್ಲ; ಕೆಟ್ಟವರೂ ಅಲ್ಲ. ಒಳ್ಳೆಯತನ ಹಾಗೂ ಕೆಟ್ಟತನಗಳೆರಡೂ ಕಲಿತ ಪ್ರವೃತ್ತಿಗಳು'' – ಎಂಬ ನಿಲುವು. ಜಾನ್ ಲಾಕ್ ಈ ವಾದದ ಪ್ರಮುಖ ಪ್ರತಿಪಾದಕ. ನಮ್ಮ ಇಂದ್ರಿಯಗಳ ಮೂಲಕ ಸಾಗಿ ದಾಖಲಾಗದ ಯಾವುದೇ ಅಂಶ ನಮ್ಮ ಮಿದುಳಿನಲ್ಲಿಲ್ಲವೆಂಬುದು ಅವನ ಖಚಿತ ನಿಲುವು. ಒಳ್ಳೆಯದು-ಕೆಟ್ಟದ್ದು, ಬೇಕು-ಬೇಡ – ಎಲ್ಲವೂ ನಮ್ಮ ಮನಸ್ಸಿನ ಸೇರ್ಪಡೆ ಎನ್ನುತ್ತಾನೆ ಲಾಕ್.

ತಿಳಿವು

ಶ್ರೀಸಾಮಾನ್ಯರಾದ ನಮಗೆ ಯಾವುದೇ ಖಚಿತ ನಿಲುವು ಇರುವುದಿಲ್ಲ. ಸಂದರ್ಭಾನುಸಾರ ಈ ಮೂರು ವಾದಗಳನ್ನೂ ನಾವು ಬಳಕೆ ಮಾಡಿಕೊಳ್ಳುತ್ತಿದ್ದರೂ ಆ ವಾದಗಳೆಲ್ಲವನ್ನೂ ಬಳಕೆ ಮಾಡುವ ನಮ್ಮೊಳಗಿನ ವೈರುಧ್ಯ ನಮ್ಮ ಗಮನಕ್ಕೆ ಬರುವುದಿಲ್ಲ! ಎಷ್ಟು ವಿಚಿತ್ರ ? ಇನ್ನು ಚಿಂತಕರು ಹೇಗೆ ? ದ್ವಂದ್ವದ ಬಾಧೆ ಅವರನ್ನೂ ಬಿಟ್ಟಿಲ್ಲವೆಂಬುದು ಬಹಳ ಮಂದಿಯ ಬರೆಹಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ತಿಳಿಯುತ್ತದೆ.

'ಒಳ್ಳೆಯತನ ಸಹಜವೇನಲ್ಲ' ಎಂಬ ಶೀರ್ಷಿಕೆಯ ಕವನದಲ್ಲಿ ಗೋಪಾಲಕೃಷ್ಣ ಅಡಿಗರು ತಮ್ಮ ಈ ಹೇಳಿಕೆಗೆ ವಿರುದ್ಧ ಹೇಳಿಕೆಯನ್ನೂ ಆ ಕವನದಲ್ಲೇ ಬರೆದಿದ್ದಾರೆ. 'ಒಳ್ಳೆಯತನ ಅಸಹಜವೇನಲ್ಲ' – ಎಂದು ಹೇಳಿ ಆ ಹೇಳಿಕೆಗೂ ತಮ್ಮ ಸಮರ್ಥನೆಯನ್ನು ನೀಡಿದ್ದಾರೆ. ಒಟ್ಟಿನಲ್ಲಿ 'ಗೊಂದಲಪುರ' ಸೃಷ್ಟಿಯಾದಂತಾಯಿತು.

ಚಾರ್ಲ್ಸ್ ಡಾರ್ವಿನ್ 'ಅರ್ಹಜೀವಿಗಳ ಉಳಿವು' (survival of the fittest) ಎಂಬ ಅಂಶವನ್ನು ಮಂಡಿಸಿದಾಗ ಮಾನವ ಮೂಲತಃ ಕ್ರೂರಿ ಎಂದು ಪ್ರತಿಪಾದಿಸಿರುವ ಬಗ್ಗೆ ಮೆಚ್ಚುಗೆ ಸೂಚಿಸಿರುವವರೂ ಇದ್ದಾರೆ. 'Nature red in teeth and claw' – ನಿಸರ್ಗವೂ ಕ್ರೂರಿ; ನಿಸರ್ಗದ ಉತ್ಪನ್ನ ಎನ್ನಬಹುದಾದ ಮಾನವನ ವರ್ತನೆಯೂ ಸಹಜವಾಗಿಯೇ ಕ್ರೌರ್ಯದ್ದು ಎಂದು ತೀರ್ಮಾನಿಸಲಾಗುತ್ತದೆ. ಅದೇ ರೀತಿಯ ನಿಲುವನ್ನು ಅನೇಕ ಕವಿಗಳೂ ತಳೆದಿದ್ದಾರೆ. ಮಂಕುತಿಮ್ಮನ ಕಗ್ಗದ ಈ ಪದ್ಯವನ್ನು ಗಮನಿಸಿ :

ಈ ಸಾಲುಗಳಲ್ಲಿ ನಾಗರಿಕತೆ ಮತ್ತು ಒಳಿತಿನ ವರ್ತನೆ ಸಂಸ್ಕಾರದಿಂದ ಬಂದದ್ದು ಎನ್ನುವಾಗ ಸಹಜವಾದದ್ದು ಒರಟುತನ ಎಂಬ ನಿಲುವು ಇದೆಯಲ್ಲವೇ ? ಅವರದೇ ಕೃತಿ – 'ಸಂಸ್ಕೃತಿ'. ಅದರಲ್ಲಿ 'ಚಿತ್ತ ಪ್ರಕೃತಿ; ಅನ್ನ ಸಂಸ್ಕೃತಿ' ಎಂದೂ ಅವರು ವಿವರಿಸಿರುವುದನ್ನು ನೆನಪುಮಾಡಿಕೊಳ್ಳಬಹುದು (ಯಶವಂತ ಚಿತ್ತಾಲರ ಮಾತು 'ನಾವು ಮಾನವರಾಗಿ ಹುಟ್ಟಿದವರಲ್ಲ – ಮಾನವರಾಗಲೆಂದು ಹುಟ್ಟಿದವರು' ಈ ನಿಲುವಿಗೆ ಪೂರಕವಾದದ್ದು.) ಮಾನವ ಮೂಲತಃ ಕ್ರೂರಿ/ ಒರಟ ಎಂಬ ನಿಲುವು ಡಿ.ವಿ.ಜಿ.ಯವರದೆನ್ನೋಣವೇ ?

ಅವರ ಇನ್ನೊಂದು ಕೃತಿ 'ವನಸುಮ'. ವನಸುಮದ ಹಾಗೆ ನಿಃಸ್ವಾರ್ಥ ಬದುಕು ಬಾಳಬೇಕೆಂಬ ಆಶಯವನ್ನು ಮಲ್ಲಿಗೆ ಹೂವು, ಮರಗಳ ಹಾಗೆ ಮಾನವನೂ ತಾನು ಉಪಕಾರಿಯೆಂಬ ಅಹಂಕಾರವನ್ನು ತೊರೆದು ಪ್ರಕೃತಿಯ ಅಂಗವಾಗಿ 'ನೈಜಮಾದೊಳ್ವಿನಿಂ' ಬಾಳಬೇಕೆಂದು ಬರೆದಿರುವುದನ್ನು ಗಮನಿಸಿ. ಹೂವು ಮರಗಳಿಗಿರುವ 'ಒಳ್ಪು' ಅತ್ಯಂತ ನೈಜವಾದದ್ದೆಂಬುದನ್ನು ಅವರು ಪ್ರತಿಪಾದಿಸಿದ್ದಾರೆ.

ಮೇಲಿನ ವಿವರಣೆಯನ್ನು ನೀಡಿದ ಉದ್ದೇಶ ಖಂಡಿತವಾಗಿ ಕವಿಗಳ ಆಲೋಚನೆಯಲ್ಲಿರುವ ವೈರುಧ್ಯಗಳನ್ನು ಖಂಡಿಸುವುದು ಅಲ್ಲ. ಆದರೆ ವೈರುಧ್ಯದ ನಿಲುವು ಸಹಜವಾದದ್ದು ಎಂಬುದನ್ನು ಪ್ರತಿಪಾದಿಸುವುದಾಗಿದೆ.

ಒಳ್ಳೆಯತನ ಕುರಿತಾಗಿ ಇರುವ ಮೂರು ನಿಲುವುಗಳು 'ಇದಮಿತ್ಥಂ' ಎಂದು ಉತ್ತರ ಹೇಳುವ ಸಮಸ್ಯೆಗಳಲ್ಲ. ವಾಸ್ತವದಲ್ಲಿ ಅವು ಬಿಕ್ಕಟ್ಟುಗಳು. ಈ ಸಾರ್ವಕಾಲಿಕ ಬಿಕ್ಕಟ್ಟುಗಳನ್ನು ತತ್ತ್ವಶಾಸ್ತ್ರದ ಸಾರ್ವಕಾಲಿಕ ಸಮಸ್ಯೆಗಳು ಎಂದು ಹೇಳಲಾಗುತ್ತದೆ. ವಿಭಿನ್ನ ಮನೋಭೂಮಿಕೆಯಲ್ಲಿ ವಿವಿಧ ನಿಲುವನ್ನು ಶ್ರೀಸಾಮಾನ್ಯರಾದ ನಮ್ಮ ಹಾಗೆಯೇ ಚಿಂತಕರೂ, ಕವಿಗಳೂ, ದಾರ್ಶನಿಕರೂ ತಳೆಯುವುದು ಸಮಸ್ಯೆಯ ಸಾರ್ವಕಾಲಿಕ ಸ್ವರೂಪಕ್ಕೆ ಹಿಡಿದ ಕನ್ನಡಿ.

ಉದ್ಧರಿಸಲು ಅತಿ ಧಾರಾಳವಾಗಿ ಬಳಕೆ ಆಗುವ ಪದ್ಯಸಂಕಲನ – 'ಮಂಕುತಿಮ್ಮನ ಕಗ್ಗ'. ಹೀಗೆ ಉದ್ಧರಿಸುವಾಗ ತಮ್ಮ ಆಲೋಚನೆ ಹಾಗೂ ಕವಿಯ ಆಲೋಚನೆ ಒಂದೇ ಎಂಬ ಧನ್ಯಭಾವ ಉದ್ಧರಿಸಿದವರಿಗೂ, ಕೇಳುಗರಿಗೂ ಆಗುತ್ತದೆ. ಆದರೆ ಪದ್ಯದ ಸ್ಥೂಲ ವಿವರಣೆಯೊಂದಿಗೆ ವ್ಯವಹರಿಸುವ ಭರದಲ್ಲಿ ಆ ಪದ್ಯದಲ್ಲಿ ಸೂಕ್ಷ್ಮವಾಗಿ ಪ್ರಸ್ತಾಪವಾಗಿರುವ ವಿಚಾರಗಳು ಕಣ್ತಪ್ಪಿಬಿಡುತ್ತವೆ. ಅದಕ್ಕಾಗಿ ಕೃತಿಗಳನ್ನು ವಿಭಿನ್ನ ದೃಷ್ಟಿಕೋನದಿಂದ ಮರುಪರಿಶೀಲಿಸಬೇಕಾದ ಅಗತ್ಯ ಬೀಳುತ್ತದೆ. ಅದಕ್ಕೆ ''ಕವಿತೆ ನಿಚ್ಚಂ ಪೊಸತು'' ಎಂದು ಪಂಪನ ಮಾತನ್ನು ಉದ್ಧರಿಸಲೇ ?

ಮಾನವ ಮೂಲತಃ ಒಳ್ಳೆಯವನೋ, ಕೆಟ್ಟವನೋ, ತಟಸ್ಥನೋ ತಿಳಿಯದು. ವ್ಯಕ್ತಿಯನ್ನೇ ನಗಣ್ಯವಾಗಿಸಿದ ಹೇಳಿಕೆಯೊಂದಿದೆ. ''ಜಗತ್ತಿನಲ್ಲಿ ಒಳ್ಳೆಯವರು ಕೆಟ್ಟವರೆಂಬುದಿಲ್ಲ. ಇರುವುದು ಒಳ್ಳೆಯ ರೂಢಿಗಳು, ಕೆಟ್ಟ ರೂಢಿಗಳು ಮಾತ್ರ.'' ಈ ಹೇಳಿಕೆ ಒಳ್ಳೆಯತನದ ಸಹಜತೆಯನ್ನಾಗಲೀ/ಅಸಹಜತೆಯನ್ನಾಗಲೀ ಹೇಳುವುದಿಲ್ಲ. ರೂಢಿಯ ಮೂಲ ಹುಟ್ಟಿನಿಂದ ಬಂದಿದೆಯೋ ಕಲಿಕೆಯಿಂದ ಬಂದಿದೆಯೋ ಚರ್ಚಿಸುವುದಿಲ್ಲ. ''ಆದರೆ ಕೆಟ್ಟತನವೋ, ಒಳ್ಳೆಯತನವೋ ನಾವು ಬೆಳೆಸಿಕೊಂಡಿರುವ ಗುಣ ನಮ್ಮತನವಲ್ಲ. ಅದನ್ನು ಬದಲಿಸಿಕೊಳ್ಳಲು ಸಾಧ್ಯ ; ಹಾಗೆ ಬದಲಿಸಿಕೊಳ್ಳುವಾಗ ನಮ್ಮನ್ನು ನಾವೇ ಕಳೆದುಕೊಂಡಹಾಗೆ ವ್ಯಥೆಪಡಬೇಕಾಗಿಲ್ಲ'' ಎಂಬ ಮಾತನ್ನು ಹೇಳುತ್ತದೆ. ನಾವು ಒಳ್ಳೆಯವರಾಗಲು ಬಯಸುವುದಾದರೆ ಇಷ್ಟು ಸಾಕಲ್ಲವೇ ? ಕೆಟ್ಟವರನ್ನು ವಿರೋಧಿಸದೆ ಅವರ ಕೆಟ್ಟರೂಢಿಯನ್ನು ಮಾತ್ರ ವಿರೋಧಿಸುವ ಸಂಯಮವನ್ನು ಇದು ಕಲಿಸುವುದಲ್ಲವೇ ?

ಪ್ರೊ|| ಎಮ್. ಆರ್. ನಾಗರಾಜು
ಎಫ್. ೩, ಎಸ್.ಎಫ್.ಎಸ್. ನಿವಾಸಗಳು
೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು - ೬೪

HOSATHU Kannada Monthly / December 2005 Rs. 12 RNI Regn. No. KARKAN/1999/614 REGD. CPMG / KA / BGE – 7 / 2003-05
Licenced to post without prepayment. Licence No. WPP-14 Posted at Bangalore PSO on the 28th/3rd of every month



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna